# ಗೀತಾಮಾತೆ



ಮೋ. ಕ. ಗಾಂಧೀ

೧೯೫೮

ಗಾಂಧೀ ಸ್ಮಾರಕ ನಿಧಿ



ಧ್ಯಾನಾಸಕ್ತ ಗಾಂಧೀ

(ಶ್ರೀ ಡಿ ಆರ್ ಡಿ ವಾಡಿಯಾ ಅನುಮತಿಯಿಂದ)

ಗಾಂಧೀ ಗ್ರಂಥ ಮಾಲೆ – ೩

# ಗೀತಾಮಾತೆ



ಮೋ. ಕ. ಗಾಂಧೀ



ಅನುವಾದಕರು

ಸಿದ್ಧವನಹಳ್ಳಿ ಕೃಷ್ಣಶರ್ಮ

೧೯೫೮

ಗಾಂಧೀ ಸ್ಮಾರಕ ನಿಧಿ ಸಾಹಿತ್ಯ ಭಂಡಾರ
ಹುಬ್ಬಳ್ಳಿ.

ಈ ಗ್ರಂಥಮಾಲೆಯಲ್ಲಿ ಮೊದಲನೆಯ ಮುದ್ರಣ : ೧೯೫೮

ಪ್ರಕಾಶಕರು

**ಎಂ. ಯಾಮುನಾಚಾರ್ಯ**

ಪ್ರಧಾನ ಸಂಪಾದಕರು,

ಕನ್ನಡದಲ್ಲಿ ಗಾಂಧೀ ಗ್ರಂಥಮಾಲೆಯ ಸಂಪಾದಕ ಮಂಡಲಿ,

೧೬೨, ರಮಾವಿಲಾಸ ರಸ್ತೆ, ಮೈಸೂರು

(ನವಜೀವನ ಟ್ರಸ್ಟ್, ನವಜೀವನ ಪೋಸ್ಟ್, ಅಹಮದಾಬಾದ್ – ೧೪

ಇವರ ಅನುಮತಿಯಿಂದ ಮತ್ತು ಸಸ್ತಾ ಸಾಹಿತ್ಯ ಮಂಡಲದ 'ಗೀತಾಮಾತಾ' ಗ್ರಂಥದ

ಆಧಾರದ ಮೇಲೆ)

ಬೆಲೆ

**ಸಾಧಾರಣ ಪ್ರತಿ : ರೂ. [illegible]**

ಮುದ್ರಕರು

**ಆರ್. ಎನ್. ಹಬ್ಬು**

ಉಷಾ ಪ್ರೆಸ್, ಓಲ್ಡ್ ಪೋಸ್ಟ್ ಆಫೀಸ್ ರೋಡ್, ಮೈಸೂರು

# ಕನ್ನಡದಲ್ಲಿ ಗಾಂಧೀ ಗ್ರಂಥಗಳು

ವಿಶ್ವದ ಎಲ್ಲ ಭಾಷೆಗಳಲ್ಲಿಯೂ ಗಾಂಧೀಜಿಯವರ ವಿಚಾರಗಳ ಪ್ರಚಾರ ಮಾಡುವುದು ಗಾಂಧೀ ಸ್ಮಾರಕ ನಿಧಿಯ ಮುಖ್ಯ ಉದ್ದೇಶ್ಯಗಳಲ್ಲಿ ಒಂದು ಕರ್ನಾಟಕಕ್ಕೆ ಹಾಗೂ ಕನ್ನಡಿಗರಿಗೆ ಅತೀವ ಮಹತ್ವದ ಗಾಂಧೀ ವಿಚಾರಗಳ ಪರಿಚಯ ಮಾಡಿಕೊಡುವುದು ಈಗ ಕೈಗೊಂಡ ಈ ಯೋಜನೆಯ ಗುರಿಯಾಗಿದೆ

ಕರ್ನಾಟಕದ ಹಲವಾರು ಸಾಹಿತಿಗಳು, ಲೇಖಕರು, ಗಾಂಧೀಜಿಯವರ ಬರಹಗಳಲ್ಲಿ ಕೆಲವನ್ನು ಆಗಲೇ ಅನುವಾದಿಸಿ ಪ್ರಕಟಿಸಿದ್ದಾರೆ ಸಾಧ್ಯವಾದಷ್ಟು ಈಗಲೇ ಪ್ರಕಟವಾಗಿರುವ ಅನುವಾದಗಳನ್ನು ಆವಶ್ಯಕವಿದ್ದಲ್ಲಿ ಪರಿಷ್ಕರಿಸಿ ಅವುಗಳನ್ನು ಈ ಗಾಂಧೀ ಗ್ರಂಥಮಾಲೆಯಲ್ಲಿ ಪೋಣಿಸುವ ಪ್ರಯತ್ನ ನಡೆದಿದೆ ಗಾಂಧೀಜಿಯವರ ಮುಖ್ಯ ಹಾಗೂ ವಿವಿಧ ವಿಚಾರಗಳ ಪರಿಚಯವನ್ನು ಮಾಡಿಕೊಡಲು ಸುಮಾರು ಇಪ್ಪತ್ತು ಸಂಪುಟಗಳು ಸಿದ್ಧವಾಗುತ್ತಲಿವೆ

ಗಾಂಧೀಜಿಯವರ ಎಲ್ಲ ಬರಹಗಳನ್ನೂ ಸಂಪೂರ್ಣವಾಗಿ ಅನುವಾದಿಸುವುದು ನಮ್ಮ ಉದ್ದೇಶ್ಯವಲ್ಲ ಭಾರತ ಸರ್ಕಾರ ಆ ಕಾರ್ಯವನ್ನು ಕೈಗೊಂಡಿದೆ ಆದರೆ ಈ ನಮ್ಮ ಯೋಜನೆಯ ಉದ್ದೇಶ್ಯ ಗಾಂಧೀಜಿಯವರ ಪ್ರಧಾನವಾದ ಅಭಿಪ್ರಾಯಗಳನ್ನು ಸಮಂಜಸವಾದ ರೀತಿಯಲ್ಲಿ ಕೂಡಿಸಿ ಮುಖ್ಯವಾದ ಶೀರ್ಷಿಕೆಗಳ ಅಡಿಯಲ್ಲಿ ಅವನ್ನು ಅಳವಡಿಸಿ ಕನ್ನಡಿಸಿ ಪ್ರಕಟ ಮಾಡುವುದಾಗಿದೆ ಗಾಂಧೀಜೀ ಪುಸ್ತಕರೂಪವಾಗಿಯೇ ಬರೆದ ಗ್ರಂಥಗಳನ್ನು ಅವು ಇರುವಂತೆ ಅಥವಾ ಆವಶ್ಯಕವಾದರೆ ಸಂಗ್ರಹಿಸಿ ಅನುವಾದ ಮಾಡಲಾಗುತ್ತದೆ. ಮತ್ತೆ ಕೆಲವು ಗ್ರಂಥಗಳು ಗಾಂಧೀಜೀ ಅವರ ಅಭಿಪ್ರಾಯಗಳನ್ನು 'ಯಂಗ್ ಇಂಡಿಯಾ' ಮತ್ತು 'ಹರಿಜನ' ಪತ್ರಿಕೆಗಳಿಂದ ಆಯ್ದ ಲೇಖನಗಳ ಸಂಕಲನಗಳಾಗಿವೆ ಸಂಕಲನವು ಸ್ವಲ್ಪ ನಿಧಾನದ ಕೆಲಸ, ಕಷ್ಟವಾದ ಕೆಲಸವೂ ಹೌದು ಎಷ್ಟು ಪ್ರಯತ್ನ ಮಾಡಿದರೂ ವಿಷಯಪ್ರತಿಪಾದನೆಯ ಪುನರಾವರ್ತನೆಯನ್ನು ತಪ್ಪಿಸುವುದು ಕಷ್ಟ. ನಮ್ಮ ಅನುವಾದಕರು ಕರ್ನಾಟಕದ

ನುರಿತ ಸಾಹಿತಿಗಳು ಮತ್ತು ಗಾಂಧೀ ಮಾರ್ಗದಲ್ಲಿ ಶ್ರದ್ಧೆಯುಳ್ಳವರು ಆದಷ್ಟು ಸಮರ್ಪಕವಾಗಿ ಭಾಷಾಂತರ ಕೆಲಸವನ್ನು ಮಾಡುತ್ತಿದ್ದಾರೆ ಗಾಂಧೀಜಿಯವರ ಸರಳ ಮತ್ತು ರಸವತ್ತಾದ ಬರಹಗಳನ್ನು ಭಾಷಾಂತರಿಸುವುದು ಎಷ್ಟು ಕಷ್ಟವೆಂಬುದನ್ನು ಹೇಳಬೇಕಾಗಿಲ್ಲ ಆದರೂ ಈ ಅನುವಾದಕರು ಗಾಂಧೀಜಿಯವರ ಮನೋಗತವನ್ನು ಅರಿತವರು ಆಗಿರುವುದರಿಂದ ಈ ಅನುವಾದಗಳು ಜನಪ್ರಿಯವಾಗಬಲ್ಲವೆಂದು ಆಶಿಸಲಾಗಿದೆ

ಈ ಸಂಪಾದಕ ಸಮಿತಿಯಿಂದ ಪ್ರಕಟಿಸಲ್ಪಡುವ ಗ್ರಂಥಗಳು ಬಹಳ ಸುಲಭ ಬೆಲೆಗೆ ಪಾಠಕರ ಕೈಸೇರಬೇಕೆಂಬ ಉದ್ದೇಶ್ಯದಿಂದ ಸಾಮಾನ್ಯ ಪ್ರತಿಯ ಬೆಲೆ ಅತಿ ಕಡಮೆ ಇಡಲಾಗಿದೆ ಇದರೊಡನೆ ಉತ್ತಮ ಪ್ರತಿಯೂ ಸಹ ಮಾರಾಟಕ್ಕೆ ಇರುವುದಲ್ಲದೆ ಅದರ ಬೆಲೆಯೂ ಕೂಡ ಬಹಳ ಹೆಚ್ಚು ಇಡಲಾಗಿಲ್ಲ

ಈ ಗ್ರಂಥಮಾಲೆ ಕನ್ನಡನಾಡಿನ ಜನಕ್ಕೆ ಗಾಂಧೀಸಾಹಿತ್ಯವನ್ನು ಒದಗಿಸಿ ಕೊಡುವ ಕೆಲಸದಲ್ಲಿ ಕೃತಕೃತ್ಯತೆಯನ್ನು ಪಡೆಯಬಲ್ಲದೆಂದು ಭಾವಿಸಲಾಗಿದೆ ಗಾಂಧೀಜಿಯವರ ಆಧ್ಯಾತ್ಮಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಅಭಿಪ್ರಾಯಗಳು ಈ ಗ್ರಂಥಗಳ ಮೂಲಕ ಜನಸಾಮಾನ್ಯರಲ್ಲಿ ಹರಡಲಿ, ಸಕಲ ಜನರಿಗೆ ಸ್ಫೂರ್ತಿ ಕೊಟ್ಟು ನವಚೈತನ್ಯವನ್ನು ತುಂಬಲಿ ಎಂದು ಹಾರೈಸಿ ಈ ಗ್ರಂಥಗಳನ್ನು ಜನತಾಜನಾರ್ದನನಿಗೆ ಅರ್ಪಿಸುತಿರುವೆ

ಗಾಂಧೀ ಸ್ಮಾರಕ ನಿಧಿ
ರಾಜಘಾಟ, ದಿಲ್ಲಿ
೭–೫–೧೯೫೮

ರಂಗನಾಥ ದಿವಾಕರ
ಅಧ್ಯಕ್ಷರು

# ನಿವೇದನ

## (ಗಾಂಧೀಜಿಯ ಮಾತುಗಳಲ್ಲಿ)

ಅನುವಾದಕರು . ‘ **ಕುವೆಂಪು** ’

ನಾನೊಬ್ಬ ಸತ್ಯಶೋಧಕ. ಅದಕ್ಕೊಂದು ಮಾರ್ಗವನ್ನು ಕಂಡು ಕೊಂಡಿದ್ದೇನೆಂದು ನನ್ನ ವಿಶ್ವಾಸ ಅದರ ಸಿದ್ಧಿಗಾಗಿ ನಾನು ನಿರಂತರ ಪ್ರಯತ್ನಶೀಲನಾಗಿದ್ದೇನೆಂದೂ ನನ್ನ ನಂಬಿಕೆ ಅದು ಇನ್ನೂ ನನಗೆ ಸಿದ್ಧಿಸಿಲ್ಲ ಎಂಬುದನ್ನು ಒಪ್ಪಿಕೊಳ್ಳುತ್ತೇನೆ ಸತ್ಯದ ಸಮ್ಯಕ್‌ದರ್ಶನವೇ ಆತ್ಮ ಸಾಕ್ಷಾತ್ಕಾರ, ಅದೇ ಜೀವನದ ಅಂತಿಮ ಗುರಿ ಅಂದರೆ ಪರಿಪೂರ್ಣತೆಯ ಸಿದ್ಧಿ ನನ್ನ ನ್ಯೂನತೆಗಳು ಎಷ್ಟೆಂಬುದನ್ನು ನಾನು ವ್ಯಸನದಿಂದ ಅರಿತಿದ್ದೇನೆ ಆ ಅರಿವು ನನಗೆ ದುಃಖ ತರುವಷ್ಟೂ ಇದೆ ಆ ಅರಿವೇ ನನ್ನ ಶಕ್ತಿಯ ಸರ್ವಮೂಲ, ಏಕೆಂದರೆ ತನ್ನ ದೌರ್ಬಲ್ಯಗಳ ಅರಿವಾಗುವುದೇ ಮಾನವನಿಗೆ ಒಂದು ಅಪೂರ್ವ ಬಲ ೧

ಮನಸ್ಸಿನಲ್ಲಿ, ಮಾತಿನಲ್ಲಿ, ಕೆಲಸದಲ್ಲಿ ಅತ್ಯಂತ ಋಜುವಾಗಿ, ಅತ್ಯಂತ ಸತ್ಯವಾಗಿ, ಅತ್ಯಂತ ಅಹಿಂಸಕವಾಗಿ ನಡೆಯಬೇಕೆಂದು ಹೋರಾಡುತ್ತಿದ್ದರೂ, ನನಗೆ ಸರಿಯೆಂದು ತಿಳಿದ ಗುರಿಯನ್ನು ಮುಟ್ಟಲು ಹಂಬಲಿಸಿ ಹೆಣಗುತ್ತ ಸತತವೂ ಸೋಲುತ್ತಿರುವ ನಾನು ಒಂದು ಸಾಮಾನ್ಯ ಚೇತನ ಆ ಯಾತ್ರೆ ಯೇನೋ ಕ್ಲೇಶಕರವೇ, ಆದರೆ ಆ ಯಾತನೆಯಲ್ಲಿಯೂ ನನಗೆ ಒಂದು ಆನಂದವಿದೆ ಏರುವ ಒಂದೊಂದು ಹೆಜ್ಜೆಯೂ ನನ್ನನ್ನು ಬಲಿಷ್ಠನನ್ನಾಗಿ ಮಾಡಿ ಮುಂದಣ ಹೆಜ್ಜೆಗೆ ಸಾಮರ್ಥ್ಯವೀಯುತ್ತದೆ ೨

ದಾರಿ ನನಗೆ ಗೊತ್ತು ಅದು ನೇರ ಮತ್ತು ಇಕ್ಕಟ್ಟು—ಕತ್ತಿಯ ಅಲಗಿನಂತೆ ಅದರ ಮೇಲೆ ನಡೆಯುವುದೆಂದರೆ ನನಗೆ ಉಲ್ಲಾಸ. ಜಾರಿ ದಾಗಲೆಲ್ಲ ಕಣ್ಣೀರಿಡುತ್ತೇನೆ ‘ ನ ಮೇ ಭಕ್ತಃ ಪ್ರಣಶ್ಯತಿ ’ ಎಂದು ದೇವರ ವಚನವಿದೆ ಆ ವಚನದಲ್ಲಿ ನನಗೆ ದೃಢವಾದ ನಂಬಿಕೆಯಿದೆ. ಆದ್ದರಿಂದ

---

೧. ಯಂಗ್ ಇಂಡಿಯಾ, ೧೭–೧೧–೧೯೨೧

೨. ಅದೇ, ೯–೪–೧೯೨೬

ನನ್ನ ದೌರ್ಬಲ್ಯದ ಪರಿಣಾಮವಾಗಿ ಸಾವಿರ ಬಾರಿ ಸೋತರೂ ನಾನೆಂದಿಗೂ ಶ್ರದ್ಧೆಗೆಡುವುದಿಲ್ಲ ಪ್ರತಿಯಾಗಿ, ಇಂದಲ್ಲ ನಾಳೆ, ಸ್ವತಃ ಸಿದ್ಧವಾಗಿ ಕೈಗೂಡಲೇಬೇಕಾಗಿರುವ ಇಂದ್ರಿಯಜಯ ಲಭಿಸಿದಂದು, ಬೆಳಕನ್ನು ಕಂಡೇ ಕಾಣುತ್ತೇನೆಂಬುದು ನನ್ನ ವಿಶ್ವಾಸ ೧

ಏಕೆಂದರೆ ಸಾವಿನ ನಡುವೆ ಬಾಳು, ಸುಳ್ಳಿನ ನಡುವೆ ಸತ್ಯ, ತಮಸ್ಸಿನ ನಡುವೆ ಜ್ಯೋತಿ ಚಿರಸ್ಥಾಯಿಯಾಗಿರುವುದನ್ನು ನಾನು ಕಾಣುತ್ತಿದ್ದೇನೆ, ಭಗವಂತನೇ ಪ್ರಾಣಶಕ್ತಿ, ಅವನೇ ಸತ್ಯ ಮತ್ತು ಜ್ಯೋತಿ ಎಂಬುದು ನನ್ನ ವಿಶ್ವಾಸ. ಆತ ಪ್ರೇಮಸ್ವರೂಪಿ , ಆತನೆ ಪರಮಶ್ರೇಯಸ್ಸು.೨

ಬಾಲ್ಯದಿಂದಲೂ ನಾನೊಬ್ಬ ಸತ್ಯಾರಾಧಕ ಎಂಬುದು ನನ್ನ ವಿಶ್ವಾಸ ಅದು ನನ್ನ ಅತ್ಯಂತ ಸಹಜಪ್ರವೃತ್ತಿ. ಉಪಾಸನಾಪೂರ್ವಕವಾದ ಶೋಧನೆ ಯಿಂದ ಭಗವಂತನೇ ಸತ್ಯ ಎಂಬ ರೂಢಿಯ ನಂಬಿಕೆಯ ಬದಲು ಸತ್ಯವೇ ಭಗವಂತ ಎಂಬ ಸೂತ್ರ ನನಗೆ ಸ್ಫುರಣವಾಯಿತು ಭಗವಂತನನ್ನು ಪ್ರತ್ಯಕ್ಷವೋ ಎಂಬಂತೆ ಕಾಣಲು ಈ ಸೂತ್ರದಿಂದ ನನಗೆ ಸಾಧ್ಯವಾಗಿದೆ ನನ್ನ ಚೇತನಸಮಸ್ತವನ್ನೂ ಆತ ವ್ಯಾಪಿಸಿದ್ದಾನೆ, ಎಂಬುದು ನನ್ನ ಅನುಭವ ೩

ಭಗವಂತನ ಪ್ರತ್ಯಕ್ಷ ದರ್ಶನದ ಹಂಬಲ ನನ್ನದು ಭಗವಂತನೇ ಸತ್ಯ ಎಂಬುದನ್ನು ನಾನು ಬಲ್ಲೆ ನನ್ನ ಪಾಲಿಗೆ ಭಗವಂತನನ್ನು ಕಾಣಲು ಇರುವ ಒಂದೇ ಒಂದು ನಿಶ್ಚಿತ ಮಾರ್ಗವೆಂದರೆ ಅಹಿಂಸೆ, ಪ್ರೇಮ ೪

ಅಹಿಂಸೆ ನನ್ನ ದೇವರು ಸತ್ಯ ನನ್ನ ದೇವರು ಅಹಿಂಸೆಯ ಸಾಧನೆ ಗಾಗಿ ನಾನು ಶ್ರಮಿಸುವಾಗ ಸತ್ಯ ಹೇಳುತ್ತದೆ ' ನನ್ನ ಮೂಲಕವೇ ಅದರ ಸಿದ್ಧಿ ' ಎಂದು ಸತ್ಯದ ಸಾಧನೆಗಾಗಿ ನಾನು ಶ್ರಮಿಸುವಾಗ ಅಹಿಂಸೆ ಹೇಳುತ್ತದೆ : ' ನನ್ನ ಮೂಲಕವೇ ಅದರ ಸಿದ್ಧಿ '೫

---

೧ ಯಂಗ್ ಇಂಡಿಯಾ, ೧೬–೬–೧೯೨೬

೨. ಅದೇ, ೧೧–೧೧–೧೯೨೮

೩. ಹರಿಜನ, ೯–೮–೧೯೪೨

೪. ಆತ್ಮಕಥೆ

೫. ಯಂಗ್ ಇಂಡಿಯಾ, ೪–೬–೧೯೨೫

ಭಾರತದ ಸ್ವಾತಂತ್ರ್ಯಸಾಧನೆಯೇ ನನ್ನ ಜೀವಿತೋದ್ದೇಶ್ಯ. ಅದಕ್ಕಾಗಿ ನಾನು ಸಾಯಲು ಕೂಡ ಸಿದ್ಧ ಏಕೆಂದರೆ ಭಾರತದ ಸ್ವಾತಂತ್ರ್ಯ ಸತ್ಯದ ಒಂದು ಅಂಶ ಬಂಧಮುಕ್ತವಾದಾಗಲೆ ಭರತಖಂಡ ಸತ್ಯಸ್ವರೂಪನಾದ ಭಗವಂತನನ್ನು ಪೂಜಿಸಬಲ್ಲದು, ಭಾರತದ ಬಿಡುಗಡೆಗಾಗಿ ನಾನು ದುಡಿಯುತ್ತಿದ್ದೇನೆ, ಏಕೆಂದರೆ ಭಾರತದಲ್ಲಿ ಬದುಕಿ ಅದರ ಸಂಸ್ಕೃತಿಯನ್ನು ಪಡೆದಿರುವುದರಿಂದ ಅದರ ಸೇವೆಗೆ ನಾನು ಅತ್ಯಂತ ಅರ್ಹ ಎಂಬುದನ್ನು, ನನ್ನ ಸೇವೆಯ ಮೊದಲ ಹಕ್ಕು ಭಾರತದ್ದು ಎಂಬುದನ್ನು ನನ್ನ ಸ್ವದೇಶಿ ನನಗೆ ಕಲಿಸಿದೆ ನನ್ನ ದೇಶಭಕ್ತಿ ಭಾರತಕ್ಕೆ ಮಾತ್ರ ಮಿಾಸಲಾದುದಲ್ಲ ಬೇರೆ ಯಾವ ರಾಷ್ಟ್ರದ ಹಿತಕ್ಕೂ ಧಕ್ಕೆಯೊದಗಬಾರದು ಎಂಬುದಷ್ಟೇ ಅಲ್ಲ, ಸಕಲ ರಾಷ್ಟ್ರಗಳಿಗೂ, ಆ ಪದದ ಸಂಪೂರ್ಣಾರ್ಥದಲ್ಲಿ, ಸರ್ವಲಾಭ ಒದಗಬೇಕು ಎಂಬುದೇ ನನ್ನ ಮಾತಿನ ಆಶಯ ನಾನು ಸಂಕಲ್ಪಿಸಿರುವ ಭಾರತದ ಸ್ವಾತಂತ್ರ್ಯ ಎಂದೆಂದೂ ಲೋಕಹಿತಕಂಟಕವಾಗಲಾರದು ೧

ವಿಶ್ವಾತ್ಮಕವೂ ವಿಶ್ವವ್ಯಾಪಿಯೂ ಆದ ಸತ್ಯವನ್ನು ಸಾಕ್ಷಾತ್ತಾಗಿ ಸಂದರ್ಶಿಸಬೇಕಾದರೆ ಸೃಷ್ಟಿಯಲ್ಲಿ ಕ್ಷುದ್ರತಮವಾದುದನ್ನೂ ತನ್ನಂತೆ ಪ್ರೀತಿಸುವುದು ಸಾಧ್ಯವಾಗಲೇಬೇಕು ಆ ಹಂಬಲವನ್ನು ತುಂಬಿಕೊಂಡವನು ಜೀವನದ ಯಾವ ಕ್ಷೇತ್ರದಿಂದಲೂ ವಿಮುಖನಾಗಲು ಸಾಧ್ಯವಿಲ್ಲ ನನ್ನ ಸತ್ಯಶ್ರದ್ಧೆ ನನ್ನನ್ನು ರಾಜಕೀಯ ಕ್ಷೇತ್ರಕ್ಕೆ ಎಳೆದು ತಂದಿರುವುದು ಈ ಕಾರಣದಿಂದಲೇ. ಅಧ್ಯಾತ್ಮಕ್ಕೂ ರಾಜಕೀಯಕ್ಕೂ ಏನೂ ಸಂಬಂಧವಿಲ್ಲ ಎನ್ನುವವರಿಗೆ ಅಧ್ಯಾತ್ಮ ಎಂದರೇನು ಎಂಬುದೇ ತಿಳಿಯದೆಂದು ಸ್ವಲ್ಪವೂ ಅಳುಕದೆ, ಆದರೆ ವಿನೀತನಾಗಿ ನಾನು ಹೇಳಬಲ್ಲೆ ೨

ಆತ್ಮಶ್ರೀವಿದೂರವಾದ ರಾಜಕೀಯ ನನ್ನ ಪಾಲಿಗೆ ಸರ್ವಥಾ ತ್ಯಾಜ್ಯವಾದ ಕಲಂಕ ರಾಜಕೀಯ ರಾಷ್ಟ್ರಗಳನ್ನು ಕುರಿತದ್ದು ಯಾವುದು ರಾಷ್ಟ್ರಗಳ ಹಿತವನ್ನು ಕುರಿತದ್ದೊ ಅದು ಅಧ್ಯಾತ್ಮಪ್ರವೃತ್ತಿಯುಳ್ಳ ವ್ಯಕ್ತಿಯ, ಎಂದರೆ ಸತ್ಯದ ಮತ್ತು ಭಗವಂತನ ಅನ್ವೇಷಣೆ ಸಾಧನೆಯ ಅಂಗಗಳಲ್ಲಿ

೧. ಆತ್ಮಕಥೆ
೨. ಅದೇ

ಒಂದಾಗಿರುವುದು ಅನಿವಾರ್ಯ ನನಗಾದರೊ ಭಗವಂತನೆಂದರೂ ಒಂದೇ ಭಗವಂತ ಅಸತ್ಯದ ಮೂರ್ತಿಯೆಂದೂ ಹಿಂಸೆಯ ಮೂರ್ತಿ ಎಂದೂ ಯಾರಾದರೂ ಸ್ಥಿರವಡಿಸಿದರೆ ಅಂತಹ ಭಗವಂತನನ್ನು ಪೂಜಿಸಲು ನಾನು ನಿರಾಕರಿಸುತ್ತೇನೆ ರಾಜಕೀಯದಲ್ಲಿಯೂ ಭಗವಂತನ ರಾಜ್ಯ ಸ್ಥಾಪಿತವಾಗಬೇಕಾಗಿದೆ ನನ್ನ ಬದುಕಿನ ಅತ್ಯಂತ ಆತ್ಮೀಯ ವಸ್ತುಗಳಿಂದ ರಾಜಕೀಯವನ್ನು ಬೇರ್ಪಡಿಸಲಾರೆ ಕಾರಣ ಇಷ್ಟೆ ನನ್ನ ರಾಜಕೀಯ ಕಲುಷಿತವಲ್ಲ, ಈ ಎಲ್ಲವೂ ಸತ್ಯ-ಅಹಿಂಸೆಗಳೊಂದಿಗೆ ಜಟಿಲವಾಗಿ ಹೆಣೆದುಕೊಂಡಿವೆ ಸತ್ಯವನ್ನು ಬಲಿಗೊಟ್ಟು ಸ್ವಾತಂತ್ರ್ಯವನ್ನು ಪಡೆಯುವುದಕ್ಕಿಂತ ಭಾರತ ವಿನಾಶಹೊಂದುವುದೇ ಹೆಚ್ಚು ಲೇಸೆಂಬುದು ನನ್ನ ಮತ ರಾಜಕೀಯ ಸಂಪರ್ಕವಿಲ್ಲದೆ ಸಮಾಜಸೇವೆಯಂಥ ಕೆಲಸವನ್ನು ಕೂಡ ನಡೆಸುವುದು ಅಸಾಧ್ಯವೆಂಬುದು ನನ್ನ ಅನುಭವಕ್ಕೆ ಬಂದುದರಿಂದ ರಾಜಕೀಯ ಕ್ಷೇತ್ರವನ್ನು ನಾನು ಪ್ರವೇಶಿಸುವುದು ಅನಿವಾರ್ಯವಾಯಿತು. ಸಾಮಾಜಿಕ ಮತ್ತು ನೈತಿಕ ದೃಷ್ಟಿಯಿಂದ ರಾಜಕೀಯ ಕಾರ್ಯವು ಪರಿಗಣಿತವಾಗಲೇಬೇಕು

ಮಾನವನ ಮನಸ್ಸಾಗಲಿ ಸಮಾಜವಾಗಲಿ ರಾಜಕೀಯ, ಸಾಮಾಜಿಕ, ಧಾರ್ಮಿಕ ಎಂಬ ಪ್ರತ್ಯೇಕ ವಿಭಾಗಗಳಾಗಿ ವಿಂಗಡಣೆಯಾಗಿಲ್ಲ ಎಂಬುದು ನನ್ನ ವಿಶ್ವಾಸ ಅವುಗಳ ನಡುವೆ ಪ್ರತಿಕ್ರಿಯೆಗಳು ಇದ್ದೇ ತೀರುತ್ತವೆ ೧

ಆತ್ಮಶ್ರೀನಿಯಮಕ್ಕೆ ತನ್ನದೇ ಆದ ಒಂದು ಕ್ಷೇತ್ರವಿದೆ ಎಂಬುದನ್ನು ನಾನು ನಂಬುವುದಿಲ್ಲ ಬದಲು, ಅದು ಜೀವನದ ಸಾಮಾನ್ಯ ವ್ಯಾಪಾರಗಳ ಮೂಲಕವಾಗಿ ಮಾತ್ರವೇ ವ್ಯಕ್ತಗೊಳ್ಳುತ್ತದೆ ಹೀಗೆ ಅದು ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ವಲಯಗಳ ಮೇಲೂ ಪರಿಣಾಮವನ್ನು ಉಂಟುಮಾಡುತ್ತದೆ ೨

ಮಾನವಜೀವಿತದ ಪರಮೋದ್ದೇಶ್ಯ ಭಗವತ್‌ಸಾಕ್ಷಾತ್ಕಾರ ಅವನ ಕರ್ಮಕ್ರಿಯೆಗಳೇನೆ ಇರಲಿ, ಸಾಮಾಜಿಕ, ರಾಜಕೀಯ, ಧಾರ್ಮಿಕ ಎಲ್ಲವೂ ಈ ಈಶ್ವರಸಾಕ್ಷಾತ್ಕಾರದ ಪರಮೋದ್ದೇಶ್ಯದಿಂದಲೇ ನಿಯಂತ್ರಿತವಾಗಿರಬೇಕು.

---

೧. ಯಂಗ್ ಇಂಡಿಯಾ, ೨-೩-೧೯೨೨

೨. ಅದೇ, ೩-೯-೧೯೨೪

ಮಾನವಸೇವೆಯೆ ಈ ಸಾಧನೆಯ ಪ್ರಪ್ರಥಮ ಅನಿವಾರ್ಯಾಂಗವಾಗುತ್ತದೆ ಏಕೆಂದರೆ ಇಷ್ಟೆ ಈಶ್ವರದರ್ಶನಕ್ಕಿರುವ ಏಕೈಕ ಮಾರ್ಗವೆಂದರೆ ಆತನ ಸೃಷ್ಟಿಯಲ್ಲಿಯೆ ಆತನನ್ನು ಕಂಡು ಅದರಲ್ಲಿಯೆ ಒಂದಾಗಿರುವುದು ಸರ್ವರ ಸೇವೆಯೊಂದೇ ಇದಕ್ಕೆ ಸಾಧನ ನಾನು ಈ ಸರ್ವದ ಒಂದು ಅಂಶ. ಇತರರನ್ನು ಉಳಿದು ನಾನೊಬ್ಬನೇ ಆತನನ್ನು ಪಡೆಯಲಾರೆ ೧

ಈಶಸೇವೆ ಅರ್ಥಾತ್ ಮಾನವಸೇವೆಯೇ ನನ್ನ ಧರ್ಮ, ನಿಷ್ಕಾಮ ಸೇವೆಯಿಂದ ಸೇವೆ ಸಲ್ಲಿಸುವುದೆಂದರೆ ಇತರರಿಗೆ ನಾವು ಉಪಕಾರಮಾಡಿದ್ದಕ್ಕಿಂತ ನಮ್ಮ ಸಾಲವನ್ನು ನಾವು ತೀರಿಸಿಕೊಂಡು ಕೃತಕೃತ್ಯರಾದಂತೆ ನಮ್ಮ ಹೊಣೆಯನ್ನು ನಾವೇ ಇಳಿಸಿಕೊಂಡು ನಮ್ಮ ಕರ್ತವ್ಯವನ್ನು ಪರಿಪಾಲಿಸುವುದರ ಮೂಲಕ ನಮಗೇ ನಾವು ಉಪಕಾರಮಾಡಿಕೊಳ್ಳುತ್ತೇವೆ ನಮ್ಮಲ್ಲಿ ಒಳ್ಳೆಯವರೆನಿಸಿಕೊಂಡವರು ಮಾತ್ರವಲ್ಲ, ನಾವೆಲ್ಲರೂ ನಮ್ಮ ಸರ್ವ ಸಂಪತ್ತನ್ನೂ ಸರ್ವರಿಗಾಗಿ ವಿನಿಯೋಗಿಸಲು ಬದ್ಧರು ಮೃಗಗಳಿಗಿಂತ ಮಾನವ ಭಿನ್ನ ಎಂದು ತೋರುವುದು ತ್ಯಾಗಧರ್ಮ ಒಂದರಿಂದಲೇ ೨

ಮನುಷ್ಯ ಎಷ್ಟರಮಟ್ಟಿಗೆ ಪರಾರ್ಥಕ್ಕಾಗಿ ಶ್ರಮಿಸುತ್ತಾನೆಯೊ ಅಷ್ಟರ ಮಟ್ಟಿಗೆ ಅವನು ದೊಡ್ಡವನಾಗುತ್ತಾನೆ ೩

ನಾನು ಸೋದರಭಾವ ಅಥವಾ ತಾದಾತ್ಮ್ಯವನ್ನು ಸಾಧಿಸಲೆಳಸುವುದು ಕೇವಲ ಮಾನವಜೀವಿಗಳೊಂದಿಗೆ ಮಾತ್ರವಲ್ಲ, ಸಮಸ್ತ ಜೀವರಾಶಿಯೊಂದಿಗೆ, ನೆಲದ ಮೇಲೆ ಹರಿದಾಡುವ ಕ್ರಿಮಿಕೀಟಗಳೊಂದಿಗೆ ಕೂಡ ನಿಮ್ಮನ್ನು ಚಕಿತಗೊಳಿಸಬಹುದಾದ ಈ ಬಯಕೆಗೆ—ನೆಲದ ಮೇಲೆ ಹರಿದಾಡುವ ಕ್ರಿಮಿಕೀಟಗಳೊಂದಿಗೂ ತಾದಾತ್ಮ್ಯವನ್ನು ಸಾಧಿಸಬೇಕೆನ್ನುವ ಬಯಕೆಗೆ—ಕಾರಣವಿಷ್ಟೆ, ನಾವೆಲ್ಲರೂ ಒಬ್ಬನೇ ಭಗವಂತನಿಂದ ಬಂದವರು ಎಂದು ಹೇಳುತ್ತೇವಲ್ಲ, ಹಾಗಿರುವುದರಿಂದ ಯಾವುದೇ ರೂಪದಲ್ಲಿ ಗೋಚರಿಸಿದರೂ ಮೂಲತಃ ಎಲ್ಲ ಜೀವವೂ ಒಂದೇ ೪

---

೧ ಹರಿಜನ, ೨೯–೮–೧೯೩೬

೨ ಮಂಗಳ ಪ್ರಭಾತ

೩. ಯಂಗ್ ಇಂಡಿಯಾ, ೪–೧೨–೨೪

೪. ಹರಿಜನ, ೪–೪–೧೯೨೯

ಭಗವಂತನ ಕೇವಲ ಅಖಂಡತೆಯನ್ನು ನಾನು ನಂಬುತ್ತೇನೆ, ಆದುದರಿಂದಲೇ ಜನತೆಯ ಅಖಂಡತೆಯಲ್ಲೂ ನನಗೆ ಶ್ರದ್ಧೆಯಿರುವುದು ಒಬ್ಬನು ಮಾತ್ರ ಅಧ್ಯಾತ್ಮಲಾಭ ಪಡೆದು ಅವನ ಸುತ್ತಣ ಜನರು ತೊಳಲುತ್ತಾರೆ ಎಂಬುದನ್ನು ನಾನು ನಂಬುವುದಿಲ್ಲ ಅದ್ವೈತದಲ್ಲಿ ನನಗೆ ಶ್ರದ್ಧೆಯಿದೆ ತತ್ತ್ವಶಃ ಮಾನವನ ಅಖಂಡತೆಯಲ್ಲಿ, ಹಾಗೆ ನೋಡಿದರೆ ಜೀವಸಮಸ್ತದ ಅಖಂಡತೆಯಲ್ಲಿ ನನಗೆ ವಿಶ್ವಾಸವುಂಟು ಆದುದರಿಂದಲೆ ಒಂದು ವ್ಯಕ್ತಿಗೆ ಅಧ್ಯಾತ್ಮಲಾಭವಾದರೆ ಇಡಿಯ ವಿಶ್ವಕ್ಕೆ ಆ ಲಾಭ ಒದಗುತ್ತದೆ ಒಂದು ವ್ಯಕ್ತಿ ಪತನ ಹೊಂದಿದರೆ ಅಷ್ಟರ ಮಟ್ಟಿಗೆ ಇಡಿಯ ವಿಶ್ವದ ಪತನವೇ ಆಗುತ್ತದೆ ಎಂದು ನಾನು ಭಾವಿಸಿರುವುದು ೧

ಈ ಪೃಥ್ವಿಯ ನಶ್ವರ ಸಾಮ್ರಾಜ್ಯದ ಬಯಕೆ ನನಗಿಲ್ಲ ಮೋಕ್ಷರೂಪವಾದ ಅಮರ ಸಾಮ್ರಾಜ್ಯಕ್ಕಾಗಿ ನಾನು ಶ್ರಮಿಸುತ್ತಿದ್ದೇನೆ ನನ್ನ ಧ್ಯೇಯ ಸಾಧನೆಗಾಗಿ ನಾನು ಗುಹನಿವಾಸಿಯಾಗಬೇಕಾಗಿಲ್ಲ ೨

ದೇಶದ, ತನ್ಮೂಲಕ ಮಾನವತೆಯ ಸೇವೆಗಾಗಿ ಎಡೆಬಿಡದೆ ದುಡಿಯುವುದೇ ನನ್ನ ಮೋಕ್ಷಪಥ ಜೀವಸಮಸ್ತದೊಂದಿಗೆ ಅನನ್ಯತೆಯನ್ನು ಸಾಧಿಸುವುದೇ ನನ್ನ ಬಯಕೆ ೩

ಯಾವ ನೂತನ ಸಿದ್ಧಾಂತಗಳನ್ನೂ ನಾನು ಮಂಡಿಸಿಲ್ಲ ಅದರ ಬದಲು ಪುರಾತನ ಸಿದ್ಧಾಂತಗಳ ಪುನರ್ನಿರೂಪಣೆಯ ಪ್ರಯತ್ನವೆ ನನ್ನದು. ಅದು ಎಷ್ಟರ ಮಟ್ಟಿಗೆ ಸರಿಯಾಗಿ ಸಾಗಿದೆಯೋ ಹೇಳಲಾರೆ ಆದರೆ ಅದು ನನ್ನ ಪ್ರಾಮಾಣಿಕವಾದ ನಂಬಿಕೆಯನ್ನು ಪ್ರತಿನಿಧಿಸುತ್ತಿದೆ ೪

ಗಾಂಧೀಪಂಥ ಎಂಬುದೊಂದಿಲ್ಲ ನನ್ನ ತರುವಾಯ ಯಾವ ಪಂಥವನ್ನೂ ಕಟ್ಟಿಹೋಗುವ ಇಚ್ಛೆ ನನಗಿಲ್ಲ ನಾನು ಯಾವುದಾದರೂ ನೂತನ ತತ್ತ್ವದ ಅಥವಾ ಸಿದ್ಧಾಂತದ ಮೂಲಪುರುಷ ಎಂಬ ಭಾವನೆ ನನಗಿಲ್ಲ

---

೧. ಯಂಗ್ ಇಂಡಿಯಾ, ೪–೧೨–೧೯೨೪

೨ ಯಂಗ್ ಇಂಡಿಯಾ, ೩–೪–೧೯೩೪

೩ ಅದೇ, ೩–೪–೧೯೩೪

೪. ಯಂಗ್ ಇಂಡಿಯಾ, ೩–೧೨–೧೯೩೬

ನಿತ್ಯಸತ್ಯಗಳನ್ನು ನಮ್ಮ ದೈನಂದಿನ ಜೀವನ ಹಾಗೂ ಸಮಸ್ಯೆಗಳಿಗೆ ಅಳವಡಿಸಲು ನನ್ನ ರೀತಿಯಲ್ಲಿ ನಾನು ಸಾಧಾರಣನಂತೆ ಪ್ರಯತ್ನಿಸಿದ್ದೇನೆ, ಅಷ್ಟೆ. ಸತ್ಯ-ಅಹಿಂಸೆ—ಈ ಭಾವಗಳು ಪರ್ವತಗಳಷ್ಟೇ ಪುರಾತನವಾದವು ನನ್ನ ಶಕ್ತಿಗೆ ಸಾಧ್ಯವಾದಷ್ಟು ವಿಪುಲ ಪ್ರಮಾಣದಲ್ಲಿ ಅವೆರಡರಲ್ಲೂ ಪ್ರಯೋಗಗಳನ್ನು ನಡೆಸಿರುವುದಷ್ಟೆ ನನ್ನ ಕೆಲಸ ಹಾಗೆ ಮಾಡುವಾಗ ಕೆಲವು ಸಲ ತಪ್ಪು ಮಾಡಿದ್ದೇನೆ, ಆ ತಪ್ಪುಗಳಿಂದ ಪಾಠ ಕಲಿತಿದ್ದೇನೆ ಹೀಗೆ ಜೀವನ ಮತ್ತು ಅದರ ಸಮಸ್ಯೆಗಳು ಸತ್ಯ-ಅಹಿಂಸೆಗಳ ಅನುಷ್ಠಾನಗಳಲ್ಲಿ ನಡೆಸಿರುವ ಅನೇಕ ಪ್ರಯೋಗಗಳಾಗಿವೆ ೧

ನಿಮ್ಮ ಮುಂದೆ ಉದ್ಭವಿಸಿರುವ ಸಮಸ್ಯೆಗಳನ್ನು ನನ್ನ ಹೇಳಿಕೆಗೆ ಅನುಸಾರವಾಗಿ ಎದುರಿಸಬೇಕೆಂಬುದೇ ನನ್ನ ಇಚ್ಛೆ ಹೀಗೆ ಸತ್ಯ-ಅಹಿಂಸೆಗಳಲ್ಲಿ ನನ್ನ ಶ್ರದ್ಧೆ ವರ್ಧಿಸುತ್ತಲೇ ಇದೆ ನನ್ನ ಜೀವನದಲ್ಲಿ ಅವುಗಳನ್ನು ಅನುಸರಿಸುತ್ತ ಹೋದಂತೆ ನಾನು ಕೂಡ ಪ್ರತಿಕ್ಷಣವೂ ಬೆಳೆಯುತ್ತಲೇ ಇದ್ದೇನೆ ಅವುಗಳಲ್ಲಿ ನನಗೆ ಹೊಸ ಅರ್ಥ ಸ್ಫುರಿಸುತ್ತಿದೆ. ದಿನದಿನವೂ ಅವುಗಳನ್ನು ಹೊಸ ಹೊಸ ಬೆಳಕಿನಲ್ಲಿ ಕಂಡು ಹೊಸ ಹೊಸ ಅರ್ಥಗಳನ್ನೂ ಅರಿಯುತ್ತಿದ್ದೇನೆ ನನ್ನ ಜತೆಜತೆಗೆ ನೀವೂ ಕೂಡ ಬೆಳೆಯಬೇಕು ನನ್ನ ಅನಂತರ ಏನಾಗುತ್ತದೆ ಎಂಬುದನ್ನು ತಿಳಿಯುವ ಚಿಂತೆ ನನಗಿರಕೂಡದು ಆದುದರಿಂದ ನನ್ನನ್ನು ಮರೆತುಬಿಡಿ ನೀವು ಭದ್ರವಾಗಿ ಅಂಟಿಕೊಳ್ಳಬೇಕಾದುದು ನನ್ನ ಹೆಸರಿಗಲ್ಲ, ತತ್ತ್ವಗಳಿಗೆ. ಅದರ ಅಳತೆಗೋಲಿನಿಂದ ನಿಮ್ಮ ಒಂದೊಂದು ಚಟುವಟಿಕೆಯನ್ನೂ ಅಳೆದು ಉದ್ಭವಿಸಬಹುದಾದ ಎಲ್ಲ ಸಮಸ್ಯೆಗಳನ್ನೂ ನಿರ್ಭೀತರಾಗಿ ಎದುರಿಸಿ ೨

ನಿಲ್ಲುವುದು ನನ್ನ ಕೃತಿಯೇ ಹೊರತು, ನನ್ನ ಮಾತೂ ಅಲ್ಲ, ಬರಹವೂ ಅಲ್ಲ ಇತ್ತೀಚೆಗೆ ನಾನು ಈ ಮಾತನ್ನು ಅನೇಕ ಸಲ ಹೇಳಿದ್ದೇನೆ. ಸಕಲ ಶಾಸ್ತ್ರಗಳೂ ಒಂದು ವೇಳೆ ವಿನಾಶ ಹೊಂದುವುದಾದರೂ ಹಿಂದೂ ಧರ್ಮದ ಸಾರವನ್ನು ಸಾರಲು ಈಶೋಪನಿಷತ್ತಿನ ಒಂದು ಮಂತ್ರ ಸಾಕು, ಆದರೆ

---

೧ ಹರಿಜನ, ೨೮-೩-೧೯೩೬

೨. ಹರಿಜನ, ೧-೫-೧೯೩೭

ಅದನ್ನು ಅನುಷ್ಠಾನಕ್ಕೆ ತರಲು ಯಾರೊಬ್ಬರೂ ಇರದಿದ್ದರೆ ಆ ಒಂದು ಮಂತ್ರವೂ ನಿರರ್ಥಕ ಅದರಂತೆಯೆ ನನ್ನ ಮಾತು, ಬರಹಗಳು ಸತ್ಯ-ಅಹಿಂಸೆಯ ಮಹಾತತ್ತ್ವಗಳನ್ನು ರಕ್ತಗತಮಾಡಿಕೊಳ್ಳಲು ನಿಮಗೆ ನೆರವು ನೀಡಿರುವಷ್ಟರಮಟ್ಟಿಗೆ ಮಾತ್ರ ಉಪಯುಕ್ತ ಅವುಗಳನ್ನು ನೀವು ಹಾಗೆ ರಕ್ತಗತ ಮಾಡಿಕೊಳ್ಳದಿದ್ದರೆ ನನ್ನ ಬರಹಗಳಿಂದ ನಿಮಗೆ ಯಾವ ಪ್ರಯೋಜನವೂ ಇಲ್ಲ ಒಬ್ಬ ಸತ್ಯಾಗ್ರಹಿಯಾಗಿ ನಾನು ಈ ಒಂದೊಂದು ಮಾತನ್ನೂ ಉದ್ದೇಶ್ಯಪೂರ್ವಕವಾಗಿ ಹೇಳುತ್ತಿದ್ದೇನೆ ೧

ಗಾಂಧೀಪಂಥ ಎಂಬುದು ದೋಷದ ಪ್ರತೀಕವಾಗಿರುವುದಾದರೆ ಅದು ನಾಶ ಹೊಂದಲಿ ಸತ್ಯ-ಅಹಿಂಸೆಗಳು ಅಜರಾಮರ ಆದರೆ ಗಾಂಧೀಪಂಥ ಎಂಬುದು ಪಂಥಾಭಿಮಾನಕ್ಕೆ ಮತ್ತೊಂದು ಹೆಸರಾದರೆ ಅದು ವಿನಾಶ ಯೋಗ್ಯವೇ ನಿಜ ತಾನು ಗಾಂಧೀಯ ಅನುಯಾಯಿ ಎಂದು ಯಾರೊಬ್ಬನೂ ಹೇಳದಿರಲಿ. ನಾನು ನನ್ನನ್ನು ಅನುಸರಿಸಿದರೆ ಸಾಕು ಅದರಲ್ಲೂ ನಾನು ಎಂತಹ ಅಸಮರ್ಪಕ ಅನುಯಾಯಿ ಎಂಬುದನ್ನು ನಾನು ಬಲ್ಲೆ, ಯಾವ ತತ್ತ್ವಗಳಿಗಾಗಿ ನಾನು ನಿಂತಿದ್ದೇನೆಯೊ ಅವುಗಳಿಗೆ ತಕ್ಕಂತೆ ನಾನು ಬಾಳುತ್ತಿಲ್ಲ ನೀವು ಅನುಯಾಯಿಗಳಲ್ಲ, ಸಹವಿದ್ಯಾರ್ಥಿಗಳು, ಸಹಯಾತ್ರಿಕರು, ಸಹ-ಅನ್ವೇಷಕರು, ಸಹ-ಉದ್ಯೋಗಿಗಳು ೨

ಸತ್ಯ-ಅಹಿಂಸೆಗಳನ್ನು ಕೇವಲ ವೈಯಕ್ತಿಕ ಅನುಷ್ಠಾನದ ತತ್ತ್ವಗಳನ್ನಾಗಿ ಮಾಡಿಕೊಂಡರೆ ಸಾಲದು, ಸಮಾಜ ಸಮುದಾಯಗಳು, ರಾಷ್ಟ್ರಗಳೂ ಕೂಡ ಅವುಗಳನ್ನು ಅನುಷ್ಠಾನಕ್ಕೆ ತರುವಂತಾಗಬೇಕು ಹೇಗೇ ಆಗಲಿ, ಅದಂತೂ ನನ್ನ ಕನಸು ನನ್ನ ಬದುಕೆಲ್ಲ ಅದರ ಸಾಕ್ಷಾತ್ಕಾರದ ಪ್ರಯತ್ನಕ್ಕಾಗಿಯೆ, ನನ್ನ ಸಾವೂ ಅದರಲ್ಲಿಯೆ. ನನ್ನ ಶ್ರದ್ಧೆ ನನಗೆ ಅನುದಿನವೂ ನೂತನ ಸತ್ಯಗಳನ್ನು ಕಾಣಿಸುತ್ತಿದೆ ಆತ್ಮದ ಸ್ವರೂಪವೆ ಅಹಿಂಸೆ, ಆದುದರಿಂದಲೆ ಸಕಲರೂ ಬದುಕಿನ ಸಕಲ ವ್ಯವಹಾರಗಳಲ್ಲೂ ಅದನ್ನು ಅನುಷ್ಠಾನಕ್ಕೆ

---

೧ ಹರಿಜನ, ೧–೫–೧೯೩೭

೨. ಹರಿಜನ, ೨–೩–೪೦

ತರಬೇಕು ಎಲ್ಲ ಕ್ಷೇತ್ರಗಳಲ್ಲೂ ಅದನ್ನು ಅನುಷ್ಠಾನ ಮಾಡಲಾಗದಿದ್ದರೆ ಅದಕ್ಕೆ ಔಪಯೋಗಿಕ ಮೌಲ್ಯವೇ ಇಲ್ಲ ೧

'ನಮ್ಮ ದೇಶಕ್ಕಾಗಿ ನಾನು ತ್ಯಾಗ ಮಾಡಲಾರದುದು ಈ ಜಗತ್ತಿನಲ್ಲಿ ಏನೂ ಇಲ್ಲ—ಎರಡರ ಹೊರತು ಅವು ಸತ್ಯ ಮತ್ತು ಅಹಿಂಸೆ. ಇಡೀ ಜಗತ್ತನ್ನೇ ನನ್ನ ಮುಂದಿಟ್ಟರೂ ಈ ಎರಡನ್ನು ನಾನು ಬಿಡಲಾರೆ ಏಕೆಂದರೆ ನನ್ನ ಪಾಲಿಗೆ ಸತ್ಯವೇ ದೇವರು ಸತ್ಯಸಾಧನೆಗೆ ಅಹಿಂಸೆಯಲ್ಲದೆ ಅನ್ಯಪಥ ಇಲ್ಲ ಸತ್ಯ ಅಥವಾ ಭಗವಂತನನ್ನು ಬಲಿಗೊಟ್ಟು ಭಾರತಕ್ಕೆ ಸೇವೆ ಸಲ್ಲಿಸುವ ಆಲೋಚನೆಯನ್ನು ನಾನು ಮಾಡಲಾರೆ. ನಾನು ಬಲ್ಲೆ. ಸತ್ಯವನ್ನು ಕೈಬಿಡ ಬಲ್ಲವನು ತನ್ನ ದೇಶವನ್ನೂ ಕೈಬಿಡಬಲ್ಲ, ಆಪ್ತೇಷ್ಟರನ್ನೂ ಕೈಬಿಡಬಲ್ಲ ನನ್ನಾತ್ಮ ಮತ್ತು ನನ್ನ ಕರ್ತ ಇಬ್ಬರೂ ಮೆಚ್ಚುವಂತೆ ನಾನು ಹೋದೆಡೆಯೆಲ್ಲ ನನ್ನ ಕರ್ಮಕ್ಷೇತ್ರದ ಗಾಯತ್ರಿಗಳಾದ ಈ ನನ್ನ ಧರ್ಮಸೂತ್ರಗಳನ್ನು ಸಾರುತ್ತ ಹೋಗುತ್ತೇನೆ

ನನ್ನದು ಧರ್ಮಮಾರ್ಗ, ನಾವು ಧರ್ಮಿಗಳು, ಆದುದರಿಂದ ಉಳಿದವರಿಗೆ ನಾವು ಶ್ರೇಷ್ಠರು ಎಂಬ ಅಹಂಭಾವ ನಮ್ಮನ್ನು ಆಕ್ರಮಿಸುವ ಭಯ ಯಾವಾ ಗಲೂ ಇದ್ದೇ ಇದೆ ಇತರರಿಂದ ನಾನು ನಿರೀಕ್ಷಿಸುವಂತೆ ಸ್ವವಿಮರ್ಶೆಯಲ್ಲಿ ಸತ್ಯದಂತೆಯೆ ನಿಷ್ಠುರವಾಗಿರಲು ನಾನು ಪ್ರಯತ್ನಿಸುತ್ತೇನೆ ೨

'ಗಾಂಧೀತತ್ತ್ವ' ಎಂದು ಯಾವುದನ್ನು ಕರೆಯುತ್ತಾರೊ ಅದನ್ನು, ಅದರ ಪ್ರಸಾರವಿಧಾನಗಳನ್ನು ವಿಚಾರಿಸೋಣ ಸತ್ಯ–ಅಹಿಂಸೆಗಳನ್ನು ಕುರಿತು ಪುಸ್ತಕಗಳನ್ನು ಬರೆಯುವುದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಸತ್ಯ–ಅಹಿಂಸೆಗಳ ಪ್ರಸಾರ ಸಾಧ್ಯ ಅವುಗಳನ್ನು ಅನುಷ್ಠಾನಕ್ಕೆ ತಂದರೆ ಅನುಷ್ಠಾನದ ಜೀವನ ಪುಸ್ತಕಕ್ಕಿಂತ ಶ್ರೇಷ್ಠ ಪುಸ್ತಕ ಮತ್ತು ಪತ್ರಿಕೆಗಳ ಪ್ರಕಟನೆ ಅನಗತ್ಯ ಎಂದು ನಾನು ಹೇಳುತ್ತಿಲ್ಲ ಅವು ಅನಿವಾರ್ಯವೇನಲ್ಲ ಎಂದಷ್ಟೆ ನನ್ನ ಅಭಿಪ್ರಾಯ ನಾವು ಸತ್ಯ–ಅಹಿಂಸೆಗಳ ನಿಜವಾದ ಆರಾಧಕರಾಗುವ ಪಕ್ಷದಲ್ಲಿ ಸಮಸ್ಯೆಗಳನ್ನು ಪರಿಹರಿಸಲು ಅಗತ್ಯವಾಗಿ ಬೇಕಾದ ಬುದ್ಧಿಶಕ್ತಿಯನ್ನು

---

೧ ಹರಿಜನ, ೧–೫–೧೯೩೭

೨ ಹರಿಜನ, ೧–೫–೧೯೩೭

ಭಗವಂತನೆ ನಮಗೆ ದಯಪಾಲಿಸುತ್ತಾನೆ ಪ್ರತಿಪಕ್ಷದ ದೃಷ್ಟಿಕೋನವನ್ನು ಅರ್ಥಮಾಡಿಕೊಳ್ಳುವ ಇಚ್ಛೆ ಅಂತಹ ಶ್ರದ್ಧೆಯ ಪೂರ್ವಾಂಗವಾಗಿಯೇ ಉಳಿದಿದೆ ಪ್ರತಿಪಕ್ಷಿಯ ಮನಸ್ಸನ್ನು ಹೊಕ್ಕು ಆತನ ದೃಷ್ಟಿ ಏನೆಂದು ಅರಿಯಲು ಪ್ರಾಮಾಣಿಕವಾಗಿ ಪ್ರಯತ್ನಿಸಬೇಕು ಹಿಂಸೆಯ ಬಾಯನ್ನೇ ಅಹಿಂಸೆ ನೇರವಾಗಿ ಹೊಗುತ್ತದೆ ಎಂಬುದರ ಅರ್ಥ ಇದೇ ಅಂತಹ ಮನೋಧರ್ಮದ ಕವಚ ನಮಗಿದ್ದರೆ ಅಹಿಂಸೆಯ ತತ್ತ್ವಗಳನ್ನು ಪ್ರಸಾರ ಮಾಡುವ ವಿಶ್ವಾಸ ನಮಗೆ ಬರುತ್ತದೆ ಅದಿಲ್ಲದೆ ಪುಸ್ತಕದ ಪತ್ರಿಕೆಗಳ ಪ್ರಚಾರ ವ್ಯರ್ಥ.೧

ನನ್ನ ಸಲಹೆಗಳಲ್ಲೆಲ್ಲ ಒಂದು ರಕ್ಷಾಸೂತ್ರ ಇದ್ದೇ ಇರುತ್ತದೆ. ತಮ್ಮ ಬುದ್ಧಿಗೂ ಹೃದಯಕ್ಕೂ ಒಪ್ಪಿಗೆಯಾಗದಿದ್ದರೆ ಯಾರೂ ಅವುಗಳನ್ನು ಅನುಸರಿಸ ಬೇಕಾಗಿಲ್ಲ ೨

ನನ್ನನ್ನು ಮೆಚ್ಚುವವರಿಗೂ ನನ್ನ ಮಿತ್ರರಿಗೂ ಒಂದು ಧೈರ್ಯ ಹೇಳಬಲ್ಲೆ. ಮಹಾತ್ಮಾ ಎಂಬುದನ್ನು ಮರೆತು ನನ್ನನ್ನು ಬರಿಯ 'ಗಾಂಧೀ' ಎಂದು ಭಾವಿಸುವುದಾದರೆ ಅವರು ನನ್ನ ಮೆಚ್ಚುಗೆಗೆ ಹೆಚ್ಚಾಗಿ ಪಾತ್ರರಾಗುತ್ತಾರೆ. ನಾನು ಯಾವ ತತ್ತ್ವಗಳನ್ನು ಜೀವನದಲ್ಲಿ ಅನುಷ್ಠಾನ ಮಾಡಬೇಕೆಂದು ಕಾರ್ಯಕ್ರಮ ಹಾಕಿಕೊಂಡಿದ್ದೇನೆಯೊ ಅದನ್ನು ತಾವು ತಮ್ಮ ಜೀವನದಲ್ಲಿ ಅನುಷ್ಠಾನಕ್ಕೆ ತರಬೇಕು, ಇಲ್ಲವೆ ಅದರಲ್ಲಿ ಅವರಿಗೆ ನಂಬುಗೆ ಇರದಿದ್ದ ಪಕ್ಷದಲ್ಲಿ ಅದನ್ನು ಸರ್ವರೀತಿಯಿಂದಲೂ ವಿರೋಧಿಸಬೇಕು—ಇದೇ ನನ್ನ ಮಿತ್ರರು ನನಗೆ ತೋರಿಸಬಹುದಾದ ಪರಮಗೌರವ ೩

ಯಾವ ಮಹಾ ಉದ್ಯಮದಲ್ಲಿಯೆ ಆಗಲಿ ನಿರ್ಣಯಕಾರಿಯಾಗುವುದು ಹೋರಾಡುವವರ ಸಂಖ್ಯೆಯಲ್ಲ, ಅವರ ಸತ್ತ್ವ. ಜಗತ್ತಿನ ಮಹಾವ್ಯಕ್ತಿಗಳೆಲ್ಲ ಏಕಾಂಗಿಯಾಗಿ ನಿಂತರು ಝುರತುಷ್ಟ್ರ, ಬುದ್ಧ, ಯೇಸು, ಮಹಮ್ಮದ್ ಈ ಎಲ್ಲ ಮಹಾಪ್ರವಾದಿಗಳನ್ನೂ ಗಮನಿಸಿ ನಾನಿನ್ನೂ ಹೆಸರಿಸಬಹುದಾದ

---

೧ ಹರಿಜನ, ೧೩–೫–೧೯೩೯

೨ ಹರಿಜನ, ೧೫–೭–೧೯೩೬

೩. ಯಂಗ್ ಇಂಡಿಯಾ, ೧೨–೬–೧೯೨೪

ಇತರ ಹಲವರಂತೆಯೆ ಅವರೆಲ್ಲರೂ ಏಕಾಂಗಿಯಾಗಿಯೆ ಕೆಲಸ ಮಾಡಿದರು ಆದರೆ ಅವರಿಗೆ ತಮ್ಮಲ್ಲಿಯೂ ಭಗವಂತನಲ್ಲಿಯೂ ಜೀವಂತಶ್ರದ್ಧೆಯಿತ್ತು, ಭಗವಂತ ತಮ್ಮ ಪಕ್ಕದಲ್ಲಿದ್ದಾನೆಂಬ ವಿಶ್ವಾಸ ಇದ್ದುದರಿಂದ ತಾವು ಏಕಾಕಿಗಳು ಎಂಬ ಭಾವನೆಯೆ ಅವರಿಗೆ ಬರಲಿಲ್ಲ ೧

ನನ್ನಲ್ಲಿರುವ ಏನೋ ಒಂದು ವಾಣಿ ನನ್ನ ಸಂಕಟವನ್ನು ಕೂಗಿ ಸಾರುವಂತೆ ನನ್ನನ್ನು ಪ್ರಚೋದಿಸುತ್ತಿದೆ ಅದು ಯಾವುದೆಂಬುದನ್ನು ನಾನು ಖಚಿತವಾಗಿ ಬಲ್ಲೆ ನನ್ನನ್ನೆಂದೂ ವಂಚಿಸದ ನನ್ನೊಳಗಿನ ಆ ವಾಣಿ ಹೇಳುತ್ತದೆ 'ನೀನು ಒಬ್ಬೊಂಟಿಗನೆ ಆಗಿ ನಿಲ್ಲಬೇಕಾಗಿ ಬಂದರೂ ನರಿ, ಇಡಿಯ ಜಗತ್ತನ್ನೆ ಎದುರಿಸಿ ನಿಲ್ಲಬೇಕಾಗುತ್ತದೆ

'ಜಗತ್ತು ನಿನ್ನನ್ನು ತನ್ನ ಕೆಂಗಣ್ಣಿನಿಂದ ದುರದುರನೆ ನೋಡಿದರೂ ಸರಿ, ನೀನು ಅದರ ದೃಷ್ಟಿಗೆ ದೃಷ್ಟಿ ಕೊಟ್ಟು ನಿಲ್ಲಬೇಕಾಗುತ್ತದೆ ಭೀತಿ ಬೇಡ ನಿನ್ನ ಹೃದಯದಲ್ಲಿ ನೆಲೆಸಿ ಹೀಗೆಂದು ಹೇಳುತ್ತಿರುವ ಆ ಅಣುರೂಪಿಯಲ್ಲಿ ನಿನಗೆ ಶ್ರದ್ಧೆಯಿರಲಿ ಯಾವುದಕ್ಕಾಗಿ ನೀನು ಬದುಕಿದ್ದೀಯೋ ಯಾವುದಕ್ಕಾಗಿ ನೀನು ಮಡಿಯಬೇಕೋ ಅದಕ್ಕಾಗಿ ಮನೆ ಮಠ ಮಡದಿ ಮಕ್ಕಳು ಸರ್ವಸ್ವವನ್ನೂ ಪರಿತ್ಯಜಿಸು, ಆದರೆ ಅದರ ಸತ್ಯಕ್ಕೆ ಸಾಕ್ಷಿಯಾಗಿ ಬಾಳು '೨

---

೧. ಯಂಗ್ ಇಂಡಿಯಾ, ೧೦–೧೦–೧೯೩೯

೨ ಬಾಂಬೆ ಕ್ರಾನಿಕಲ್, ೯–೮–೧೯೪೨

# ವಿಶೇಷ ದೃಷ್ಟಿ

## [ಶ್ರೀ ರಂ. ರಾ. ದಿವಾಕರರಿಂದ]



## ಗೀತಾಮಾತೆ

ಗಾಂಧೀಜಿಯವರು ಗೀತೆಯ ಮಹತ್ವವನ್ನು ಅರಿತುಕೊಂಡು, ತಮ್ಮ ಜೀವನದ ಮೇಲೆ ಆದ ಗೀತಾಭ್ಯಾಸದ ಆಳವಾದ ಪರಿಣಾಮವನ್ನು ನೆನಿಸಿ ಗೀತೆಗೆ 'ಗೀತಾಮಾತೆ' ಎಂಬ ಬಿರುದನ್ನು ಕೊಟ್ಟರು, ಅವರ ಪರಮ ಶಿಷ್ಯ ರಾದ ವಿನೋಬಾಜೀ ಅವರು ಅದಕ್ಕೆಯೆ 'ಗೀತಾಯಿ' ಎಂದರು ಅವರವರ ಪಾರ್ಥಿವ ಜಡದೇಹಕ್ಕೆ ಅವರ ತಾಯೆಂದಿರು ಜನ್ಮಕೊಟ್ಟರು, ಆದರೆ ಅವರಿಗೆ ಆತ್ಮನ ಗುರುತು ಮಾಡಿಕೊಟ್ಟು 'ದ್ವಿಜ'ರನ್ನಾಗಿ ಮಾಡಿದವಳು 'ಗೀತಾ-ತಾಯಿ' ಆದುದರಿಂದಲೆ ಅವರಿಬ್ಬರೂ ಗೀತೆಯನ್ನು ತಮ್ಮ ಮಾತೃಸ್ಥಾನ ದಲ್ಲಿ ಸ್ಥಾಪಿಸಿ, ಆತ್ಮಾನುಭೂತಿಯ ಭಾಂಡಾರವಾದ ಆ ಮಹಾಗ್ರಂಥದಿಂದ ಆಧ್ಯಾತ್ಮಿಕ ಜೀವನದ ರಹಸ್ಯವನ್ನು ಪಡೆದುಕೊಂಡರು.

ಹೋದ ಶತಮಾನದಲ್ಲಿ ಭಾರತದಲ್ಲಿ ಆಗಿಹೋದ ರಾಷ್ಟ್ರೀಯ ಮುಖಂಡ ರಲ್ಲಿ ಗೀತೋಪದೇಶದಿಂದ ಪ್ರಭಾವಿತರಾಗದೆ ಇದ್ದವರು ವಿರಳ ಲೋಕಮಾನ್ಯ ಟಿಳಕರಂತೂ ಗೀತೆಯನ್ನು ಕುರಿತು ಒಂದು ಮಹಾನ್ ಗದ್ಯಭಾಷ್ಯವನ್ನೆ ಬರೆದು ಬಿಟ್ಟರು ಆ ಭಾಷ್ಯವು ಅವರನ್ನು ಅಜರಾಮರರನ್ನಾಗಿ ಮಾಡಿಬಿಟ್ಟದೆ, ಎಂದು ಆ ಬಗ್ಗೆ ಗಾಂಧೀಜಿಯವರು ಉದ್ಗರಿಸಿದ್ದಾರೆ ಶ್ರೀ ಅರವಿಂದರ ಗೀತಾ ಭಾಷ್ಯವೂ ಕೂಡ ಪ್ರಸಿದ್ಧವಿರುವುದು ಇಷ್ಟೇ ಅಲ್ಲ, ತಮ್ಮ ಆಧ್ಯಾತ್ಮಿಕ ಜೀವನದ ಮುಖ್ಯ ಮಾರ್ಗದರ್ಶನವು ತಮಗೆ ಗೀತೆ ಹಾಗೂ ಉಪನಿಷತ್ತು ಇವುಗಳಿಂದಲೆ ಆಯಿತು, ಎಂದು ಅವರು ಹೇಳಿದ್ದಾರೆ ಸ್ವಾಮಿ ವಿವೇಕಾನಂದ, ಮಾಲವೀಯ, ಲಾಲಾ ಲಜಪತರಾಯ ಮುಂತಾದವರು ಅನೇಕರು ಇದೇ ಬಗೆಯಾಗಿ ಗೀತೆಯ ಮಹಾತ್ಮ್ಯವನ್ನು ಕೊಂಡಾಡಿದ್ದಾರೆ.

ಗೀತೆ, ವೇದೋಪನಿಷತ್ತುಗಳ ಸಾರಸರ್ವಸ್ವವಿರುವುದಲ್ಲದೆ ಭಾರತೀಯ ತತ್ತ್ವಜ್ಞಾನಗಳ ಹಾಗೂ ಸಾಧನಮಾರ್ಗಗಳ ಸಮನ್ವಯವೂ ಇರುವುದು

ಆದುದರಿಂದ ಅದು ಸರ್ವಮತೀಯರಿಗೂ ಸರ್ವಮಾನ್ಯವಾಗಿ 'ಪ್ರಸ್ಥಾನ ತ್ರಯಿ'ಯಲ್ಲಿ (ಉಪನಿಷತ್ತುಗಳು, ಬ್ರಹ್ಮಸೂತ್ರಗಳು ಮತ್ತು ಗೀತೆ ಇವು ಗಳಿಗೆ ಪ್ರಸ್ಥಾನತ್ರಯಿ ಎನ್ನುವರು) ಆ ಗ್ರಂಥಕ್ಕೆ ಮಹತ್ವದ ಸ್ಥಾನ ದೊರಕಿದೆ ಮೇಲಾಗಿ ಏಳುನೂರೇ ಶ್ಲೋಕಗಳುಳ್ಳದ್ದಾಗಿ, ಸುಲಭಶೈಲಿಯಲ್ಲಿ ಬರೆದದ್ದಾಗಿ, ಸಂವಾದರೂಪವಾಗಿ ಇರುವುದರಿಂದ ಅದು ಅತ್ಯಂತ ಲೋಕಪ್ರಿಯವಾಗಿದೆ. ಸಂಸ್ಕೃತದಲ್ಲಿ ಹಾಗೂ ಇತರ ಭಾರತೀಯ ಭಾಷೆಗಳಲ್ಲಿ ಗೀತೆಯನ್ನು ಕುರಿತು ಬರೆಯಲಾದಷ್ಟು ಭಾಷ್ಯಗಳು, ಗ್ರಂಥಗಳು ಇನ್ನಾವ ಪುಸ್ತಕದ ಬಗ್ಗೆಯೂ ಬರೆಯಲಾಗಿಲ್ಲ, ಎಂದು ಹೇಳುವುದು ಅತಿಶಯೋಕ್ತಿಯಲ್ಲ

ಗೀತಾಗ್ರಂಥದ ಮಾಹಾತ್ಮ್ಯವು ಇಷ್ಟೇ ಎಂದು ಹೇಳಲಾಗುವುದಿಲ್ಲ ಪ್ರತ್ಯಕ್ಷ ಪರಮಾತ್ಮನ ಪೂರ್ಣಾವತಾರವೆಂದು ಕೋಟ್ಯಾಂತರ ಜನರಿಂದ ಮನ್ನಿಸಲ್ಪಟ್ಟ ಶ್ರೀಕೃಷ್ಣನು ಗೀತೆಯ ಉಪದೇಶಕನಿರುವನು ಆದುದರಿಂದಲೆ ಅದಕ್ಕೆ 'ಭಗವದ್ಗೀತೆ' (ಭಗವಂತನು ಹಾಡಿದುದು) ಎಂಬ ಹೆಸರು ಶ್ರೀಕೃಷ್ಣನ ವ್ಯಕ್ತಿತ್ವ ಹಾಗೂ ವ್ಯಕ್ತಿಮತ್ವ ಇವು ಪ್ರತ್ಯೇಕ ಅಭ್ಯಾಸದ ವಿಷಯ ಗಳಾಗಿವೆ ಇದಲ್ಲದೆ ಉಪದೇಶ ಕೇಳುವವನೂ ಸಾಮಾನ್ಯ ವ್ಯಕ್ತಿಯಿಲ್ಲ ಅವನು ಅಂದರೆ ಅರ್ಜುನನು ಮಹಾರಥಿಯು, ಪರಮಯೋಧನು, ಪ್ರಸಿದ್ಧ ಕ್ಷತ್ರಿಯನು, ಅವನ ಗಾಂಡೀವ ಧನುಷ್ಯದ ಟಣತ್ಕಾರವನ್ನು ಕೇಳಿಯೆ ಶತ್ರುಗಳು ಗರ್ಭಗಳಿತರಾಗುತ್ತಿದ್ದರಂತೆ ಮೇಲಾಗಿ ಉಪದೇಶದ ಸಂದರ್ಭವು ಅತಿರೋಮಾಂಚಕಾರಿಯಾದುದು ಕುರುಪಾಂಡವರ ಹದಿನೆಂಟು ಅಕ್ಷೌಹಿಣೀ ಸೈನ್ಯವು ಎದುರುಬದುರು ಮೇಹರಿಸಿ ಯುದ್ಧಕ್ಕೆ ಅಣಿಯಾಗಿ ನಿಂತಾಗ ಆಕಸ್ಮಾತ್ತಾಗಿ ನರ ಸತ್ತ್ವವರಂತೆ ಹತವೀರ್ಯನಾದ ಧನಂಜಯನಿಗೆ ಗೀತೆಯು ಉಪದೇಶ ಮಾಡಲಾಯಿತು ಆ ಉಪದೇಶದಿಂದ 'ನಷ್ಟಮೋಹನಾಗಿ' ಅವನು ಪುನಃ ಚೇತರಿಸಿಕೊಂಡೆದ್ದು ಧರ್ಮಯುದ್ಧವನ್ನು ಮಾಡಲು ಸಿದ್ಧ ನಾದನು, ಅದರಲ್ಲಿ ಜಯಶೀಲನಾದನು

ಆದುದರಿಂದಲೆ ಕುರುಕ್ಷೇತ್ರವು ಧರ್ಮಕ್ಷೇತ್ರವಾಯಿತು

ಗಾಂಧೀಜಿಯವರು ಗೀತೆಯ ಅಭ್ಯಾಸವನ್ನು ಒಂದು ವಿಶೇಷ ದೃಷ್ಟಿ ಯಿಂದ ಮಾಡಿದರಲ್ಲದೆ, ಕುರುಕ್ಷೇತ್ರವೆಂಬುದು ಪ್ರತಿಯೊಬ್ಬನ ಅಂತಃಕರಣ ದಲ್ಲಿಯೆ ಇದೆ, ಅದನ್ನು ಧರ್ಮಕ್ಷೇತ್ರವನ್ನಾಗಿ ಮಾಡುವುದೆ ಪುರುಷಾರ್ಥ,

ಮಾನವ ಜನ್ಮದ ಸಾರ್ಥಕ್ಯ, ಎಂದು ಪ್ರತಿಪಾದಿಸಿದ್ದಾರೆ ಮನುಷ್ಯನ ಚಿದಾಂಗಣದಲ್ಲಿ ಪ್ರತಿಕ್ಷಣವೂ ಧರ್ಮಕ್ಕೂ ಅಧರ್ಮಕ್ಕೂ, ಸತ್ಪ್ರವೃತ್ತಿಗೂ ದುಷ್ಪ್ರವೃತ್ತಿಗೂ, ಒಳಿತು-ಕೆಡುಕುಗಳಿಗೂ ತುಮುಲಯುದ್ಧ ನಡೆದಿದ ಆ ಯುದ್ಧದಲ್ಲಿ ಧರ್ಮಕ್ಕೆ ಗೆಲವು ಆಗಬೇಕಾದರೆ ಗೀತೆಯ ಉಪದೇಶದಂತೆ ನಡೆಯ ಬೇಕು, ಎಂದು ಅವರು ಸಾರಿದ್ದಾರೆ

ಗಾಂಧೀಜಿಯವರ ದೃಷ್ಟಿಯಲ್ಲಿ, ಮಹಾಭಾರತದ ಯುದ್ಧವೆಂದರೊಂದು ರೂಪಕ, ಕೌರವ-ಪಾಂಡವರು ಅಧರ್ಮ-ಧರ್ಮ ಇವುಗಳ ಪ್ರತೀಕಗಳು ಈ ಯುದ್ಧದಲ್ಲಿ ಕೊನೆಗೆ ಅಧರ್ಮಕ್ಕೆ ಅಪಜಯ, ಧರ್ಮಕ್ಕೆ ಜಯ ಆಗಿದೆ ಈ ಹೋರಾಟ ಒಂದೊಪ್ಪತ್ತು ಐತಿಹಾಸಿಕವೂ ಆಗಿದ್ದ ಪಕ್ಷದಲ್ಲಿ, ವೇದವ್ಯಾಸರು ಆ ಕತೆಯನ್ನು ನಮ್ಮ ಅಂತರಾಳದಲ್ಲಿ ನಿತ್ಯವೂ ನಡೆದಿರುವ ಒಳಿತು-ಕೆಡುಕು ಗಳ ಹೋರಾಟ, ಅದರ ನೀತಿ-ಅನೀತಿ, ಇವುಗಳಿಗೆ ಅನ್ವಯಿಸಿ, ಧರ್ಮಮಾರ್ಗ ದಿಂದ ಹೋಗುವುದರಿಂದಲೇ ಜಯ, ಎಂಬುದನ್ನು ಪ್ರದರ್ಶಿಸಿದ್ದಾರೆ, ಎಂದು ಗಾಂಧೀಜಿಯವರು ಹೇಳಿರುವರು

ಮೇಲಾಗಿ ಗಾಂಧೀಜಿಯವರು ಹೇಳಿದ್ದೇನಂದರೆ, ಮಹಾಭಾರತದ ಯುದ್ಧವು ಪ್ರತ್ಯಕ್ಷ ಆಗಿದ್ದರೂ ಅದರ ವರ್ಣನೆಯ ಮೂಲಕ ವೇದವ್ಯಾಸರು ಉಪದೇಶಿಸಿದ್ದೇನು ? ಆ ಘನಘೋರ ಹಿಂಸಾಮಯ ಯುದ್ಧದ ವಿಫಲತೆ ಯನ್ನಲ್ಲವೇ ? ಹಿಂಸೆಯು ಎಂದೂ ಯಾವ ಸಂದರ್ಭದಲ್ಲಿಯೂ ಉಪಕಾರಕ ವಾಗಲಾರದು, ಅಹಿಂಸಾಮಾರ್ಗವೇ ಎಲ್ಲಕ್ಕೂ ಶ್ರೇಷ್ಠ ಎಂಬುದೇ ಗಾಂಧೀಜಿ ಯವರ ಪ್ರಮೇಯ ಈ ಮಹಾಮಾರ್ಗದಿಂದ ಹೋಗಲು ಸಾಮರ್ಥ್ಯವಿಲ್ಲ ದವರಷ್ಟೆ ವಿಕಲ್ಪವಾಗಿ ಸ್ವಸಂರಕ್ಷಣಕೋಸ್ಕರ, ಅನ್ಯಾಯವನ್ನು ತೊಡೆದು ಹಾಕಲು ಹಿಂಸೆಯನ್ನಾಚರಿಸಬಹುದು, ಎಂದು ಅವರು ಹೇಳಿರುವರು ಆದರೆ ಹಿಂಸೆ ಎಂಬುದು ಯಾವ ಸಂದರ್ಭದಲ್ಲಿಯೂ ಸನಾತನಧರ್ಮ ಅಥವಾ ಅತ್ಯಂತ ಶ್ರೇಷ್ಠ ಧರ್ಮ ಎಂದೆನಿಸಲಾರದು ಯಾಕಂದರೆ ಅದು ಮೂಲದಲ್ಲಿಯೆ ದೋಷ ಯುಕ್ತವು ಹಾಗೂ ದ್ವೇಷಾದಿಗಳಿಗೆ ಜನ್ಮಕೊಟ್ಟು ಹೊಸ ಸಮಸ್ಯೆಗಳನ್ನು ಹುಟ್ಟಿಸುವಂತಹದು

ಲೋಕಮಾನ್ಯರು, ಗೀತೆಯಲ್ಲಿ ಕರ್ಮಯೋಗವೇ ಮುಖ್ಯ ಪ್ರತಿಪಾದ್ಯ ವಿಷಯ ಎಂದು ಹೇಳಿದರು ಶ್ರೀ ಅರವಿಂದರು, ಸರ್ವಸಮರ್ಪಣಯೋಗವೇ

ಮುಖ್ಯ ಎಂದು ಪ್ರತಿಪಾದಿಸಿದರು. ಗಾಂಧೀಜಿಯವರು ಅನಾಸಕ್ತಿಯೇ ಪ್ರಧಾನ ಎಂದು ಸಾರಿದರು ಆದುದರಿಂದ ಅವರು ಬರೆದ ಗೀತಾರ್ಥಕ್ಕೆ 'ಅನಾಸಕ್ತಿಯೋಗ' ಎಂಬ ಹೆಸರಾಗಿದೆ ಏನೇ ಇರಲಿ ಗಾಂಧೀಜಿಯವರು ಯಾವ ಮಹಾಗ್ರಂಥವನ್ನು ತಮ್ಮ ಸ್ಫೂರ್ತಿಯ ಹಾಗೂ ಆಧ್ಯಾತ್ಮಿಕ ಜೀವನದ ಮೂಲವೆಂದು ಬಗೆದು ನಿತ್ಯವೂ ಅದರಿಂದ ಚೈತನ್ಯವನ್ನು ಪಡೆಯುತಿದ್ದರೊ ಆ ಗ್ರಂಥವನ್ನು ಕುರಿತು ಅವರು ಬರೆದುದು ನಮ್ಮೆಲ್ಲರಿಗೂ ಅತೀವ ಮಹತ್ವದ್ದು ಹಾಗೂ ಅಭ್ಯಾಸಯೋಗ್ಯವು ಎಂಬಲ್ಲಿ ತಿಲಮಾತ್ರ ಸಂಶಯವಿಲ್ಲ



## ಮಂಗಳ ಪ್ರಭಾತ

ಗೀತಾಮಾತೆಯೊಡನೆ ಮಂಗಳ ಪ್ರಭಾತವೂ ಇಲ್ಲಿ ಪ್ರಕಟವಾಗುತ್ತಿದೆ. ಗಾಂಧೀಜಿಯವರ ಸತ್ಯಾಗ್ರಹ ಆಶ್ರಮದಲ್ಲಿ ಪಾಲಿಸಲು ಅವಶ್ಯ ಎಂದು ನಿರ್ಧರಿಸಲ್ಪಟ್ಟ ವ್ರತಗಳ ಸುಲಭ ವಿವರಣೆಯನ್ನು ಈ ಮಂಗಳ ಪ್ರಭಾತದಲ್ಲಿ ನಾವು ನೋಡಬಹುದು ಬಾಲ-ಬಾಲಿಕೆಯರಿಗೆ ಕೂಡ ತಿಳಿಯಬೇಕು ಎಂಬ ಉದ್ದೇಶ್ಯದಿಂದ ಗಾಂಧೀಜೀ ಈ ವಿವರಣೆ ಬರೆದರು

ವ್ರತ, ವ್ರತಗಳ ಆಚರಣೆ ಇದು ಭಾರತೀಯ ಸಂಸ್ಕೃತಿಯ ಅವಿಭಾಜ್ಯ ಅಂಶವಿರುವುದು ಉಪನಿಷತ್ತುಗಳಲ್ಲಿ ಕೂಡ ಸತ್ಯ, ಅಹಿಂಸೆ ಇತ್ಯಾದಿಗಳ ಉಲ್ಲೇಖವಿರುವುದು, ಇಷ್ಟೇ ಅಲ್ಲ ಬ್ರಹ್ಮಜ್ಞಾನವನ್ನು ಪಡೆಯಲಿಚ್ಛಿಸುವವರು ಇಂಥ ಇಂಥ ವ್ರತಗಳನ್ನು ಆಚರಿಸಬೇಕು, ನಿಯಮಗಳನ್ನು ಪಾಲಿಸಬೇಕು ಎಂದು ನಿರ್ಧಾರವಾಗಿ ಹೇಳಲಾಗಿದೆ ಸತ್ಯಂ ವದ, ಧರ್ಮಂ ಚರ ಇತ್ಯಾದಿ ವಾಕ್ಯಗಳು ಉಪನಿಷತ್ತಿನಲ್ಲಿಯೆ ಇವೆ ಜೈನ-ಬೌದ್ಧ ಮತಗಳಲ್ಲಿಯೂ ವ್ರತ ನಿಯಮಾದಿಗಳಿಗೆ ಬಹಳ ಮಹತ್ವವು ಕೊಡಲಾಗಿದೆ ಪಾರ್ಶ್ವನಾಥನ ಧರ್ಮಕ್ಕೆ 'ಚತುರ್ಯಾಮ-ಧರ್ಮ' ಎಂದೇ ಹೆಸರಾಗಿತ್ತು, ಅಂದರೆ ನಾಲ್ಕು ವ್ರತಗಳನ್ನು ಪರಿಪಾಲಿಸುವ ಧರ್ಮ, ಎಂದರ್ಥ.

ಸೈನಿಕರ ತರಬೇತಿಯಲ್ಲಿ 'ಡ್ರಿಲ್' ಮುಂತಾದ ಶಿಸ್ತಿನ (ಡಿಸಿಪ್ಲಿನ್) ಸಾಧನೆಗಾಗಿ ಮಾಡಲಾಗುವ ಕ್ರಿಯೆಗಳಿಗೆ ಹಾಗೂ ಇತರ ಕಠಿಣ ನಿಯಮಾದಿಗಳಿಗೆ ಎಷ್ಟು ಮಹತ್ವವೊ ಅಷ್ಟೇ, ಅಥವಾ ಅದಕ್ಕೂ ಒಂದು ತೂಕ ಹೆಚ್ಚು

ಮಹತ್ವವು ಧರ್ಮಸಾಧನೆಯಲ್ಲಿ ವ್ರತಗಳಿಗೆ ಇರುವುದು ಯಮ-ನಿಯಮ, ವ್ರತ, ಅನುಷ್ಠಾನ ಇತ್ಯಾದಿಗಳಿಲ್ಲದೆ ಧರ್ಮಸಾಧನೆಯಾಗಲಾರದು ನಿತ್ಯ ನೀರನ್ನೆರೆಯದೆ ಮರವನ್ನು ಬೆಳೆಸಬಲ್ಲೆವು, ಎಂದಂತೆಯೆ ಅದು ಅಸಾಧ್ಯ

ಈ ಸಂದರ್ಭದಲ್ಲಿ ವ್ರತದ ಬಗ್ಗೆ ಗಾಂಧೀಜಿಯವರು ಹೇಳಿದುದು ಗಮನಾರ್ಹವಾದುದು

ಒಂದು ವ್ರತವು ಎಷ್ಟೇ ಕಠಿಣವಿದ್ದರೂ ಕಷ್ಟತರವೆನಿಸಿದರೂ ಅದನ್ನು ಕೈಕೊಳ್ಳದೆ ಬಿಡುವುದು ಯೋಗ್ಯವಲ್ಲ ವ್ರತವನ್ನು ತೊಟ್ಟಾಕ್ಷಣಕ್ಕೆ ಅದನ್ನು ಪೂರ್ಣವಾಗಿ ಪಾಲಿಸುವ ಶಕ್ತಿ ನಮ್ಮಲ್ಲಿ ಬಂದುಬಿಡುವುದಿಲ್ಲ, ಎಂಬುದು ನಿಜ ಆದರೆ ಕೈಕೊಂಡ ಆಯಾ ವ್ರತವನ್ನು ಕಾಯೇನ, ವಾಚಾ, ಮನಸಾ ಆಜನ ಪಾಲಿಸಲು ಹೆಣಗುತ್ತಿರುವುದೆ ವ್ರತಿಯ ಕರ್ತವ್ಯ ವ್ರತವು ಕಠಿಣ, ಎಂದು ಅದನ್ನು ನಡಲಿಸಹೋಗುವುದು ಉಚಿತವಲ್ಲ. ಅದು ಆತ್ಮವಂಚನೆಯಾಗುವುದು ಆದರ್ಶವನ್ನು ಕೆಳಗಿಳಿಸುವುದು ಎಂದೆಂದಿಗೂ ಸೂಕ್ತವಾದುದಲ್ಲ, ಉಚ್ಚ ಆದರ್ಶವನ್ನಿಟ್ಟುಕೊಂಡು ಅದನ್ನು ಸಾಧಿಸಲು ಯಾವಾಗಲೂ ಪ್ರಯತ್ನ ಮಾಡುತ್ತಿರುವುದೆ ಪುರುಷಾರ್ಥ

ಈ ದೃಷ್ಟಿಯಿಂದ ವ್ರತಗಳತ್ತ ನಾವು ನೋಡಿದರೆ ನಮ್ಮ ಜೀವನದಲ್ಲಿ ಅವುಗಳಿಗೆ ಎಷ್ಟು ಮಹತ್ವವಿದೆ ಎಂಬುದು ಅನುಭವಕ್ಕೆ ಬರುವುದು ಗಾಂಧೀಜಿಯವರ ಜೀವನದ ರಹಸ್ಯವನ್ನು ನಾವು ಹುಡುಕಹೋದರೆ, ಅವರ ಮಹಾನ್ ನೈತಿಕಶಕ್ತಿಯ ಗುಟ್ಟನ್ನು ಅರಿಯಹೋದರೆ ನಮಗೆ ಏನು ಕಂಡುಬರುವುದು —ಎಡೆಬಿಡದೆ ಹಲವು ಮುಖ್ಯ ವ್ರತಗಳ ನಿಷ್ಠಾಪೂರ್ಣ ಆಚರಣೆ ಇದೇ ಅವರನ್ನು ಮಹಾತ್ಮರ ಪದಕ್ಕೇರಿಸಿತು.

ಇಲ್ಲಿ ಮುಖ್ಯವಾದ ಹನ್ನೊಂದು ವ್ರತಗಳ ಅರ್ಥ, ವಿವರ, ಆಚರಣೆಯ ರೀತಿ ಇತ್ಯಾದಿಗಳನ್ನು ಗಾಂಧೀಜಿಯವರು ಬಾಲಸುಲಭ ಭಾಷೆಯಲ್ಲಿ ಹೇಳಿದ್ದಾರಲ್ಲದೆ, ವ್ರತಗಳ ಆವಶ್ಯಕತೆ, ಯಜ್ಞದ ಅರ್ಥ ಇವುಗಳನ್ನಾದರೂ ಸ್ಪಷ್ಟೀಕರಿಸಿರುವರು ಎಲ್ಲ ಸಾಧಕರಿಗೂ ಇವು ಅತ್ಯಂತ ಉಪಯುಕ್ತವಾದುವುಗಳು ಎಂಬುದನ್ನು ಬೇರೆ ಹೇಳಬೇಕಾಗಿಲ್ಲ.

---

# ಅನುಕ್ರಮಣಿಕೆ

## ಭಾಗ ೪ : ಮಂಗಳ ಪ್ರಭಾತ ೨೬೭–೩೧೪



---

# ಗೀತಾಮಾತೆ

ಗೀತೆ ಶಾಸ್ತ್ರಗಳ ದೋಹನ ಇಡೀ ಉಪನಿಷತ್ತುಗಳ ಸಾರವೇ ಈ ೭೦೦ ಶ್ಲೋಕಗಳಲ್ಲಿದೆ ಎಂದು ಎಲ್ಲಿಯೋ ಓದಿದ್ದೆ ಆದುದರಿಂದ, ಇನ್ನೇನೂ ಆಗದಿದ್ದರೂ ಗೀತೆಯನ್ನಾದರೂ ತಿಳಿದುಕೊಳ್ಳೋಣ ಎಂದು ನಿಶ್ಚಯಿಸಿದೆ ಈಗ ಗೀತೆ ನನಗೆ ಬರೀ ಬೈಬಲ್ ಮಾತ್ರವಲ್ಲ, ಕೇವಲ ಕುರಾನೇ ಅಲ್ಲ, ನನ್ನ ಪಾಲಿನ ತಾಯಿ ಆಗಿದೆ. ನನ್ನ ಹಡೆದ ತಾಯಿ ಹೋಗಿಬಿಟ್ಟರು ಆದರೆ ಸಂಕಟ-ಬಂದಾಗ ಗೀತಾಮಾತೆಯ ಬಳಿ ಹೋಗಲು ಕಲಿತಿದೇನೆ ಈ ತಾಯಿಯನ್ನು ಶರಣುಹೊಕ್ಕರೆ ಅವನಿಗೆ ಜ್ಞಾನಾಮೃತವನ್ನೂಡಿಸಿ ತೃಪ್ತಿಗೊಳಿಸುತ್ತಾಳೆ.

ಗೀತೆ ಬಹಳ ಗೂಢ ಗ್ರಂಥ ಎನ್ನುತ್ತಾರೆ ಕೆಲವರು ಅನೇಕ ಗ್ರಂಥಗಳನ್ನು ಮನನಮಾಡಿ ಸ್ವರ್ಗೀಯ ಲೋಕಮಾನ್ಯ ತಿಲಕರು ಪಂಡಿತರ ದೃಷ್ಟಿಯಿಂದ ಅದನ್ನು ಅಭ್ಯಾಸಮಾಡಿದರು, ಅದರ ಗೂಢಾರ್ಥಗಳನ್ನು ಬೆಳಕಿಗೆ ತಂದರು ಅದರ ಮೇಲೆ ಒಂದು ಮಹಾಭಾಷ್ಯವನ್ನೂ ಬರೆದರು. ತಿಲಕರಿಗೆ ಇದು ಗೂಢ ಗ್ರಂಥವೆ, ನಮ್ಮಂಥ ಸಾಧಾರಣ ಜನರಿಗೆ ಅದು ಗೂಢವಲ್ಲ ಇಡೀ ಗೀತೆಯನ್ನು ಓದುವುದು ಕಷ್ಟವೆನಿಸಿದರೆ ಮೊದಲಿನ ಮೂರು ಅಧ್ಯಾಯಗಳನ್ನಷ್ಟೇ ಓದಿ ಗೀತೆಯ ಸಾರವೆಲ್ಲವೂ ಈ ಮೂರು ಅಧ್ಯಾಯಗಳಲ್ಲಿ ಬರುತ್ತದೆ ಅದೇ ಮಾತೇ ಉಳಿದ ಅಧ್ಯಾಯಗಳಲ್ಲಿ ಹೆಚ್ಚು ವಿಸ್ತಾರವಾಗಿ, ಅನೇಕ ದೃಷ್ಟಿಗಳಿಂದ ಸಿದ್ಧಮಾಡಲಾಗಿದೆ. ಇದೂ ಕಷ್ಟವೆನಿಸಿದರೆ ಈ ಮೂರು ಅಧ್ಯಾಯಗಳಿಂದ ಕೆಲವು ಶ್ಲೋಕಗಳನ್ನು ಆರಿಸಬಹುದು, ಗೀತೆಯ ಸಾರವೆಲ್ಲ ಬರುವಂತೆ ಗೀತೆಯಲ್ಲಿ ಮೂರು ಕಡೆ ಹೀಗೂ ಬರುತ್ತದೆ: ಎಲ್ಲ ಧರ್ಮಗಳನ್ನೂ ಕೈಬಿಟ್ಟು ಕೇವಲ ನನ್ನ ಶರಣು ಬಾ ಇದಕ್ಕಿಂತ ಹೆಚ್ಚು ಸರಳ, ನೇರ ಉಪದೇಶ ಇನ್ನೇನಿದ್ದೀತು? ಗೀತೆಯಿಂದ ತನಗೊಂದು ಭರವಸೆ ಸಿಗಬೇಕು ಎಂದು ಬಯಸುವವನಿಗೆ ಅದು ಪೂರ್ಣವಾಗಿ ಸಿಗುತ್ತದೆ ಗೀತೆಯ ಭಕ್ತನಾದವನಿಗೆ ನಿರಾಶೆಗೆ ಎಡೆಯೇ ಇಲ್ಲ, ಸದಾ ಆನಂದವಾಗಿ ಇರಬಲ್ಲ

ಇದಕ್ಕೆ ಬುದ್ಧಿವಾದ ಪ್ರಯೋಜನವಿಲ್ಲ, ಅವ್ಯಭಿಚಾರಿಣಿಯಾದ ಭಕ್ತಿ ಬೇಕು ಅವ್ಯಭಿಚಾರಿಣಿ ಭಕ್ತಿಯಿಂದ ಗೀತೆಯ ಸೇವನೆಮಾಡಿ ಅದರಿಂದ ಅಂಥ ಭರವಸೆ ಪಡೆಯದವರನ್ನು ಒಬ್ಬರನ್ನೂ ನಾನು ನೋಡಿಲ್ಲ ಇದುವರೆಗೆ. ವಿದ್ಯಾರ್ಥಿಗಳು ನೀವು ಪರೀಕ್ಷೆಯಲ್ಲಿ ತೇರ್ಗಡೆಯಾಗದಿದ್ದರೆ ನಿರಾಶೆಯ ಕಡಲಿನಲ್ಲಿ ಮುಳುಗುತ್ತೀರಿ ಆದರೆ ನಿರಾಶರಾಗುವವರಿಗೆ ಪುರುಷಾರ್ಥವನ್ನು ಕಲಿಸುತ್ತದೆ ಗೀತೆ, ಆಲಸ್ಯ ವ್ಯಭಿಚಾರಗಳನ್ನು ಬಿಡಿಸುತ್ತದೆ ಒಂದರ ಧ್ಯಾನ, ಇನ್ನೊಂದರ ಮಾತು, ಮತ್ತೊಂದರ ಶ್ರವಣ—ಇದೇ ವ್ಯಭಿಚಾರ ಗೀತೆ ಕಲಿಸುವುದು—ತೇರ್ಗಡೆಯಾಗಲಿ ಆಗದಿರಲಿ, ಎರಡೂ ಒಂದೇ ಸಮ ಮನುಷ್ಯನಿಗೆ ಪ್ರಯತ್ನಮಾಡುವ ಅಧಿಕಾರ ಮಾತ್ರವೆ, ಫಲಕ್ಕೆ ಅಲ್ಲ ಈ ಭರವಸೆಯನ್ನು ಯಾರೂ ಕೊಡಲಾರರು, ಅನನ್ಯಭಕ್ತಿಯಿಂದ ಮಾತ್ರ ದೊರೆ ತೀತು ಸತ್ಯಾಗ್ರಹಿಯಂತೆ ಹೇಳುತ್ತೇನೆ—ಇದರಿಂದ ದಿನವೂ ನನಗೆ ಏನೋ ಹೊಸಹೊಸದು ಸಿಗುತ್ತಲೇ ಇರುತ್ತದೆ ಇದು ನಿನ್ನ ಮೂರ್ಖತನ ಎನ್ನ ಬಹುದು ಯಾರಾದರೂ, ನನಗೆ ಈ ಮೂರ್ಖತನವೇ ದೃಢವಾಗಿರಲಿ ಎಂದೇನು. ಆದುದರಿಂದ ಬೆಳಗ್ಗೆ ಎದ್ದು ಗೀತೆಯನ್ನು ಅಭ್ಯಾಸಮಾಡಲಿ ವಿದ್ಯಾರ್ಥಿಗಳು ಎನ್ನುತ್ತೇನೆ ನಾನು ತುಲಸೀದಾಸರ ಭಕ್ತ ಆದರೆ ನಿಮಗೆ ಈಗ ತುಲಸೀ ದಾಸರನ್ನು ಓದಲು ಹೇಳುವುದಿಲ್ಲ ವಿದ್ಯಾರ್ಥಿಗಳಾಗಿ ನೀವು ಗೀತೆಯನ್ನು ಅಭ್ಯಾಸಮಾಡಿ , ದ್ವೇಷದಿಂದಲ್ಲ, ಭಕ್ತಿಯಿಂದ ಭಕ್ತಿಪೂರ್ವಕ ಅದನ್ನು ಪ್ರವೇಶಮಾಡಿದರೆ ನಿಮಗೇನು ಬೇಕೋ ಅದು ಸಿಕ್ಕೀತು ಹದಿನೆಂಟು ಅಧ್ಯಾಯಗಳನ್ನು ಬಾಯಿಪಾಠ ಮಾಡುವುದು ಆಟವಲ್ಲ ಆದರೂ ಮಾಡ ಬೇಕಾದುದೇ ಸರಿ ಒಮ್ಮೆ ಅದನ್ನು ಆಶ್ರಯಿಸಿದರೆ ಸಾಕು, ದಿನದಿನಕ್ಕೆ ನಿಮಗೆ ಅದರಲ್ಲಿ ಅನುರಾಗ ಬೆಳೆದೀತು ನಿಮಗೇ ತಿಳಿಯುತ್ತದೆ ಆಮೇಲೆ ನೀವು ಸೆರೆಮನೆಯಲ್ಲಿರಿ ಅಡವಿಯಲ್ಲಿರಿ, ಆಕಾಶದಲ್ಲಿರಿ ಕತ್ತಲೆ ಕೋಣೆಯಲ್ಲಿರಿ ಗೀತೆಯ ಪಾರಾಯಣ ನಿರಂತರವೂ ನಿಮ್ಮ ಹೃದಯದಲ್ಲಿ ಸಾಗಿದ್ದೀತು, ಅದರಿಂದ ನಿಮಗೆ ಆಶ್ವಾಸನ ದೊರೆತೀತು ಈ ಆಧಾರವನ್ನು ನಿಮ್ಮಿಂದ ಯಾರೂ ಕಸಿದುಕೊಳ್ಳಲಾರರು ಇದರ ಪಠನದಲ್ಲಿ ಪ್ರಾಣ ನೀಗಿದವರಿಗಂತೂ ಅದು ಸರ್ವಸ್ವವೆ, ಕೇವಲ ನಿರ್ವಾಣವಲ್ಲ—ಬ್ರಹ್ಮನಿರ್ವಾಣ

---

# ಗೀತೆಯ ಪ್ರಥಮ ಪರಿಚಯ

ವಿಲಾಯತಿಯಲ್ಲಿದ್ದು ಒಂದು ವರ್ಷವಾಗಿತ್ತೇನೋ, ಅಷ್ಟರೊಳಗೆ ಇಬ್ಬರು ಥಿಯಾಸಫಿಸ್ಟ್ ಗೆಳೆಯರ ಭೇಟಿಯಾಯಿತು ಇಬ್ಬರೂ ಅಣ್ಣತಮ್ಮಂದಿರು. ಇಬ್ಬರಿಗೂ ಮದುವೆಯಿಲ್ಲ ಅವರು ನನಗೆ ಗೀತೆಯ ವಿಷಯವನ್ನು ಹೇಳಿದರು ಗೀತೆಗೆ ಎಡ್ವಿನ್ ಆರ್ನಾಲ್ಡ್ ಬರೆದ ಭಾಷಾಂತರವನ್ನು ಆಗ ಅವರು ಓದುತ್ತಿದ್ದರು ತಮ್ಮ ಜೊತೆಯಲ್ಲಿ ಮೂಲ ಸಂಸ್ಕೃತವನ್ನು ಓದಲು ಕೇಳಿದರು ನನಗೆ ನಾಚಿಕೆಯಾಯಿತು ಸಂಸ್ಕೃತವೂ ಇಲ್ಲ, ಉಳಿದ ಭಾಷೆಯೂ ಇಲ್ಲ, ಗೀತೆಯನ್ನೇ ಓದಿರಲಿಲ್ಲ ನಾನು ಸಂಕೋಚದಿಂದ ಇದನ್ನು ಅವರಿಗೆ ತಿಳಿಸಿದೆ ಆದರೆ ಅದರ ಜತೆಯಲ್ಲಿ ನಿಮ್ಮ ಸಂಗಡ ಕೂತು ಓದಲು ಸಿದ್ಧ ಎಂದೂ ಹೇಳಿದೆ. ನನಗೆ ಸಂಸ್ಕೃತಜ್ಞಾನ ಸೊನ್ನೆ ಆದರೂ ಅನುವಾದ ಎಲ್ಲಾದರೂ ಗೊಂದಲವಾಗಿದ್ದರೆ ಅದನ್ನು ತೋರಿಸಬಲ್ಲೆ ಹೀಗೆ ಈ ಅಣ್ಣತಮ್ಮಂದಿರ ಜೊತೆಯಲ್ಲಿ ನನ್ನ ಗೀತಾಪಾಠ ಮೊದಲಾಯಿತು ಎರಡನೆ ಅಧ್ಯಾಯದ ಕೊನೆಯ

> ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।
> ಸಂಗಾತ್ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ ॥
> ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ ।
> ಸ್ಮೃತಿಭ್ರಂಶಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥

ಎಂಬ ಶ್ಲೋಕಗಳು ನನ್ನ ಮನಸ್ಸಿನ ಮೇಲೆ ಗಾಢ ಪ್ರಭಾವವನ್ನು ಬೀರಿದವು ಕಿವಿಯಲ್ಲಿ ಹಗಲೂ ಇರುಳೂ ಅದರ ಧ್ವನಿಯೇ ಕೇಳಿಸುತ್ತಿತ್ತು ಭಗವದ್ಗೀತೆ ಅಮೂಲ್ಯ ಗ್ರಂಥವೆಂದು ನನಗೆ ಆಗ ತಿಳಿಯಿತು ಆ ನಂಬಿಕೆ ದಿನದಿನಕ್ಕೆ ಹೆಚ್ಚು ಬೆಳೆಯಿತು ಈಗಂತೂ ತತ್ತ್ವಜ್ಞಾನಕ್ಕೆ ಅದೇ ಸರ್ವೋತ್ತಮ ಗ್ರಂಥ ಎಂದು ತಿಳಿದಿದೇನೆ. ನಿರಾಶೆಯ ವೇಳೆಯಲ್ಲಿ ಈ ಗ್ರಂಥ ನನಗೆ ಅಮೂಲ್ಯ ಸಹಾಯ ಮಾಡಿದೆ ಇದರ ಇಂಗ್ಲೀಷ್ ಅನುವಾದಗಳನ್ನೆಲ್ಲಾ ಬಹುಶಃ ಓದಿದೇನೆ ಅದರಲ್ಲಿ ಎಡ್ವಿನ್ ಆರ್ನಾಲ್ಡರ ಅನುವಾದ ಸರ್ವಶ್ರೇಷ್ಠವೆನಿಸುತ್ತದೆ ಮೂಲಗ್ರಂಥದ ಭಾವವನ್ನು ಚೆನ್ನಾಗಿ ಕಾಯ್ದಿದಾರೆ ಅನುವಾದದ ಹಾಗೇ ಕಾಣದು. ಈ ವೇಳೆಗೆ ನಾನು ಭಗವದ್ಗೀತೆಯನ್ನು ಚೆನ್ನಾಗಿ ಅಧ್ಯಯನ

ಮಾಡಿದೆ ಎನ್ನಲಾರೆ ಅದರ ನಿತ್ಯಪಾರಾಯಣವಂತೂ ಅನೇಕ ವರ್ಷಗಳ ತರುವಾಯ ಮೊದಲಾಯಿತು.*

---

## ಗೀತೆಯ ಅಧ್ಯಯನ

ಗೀತೆಯ ಅಧ್ಯಯನವನ್ನು ಮೊದಲಿಟ್ಟೆ ಚಿಕ್ಕದೊಂದು 'ಜಿಜ್ಞಾಸು ಮಂಡಲ'ವನ್ನು ಮಾಡಿದೆವು ನಿಯಮಪೂರ್ವಕವಾಗಿ ಅಧ್ಯಯನ ಮೊದಲಾಯಿತು ಗೀತೆಯ ಬಗ್ಗೆ ಪ್ರೇಮ, ಶ್ರದ್ಧೆ ಮೊದಲಿಂದಲೂ ಇತ್ತು. ಈಗ ಅದರ ರಹಸ್ಯವನ್ನು ಆಳವಾಗಿ ಅರಿತುಕೊಳ್ಳುವ ಆವಶ್ಯಕತೆ ಕಂಡುಬಂತು ನನ್ನಲ್ಲಿ ಒಂದೆರಡು ಅನುವಾದ ಇದ್ದವು. ಅದರ ಸಹಾಯದಿಂದ ಮೂಲ ಸಂಸ್ಕೃತವನ್ನು ಅರಿಯುವ ಪ್ರಯತ್ನಮಾಡಿದೆ ದಿನವೂ ಒಂದೋ ಎರಡೋ ಶ್ಲೋಕಗಳನ್ನು ಬಾಯಿಪಾಠ ಮಾಡಲು ನಿಶ್ಚಯಿಸಿದೆ

ಬೆಳಗ್ಗೆ ಹಲ್ಲುಜ್ಜಿಕೊಳ್ಳುವಾಗ ಸ್ನಾನಮಾಡುವಾಗ ಗೀತೆಯ ಬಾಯಿಪಾಠ ಮಾಡಲು ತೊಡಗಿದೆ ಮುಖ ತೊಳೆಯಲು ೧೫, ಸ್ನಾನಕ್ಕೆ ೨೦ ನಿಮಿಷ ಹಿಡಿಯುತ್ತಿತ್ತು ಇಂಗ್ಲೀಷರ ಪದ್ಧತಿಯಂತೆ ನಿಂತುಕೊಂಡೇ ಹಲ್ಲುಜ್ಜುತ್ತಿದ್ದೆ ಎದುರಿಗೆ ಗೋಡೆಯ ಮೇಲೆ ಗೀತೆಯ ಶ್ಲೋಕವನ್ನು ಬರೆದು ಅಂಟಿಸುತ್ತಿದ್ದೆ ಅದನ್ನು ನೋಡಿ ಬಾಯಿಪಾಠ ಮಾಡುತ್ತಿದ್ದೆ. ಹೀಗೆ ಬಾಯಿಪಾಠ ಮಾಡಿದ ಶ್ಲೋಕ ಸ್ನಾನಮಾಡುವ ಹೊತ್ತಿಗೆ ಗಟ್ಟಿಯಾಗಿ ಬರುತ್ತಿತ್ತು ನಡುವೆ ಹಿಂದಿನ ಶ್ಲೋಕಗಳನ್ನು ಮತ್ತೆ ಹೇಳುತ್ತಿದ್ದೆ ಹೀಗೆ ೧೩ ಅಧ್ಯಾಯಗಳನ್ನು ಬಾಯಿಪಾಠ ಮಾಡಿದ್ದು ನೆನಪಿದೆ ಆಮೇಲೆ ಕೆಲಸದ ಜಂಜಾಟ ಹೆಚ್ಚಿತು ಸತ್ಯಾಗ್ರಹ ಹುಟ್ಟಿತು ಆ ಮಗುವಿನ ಪಾಲನೆಯ ಭಾರ ನನ್ನ ಮೇಲೆ ಬಿತ್ತು ವಿಚಾರ ಮಾಡುವ ಸಮಯವನ್ನು ಅದರ ಲಾಲನೆಪಾಲನೆಯಲ್ಲೇ ಕಳೆಯಬೇಕಾಯಿತು ಈಗೂ ಹಾಗೇ ಕಳೆಯುತ್ತಿದೆ

---

*ಆತ್ಮಕಥೆ

ಗೀತಾಪಾರದ ಪರಿಣಾಮ ನನ್ನ ಜೊತೆಗಾರರ ಮೇಲೆ ಏನಾಯಿತೋ, ನನಗಂತೂ ಒಂದು ಪ್ರೌಢಮಾರ್ಗದರ್ಶಿನಿಯಾಗಿದೆ. ಅದು ನನ್ನ ಧಾರ್ಮಿಕ ಕೋಶ ಅಪರಿಚಿತ ಇಂಗ್ಲಿಷ್ ಶಬ್ದಕ್ಕೆ ಅರ್ಥ ಹುಡುಕಲು ಇಂಗ್ಲಿಷ್ ನಿಘಂಟನ್ನು ಹುಡುಕುವಂತೆ ಆಚಾರದ ತೊಡಕನ್ನು ಬಿಡಿಸಲು ಗೀತೆಯನ್ನು ಆಶ್ರಯಿಸುತ್ತೇನೆ ಅಪರಿಗ್ರಹ, ಸಮಭಾವ ಮುಂತಾದ ಅದರ ಶಬ್ದಗಳು ನನ್ನನ್ನು ನೆರೆ ಹಿಡಿದಿವೆ ಸಮಭಾವವನ್ನು ಹೇಗೆ ಗಳಿಸಲಿ, ಪಾಲಿಸಲಿ ಎಂಬುದೇ ಗುಂಗು. ನನಗೆ ಅಪಮಾನ ಮಾಡಿದ ಅಧಿಕಾರಿ, ಲಂಚಗುಳಿ, ದಾರಿಯಲ್ಲಿ ಹೋಗುವಾಗ ನಮಗೆ ಅಡ್ಡಬರುವವನು, ನಿನ್ನೆ ನಮ್ಮ ಸಂಗಾತಿಯಾಗಿದ್ದವನು, ಇಂಥವರಿಗೂ ನಮಗೆ ದೊಡ್ಡ ಉಪಕಾರಮಾಡಿದ ಸಜ್ಜನರಿಗೂ ಏನೂ ಭೇದವಿಲ್ಲವೆ? ಅಪರಿಗ್ರಹದ ಪಾಲನೆ ಹೇಗೆ ಸಾಧ್ಯ? ನಮ್ಮ ದೇಹವೇನು ಕಡಮೆ ಪರಿಗ್ರಹವೆ? ಗಂಡ–ಹೆಂಡತಿ ಎಂಬುದೆಲ್ಲ ಪರಿಗ್ರಹವಲ್ಲದೆ ಮತ್ತೇನು? ಪುಸ್ತಕ ತುಂಬಿರುವ ಈ ಅಲಮಾರಿಗೆ ಬೆಂಕಿ ಇಡಲೆ? ಮನೆ ಸುಟ್ಟು ತೀರ್ಥಯಾತ್ರೆಗೆ ಹೊರಟಂತೆ ಆಯಿತಲ್ಲ? ಒಡನೆಯೆ ಒಳಗಿನಿಂದ ಉತ್ತರ ಬಂತು—ಮನೆಮಾರು ಸುಡದೆ ಮಹಾದೇವನ ಯಾತ್ರೆಯೆ? ಇಂಗ್ಲೀಷ್ ಕಾನೂನಿನ ಅಧ್ಯಯನ ನನಗೆ ಇದರಲ್ಲಿ ನೆರವಾಯಿತು ಸ್ನೇಲ್ ಬರೆದ ಕಾನೂನಿನ ಸಿದ್ಧಾಂತಗಳ ಚರ್ಚೆ ನೆನಪಾಯಿತು ಟ್ರಸ್ಟೀ ಶಬ್ದದ ಅರ್ಥ ಗೀತೆಯನ್ನು ಅಧ್ಯಯನಮಾಡಿದಾಗ ಚೆನ್ನಾಗಿ ತಿಳಿಯಿತು ಶಾಸನಶಾಸ್ತ್ರದಲ್ಲಿ ಆದರ ಹೆಚ್ಚಿತು, ಅದರಲ್ಲೂ ಧರ್ಮ ತತ್ತ್ವ ಕಂಡುಬಂತು ಟ್ರಸ್ಟೀಗಳಲ್ಲಿ ಕೋಟಿಗಟ್ಟಲೆ ಐಶ್ವರ್ಯವಿದ್ದರೂ ಅದರಲ್ಲಿ ಒಂದು ಕಾಸಿನ ಮೇಲೂ ಅವರಿಗೆ ಅಧಿಕಾರವಿಲ್ಲ ಮುಮುಕ್ಷುವಿನ ಆಚರಣೆಯೂ ಹಾಗೆಯೆ ಇರಬೇಕು ಈ ಪಾಠವನ್ನು ಗೀತೆಯಿಂದ ಕಲಿತೆ ಅಪರಿಗ್ರಹಿಯಾಗಲು ಸಮಭಾವವಿಡಲು ಹೇತುವಿನಲ್ಲಿ ಹೃದಯದಲ್ಲಿ ಪರಿವರ್ತನೆಯಾಗಬೇಕು ಈ ಮಾತು ದೀಪದಂತೆ ನಿಚ್ಚಳವಾಗಿ ಕಾಣತೊಡಗಿತು ನನಗೆ ಸರಿ, ಕೂಡಲೆ ವಿಮೆಯ ಪಾಲಿಸಿಯನ್ನು ಮುಕ್ತಾಯಮಾಡುವಂತೆ ರೇವಾಶಂಕರ ಭಾಯಿಗೆ ಬರೆದೆ ಏನಾದರೂ ನಾಲ್ಕು ಹಣ ಕೈಗೆ ಬಂದರೂ ಸರಿ, ಬಾರದಿದ್ದರೂ ಸರಿಯೆ, ಮಕ್ಕಳನ್ನೂ ಹೆಂಡತಿಯನ್ನೂ ಕಾಪಾಡುವವನು ಅವರನ್ನೂ ನಮ್ಮನ್ನೂ ಹುಟ್ಟಿಸಿದ ಭಗವಂತ ಹೀಗಿತ್ತು ಆ ಪತ್ರದ ಆಶಯ ತಂದೆಯ ಸಮಾನರಾದ ಹಿರಿಯಣ್ಣನಿಗೆ ಬರೆದೆ: 'ಇಂದಿನವರೆಗೆ ಮಿಗಿಸಿದುದನ್ನೆಲ್ಲ ನಿಮಗೆ

ಅರ್ಪಿಸಿದೇನೆ ಇನ್ನು ನನ್ನ ಆಸೆ ಬಿಡಿ. ಇನ್ನುಮೇಲೆ ಉಳಿದುದನ್ನೆಲ್ಲ ಇಲ್ಲಿನ ಸಾರ್ವಜನಿಕ ಕೆಲಸಕ್ಕೆ ಉಪಯೋಗಿಸುತ್ತೇನೆ'

---

## ಗೀತಾಧ್ಯಾನ

ಕಲ್ಪನೆಯ ಚಿತ್ರ ಯಾವುದನ್ನಾದರೂ ಚಿತ್ರಿಸಿದ್ದರೆ, ಅದನ್ನು ಧ್ಯಾನಿಸಿದ್ದರೆ ಏನೂ ದೋಷವೆನಿಸದು ನನಗೆ. ಆದರೆ ಗೀತಾಮಾತೆಯ ಧ್ಯಾನದಲ್ಲಿ ಸಂತೋಷ ವಾಗುತ್ತಿದ್ದರೆ ಮತ್ತೇನು ಬೇಕು ? ಗೀತೆಯ ಧ್ಯಾನ ಎರಡು ಬಗೆಯಲ್ಲಿ ಆಗ ಬಹುದು : ಒಂದು, ಗೀತೆಯನ್ನು ತಾಯಿಯೆಂದು ಬಗೆವುದು ಅದಕ್ಕೆ ತಾಯಿಯ ಚಿತ್ರ ಎದುರಿಗಿರಬೇಕು ಎಂದರೆ, ತನ್ನ ತಾಯಿಯಲ್ಲೇ, ಆಕೆ ತೀರಿ ಕೊಂಡಿದ್ದರೆ, ಕಾಮಧೇನುವನ್ನು ಆರೋಪಿಸಿ ಗೀತೆಯೆಂದು ಭಾವಿಸಿ ಅದರ ಧ್ಯಾನಮಾಡಬೇಕು ಅಥವಾ ಯಾವುದಾದರೂ ಕಾಲ್ಪನಿಕ ಚಿತ್ರವನ್ನು ಮೂಡಿಸಬಹುದು ಗೋಮಾತೆಯ ರೂಪವನ್ನು ಕೊಟ್ಟರೂ ನಡೆದೀತು ಎರಡನೆ ಬಗೆ ಸಾಧ್ಯವಾದರೆ ಹೆಚ್ಚು ಒಳ್ಳೆಯದು ಎಂದುಕೊಂಡಿದೇನೆ ನಾವು ಯಾವಾಗಲೂ ಹೇಳುವ ಅಧ್ಯಾಯದ್ದೋ ಅಥವಾ ಯಾವ ಅಧ್ಯಾಯದ್ದಾದರೂ ಒಂದು ಶ್ಲೋಕದ ಅಥವಾ ಶಬ್ದದ ಧ್ಯಾನ ಅಥವಾ ಚಿಂತನಮಾಡುವುದು ಗೀತೆಯಲ್ಲೆಷ್ಟು ಶಬ್ದ ಇವೆಯೋ ಅಷ್ಟೂ ಅದರ ಒಡವೆಗಳೇ. ಪ್ರಿಯಜನರ ಒಡವೆಗಳ ಧ್ಯಾನವೂ ಅವರ ಧ್ಯಾನಕ್ಕೆ ಸಮಾನ ಗೀತೆಯದೂ ಹೀಗೇ. ಇದಲ್ಲದೆ ಬೇರೆ ಬಗೆ ಯಾರಿಗಾದರೂ ಲಭಿಸಿದರೆ ಅವರು ಅದೇ ಬಗೆಯಲ್ಲಿ ಧ್ಯಾನಿಸಲಿ ಎಷ್ಟು ಬುದ್ಧಿಯೋ ಅಷ್ಟು ಬಗೆ ಯಾರಿಬ್ಬರೂ ಒಂದೇ ರೀತಿ ಒಂದೇ ವಸ್ತುವನ್ನು ಧ್ಯಾನಿಸರು ಇಬ್ಬರ ಕಲ್ಪನೆ–ವರ್ಣನೆಗಳಲ್ಲಿ ಸ್ವಲ್ಪ ವಾದರೂ ವ್ಯತ್ಯಾಸವಿದ್ದೇ ಇರುತ್ತದೆ

ಆರನೆ ಅಧ್ಯಾಯದಂತೆ ಎಷ್ಟೇ ಸ್ವಲ್ಪ ಮಾಡಿದರೂ ಸಾಧನೆ ವ್ಯರ್ಥ ವಾಗದು ಈ ಜನ್ಮದಲ್ಲಿ ನಿಂತಲ್ಲಿಂದ ಮುಂದಿನ ಜನ್ಮದಲ್ಲಿ ಮುಂಬರಿಯುತ್ತದೆ. ಇದೇ ರೀತಿ ಕಲ್ಯಾಣಮಾರ್ಗದಲ್ಲಿ ಹೋಗಬೇಕೆಂಬ ಇಚ್ಛೆಯಿದ್ದೂ ಅದರಂತೆ

ನಡೆಯುವ ಶಕ್ತಿಯಿಲ್ಲದವರಿಗೆ ಮುಂದಿನ ಜನ್ಮದಲ್ಲಿ ಆ ಇಚ್ಛೆ ದೃಢವಾಗುವ ಅವಕಾಶ ಅಗತ್ಯವಾಗಿ ಸಿಗುತ್ತದೆ ಇದರಲ್ಲೂ ನನ್ನ ಮನಸ್ಸಿನಲ್ಲಿ ಸಂದೇಹವಿಲ್ಲ. ಹಾಗಾದರೆ ಈ ಜನ್ಮದಲ್ಲಿ ಸ್ವಲ್ಪ ಸಡಿಲಾಗಿದ್ದರೂ ಚಿಂತೆಯಿಲ್ಲ ಎಂದು ಇದಕ್ಕೆ ಅರ್ಥ ಮಾಡಲಾಗದು ಅಂಥ ಇಚ್ಛೆ ಇಚ್ಛೆಯಲ್ಲ, ಅಥವಾ ಬೌದ್ಧಿಕ ಇಚ್ಛೆ, ಹಾರ್ದಿಕವಲ್ಲ, ಬೌದ್ಧಿಕ ಇಚ್ಛೆಗೆ ಸ್ಥಾನವೇ ಇಲ್ಲ ಸತ್ತಮೇಲೆ ಅದು ಇರದು. ಆದರೆ ಹೃದಯದಲ್ಲಿ ಇಚ್ಛೆ ನೆಟ್ಟರೆ ಅದಕ್ಕೆ ಪ್ರಯತ್ನ ನಡೆದು ತೀರುತ್ತದೆ ಆದರೆ ಶರೀರದ ಬಲಹೀನತೆಯಿಂದಾಗಿ ಅನೇಕ ಕಾರಣಗಳ ದೆಸೆಯಿಂದ ಈ ಜನ್ಮದಲ್ಲಿ ಇಚ್ಛೆ ಪೂರ್ಣವಾಗದು. ಈ ಬಗೆಯ ಅನುಭವ ನಮಗೆ ನಿತ್ಯವೂ ಆಗುತ್ತಿದೆ ಆದರೆ ಈ ಇಚ್ಛೆಯಿರುವಂತೆಯೇ ದೇಹವನ್ನು ಬಿಟ್ಟರೆ ಮುಂದಿನ ಜನ್ಮದಲ್ಲಿ ಈ ಜನ್ಮದ ಉಪಾಧಿಗಳು ಕಡಮೆಯಾಗಿ ಈ ಇಚ್ಛೆ ಫಲಿಸುತ್ತದೆ ಇಲ್ಲವೆ ದೃಢವಾಗುತ್ತದೆ. ಹೀಗೆ ಕಲ್ಯಾಣಕೃತನು ಎಡೆಬಿಡದೆ ಮುಂದೆ ಸಾಗುತ್ತಿರುತ್ತಾನೆ

ನಿವೃತ್ತಿನಾಥರು ಬದುಕಿದ್ದಾಗ ಜ್ಞಾನೇಶ್ವರರು ಅವರ ಧ್ಯಾನಮಾಡಿದ್ದರೆ ಮಾಡಿರಲಿ ಅದು ನಮಗೆ ಅನುಕರಣೀಯವಲ್ಲವೆಂದು ನನ್ನ ದೃಢಾಭಿಪ್ರಾಯ ಧ್ಯಾನಿಸಬೇಕಾದ ವ್ಯಕ್ತಿ ಪೂರ್ಣತೆಯನ್ನು ಪಡೆದಿರುವಂಥವನಾಗಬೇಕು ಜೀವಂತ ವ್ಯಕ್ತಿಯ ಬಗ್ಗೆ ಇಂಥ ಅಭಿಪ್ರಾಯವಿಡುವುದು ಸರಿಯಲ್ಲ, ಅನಗತ್ಯವೂ ಹೌದು ಜ್ಞಾನೇಶ್ವರರು ಶರೀರಧಾರಿ ನಿವೃತ್ತಿನಾಥರ ಧ್ಯಾನವನ್ನೆ ಮಾಡಿರಬಹುದು. ನಾವು ಈ ಜಗಳದಲ್ಲೇಕೆ ಬೀಳಬೇಕು ? ಜೀವಂತ ಮೂರ್ತಿಯ ಧ್ಯಾನದ್ದೇ ಪ್ರಶ್ನೆಯಿದ್ದಾಗ ಕಲ್ಪನೆಯ ಮೂರ್ತಿಯ ಮಾತಿಗೆಲ್ಲಿ ಅವಕಾಶ ? ಇದನ್ನು ಉಲ್ಲೇಖಿಸಿ ಉತ್ತರ ಕೊಟ್ಟರೆ ಅದರಿಂದ ಬುದ್ಧಿಭ್ರಂಶವಾದೀತು

ಮೊದಲನೆ ಅಧ್ಯಾಯದಲ್ಲಿ ಕೊಟ್ಟಿರುವ ಹೆಸರುಗಳೆಲ್ಲವೂ ವ್ಯಕ್ತಿವಾಚಕಗಳಲ್ಲ ಗುಣಸೂಚಕಗಳೆಂದೇ ನನ್ನ ಅಭಿಪ್ರಾಯ ದೈವೀ–ಆಸುರೀ ವೃತ್ತಿಗಳ ನಡುವಿನ ಹೋರಾಟವನ್ನು ವರ್ಣಿಸುತ್ತ ಕವಿ ವ್ಯಕ್ತಿಗಳನ್ನು ಮೂರ್ತಿಮಂತವಾಗಿಸಿದಾನೆ ಕೌರವ–ಪಾಂಡವರ ನಡುವೆ ಹಸ್ತಿನಾಪುರದ ಬಳಿ ನಿಜವಾಗಿಯೂ ಯುದ್ಧ ನಡೆದಿರಬಹುದು ಈ ಕಲ್ಪನೆಯಲ್ಲಿ ಕವಿ ಅದನ್ನು ನಿರಾಕರಿಸಿಲ್ಲ ಆ ಕಾಲದ ಒಂದು ದೃಷ್ಟಾಂತವನ್ನು ತೆಗೆದುಕೊಂಡು ಕವಿ ಈ ಮಹಾಕಾವ್ಯವನ್ನು ಬರೆದಿದಾನೆಂದು ನನ್ನ ಊಹೆ. ಇದು ತಪ್ಪೇ ಇರಬಹುದು.

ಅಥವಾ ಈ ಹೆಸರೆಲ್ಲವೂ ಐತಿಹಾಸಿಕವಾದರೆ ಐತಿಹಾಸಿಕ ಆರಂಭಕ್ಕಾಗಿ ಈ ಹೆಸರನ್ನು ಕೊಡುವುದು ತಪ್ಪೆಂದೂ ಹೇಳುವಂತಿಲ್ಲ ವಿಷಯ ವಿಚಾರಕ್ಕೆ ಮೊದಲನೆ ಅಧ್ಯಾಯ ಅಗತ್ಯ ಆದುದರಿಂದ ಗೀತೆಯನ್ನು ಪಾರಮಾಡುವಾಗ ಅದನ್ನೂ ಪಾರಮಾಡುವುದು ಅಗತ್ಯ *

ವೆಲಿಂಗ್‌ಟನ್ ಕನ್ವೆನ್‌ಷನ್ನಿಗೆ ಮಿ ಬೇಕರ್ ನನ್ನನ್ನು ಕ್ರಿಸ್ತನನ್ನಾಗಿ ಮಾಡಲು ಕರೆದೊಯ್ದ ದಿನ ನೆನಪಾಗುತ್ತಿದೆ ಅವರು ಯಾವಾಗಲೂ ನನ್ನೊಡನೆ ಚರ್ಚೆಮಾಡುತ್ತಿದ್ದರು ನನ್ನೊಳಗೆ ಶ್ರದ್ಧೆ ಹುಟ್ಟಿಸಿರಿ ಎನ್ನುತ್ತಿದ್ದೆ ನಾನು. ನನ್ನ ಮೇಲೆ ನೀವು ಎಂಥ ಒಳ್ಳೆಯ ಪ್ರಭಾವ ಬೀರಲು ಬಯಸಿದರೂ ಬೀರಗೊಡಲು ನಾನು ಸಿದ್ಧ ಹಾಗಾದರೆ ವೆಲಿಂಗ್‌ಟನ್ ಕನ್ವೆನ್‌ಷನ್ನಿಗೆ ಹೋಗೋಣ ಎಂದರು. ಅಲ್ಲಿಗೆ ಸಮರ್ಥರಾದ ಜನ ಬರುತ್ತಾರೆ ಅವರ ಭೇಟಿಯಾದರೆ ನಿನಗೆ ನಂಬಿಕೆ ಹುಟ್ಟದೆ ಇರದು ಎಂದರು ಇಡೀ ಗಾಡಿಯಲ್ಲಿ ಬಿಳಿಯರು ಕೂತಿದ್ದರು ನಾನೊಬ್ಬ ಒಂಟಿಯಾಗಿ ಮೇಲಿನ ಹಲಗೆಯ ಮೇಲೆ ಮುದುಡಿಕೊಂಡು ಕೂತಿದ್ದೆ ಅವರು ಹೇಳಿದರು 'ನೋಡಿ, ಹಿಕ್ಸ್ ನದಿ ಬಂತು, ಎಂಥ ಭವ್ಯ ಪ್ರದೇಶ ನೋಡಿ, ಸೂರ್ಯೋದಯವನ್ನು ನೋಡಿ' ನಾನು ಕೆಳಗಿಳಿಯಲೇ ಇಲ್ಲ ಹನ್ನೊಂದನೆ ಅಧ್ಯಾಯವನ್ನು ಪಠಿಸುತ್ತಿದ್ದೆ. ಬೇಕರ್ 'ಅದೇನು ಓದುತ್ತಿದೀಯೆ?' ಎಂದು ಕೇಳಿದರು 'ಭಗವದ್ಗೀತೆ' ಎಂದೆ ಬೈಬಲ್ ಓದುವುದಿಲ್ಲವಲ್ಲ, ಎಂಥ ಮೂರ್ಖ ಇವನು ಎನಿಸಿರಬೇಕು ಅವರಿಗೆ! ಆದರೆ ಏನು ಮಾಡುತ್ತಾರೆ? ನನ್ನನ್ನು ಬಲಾತ್ಕಾರಮಾಡಬೇಕಾಗಿರಲಿಲ್ಲ ಕನ್‌ವೆನ್‌ಷನ್ ನನ್ನ ಪಾಲಿಗೆ ವಿಶೇಷ ಪ್ರಾರ್ಥನೆಯಾಯಿತು. ಆದರೆ ನಾನು ಹೋದವನು ಹೋದ ಹಾಗೇ ಹಿಂದಿರುಗಿದೆ †

---

*ಮಹಾದೇವಭಾಯಿಯ ಡೈರಿ, ಭಾಗ ೧—೨೨೪ ಪುಟ

†ಮಹಾದೇವಭಾಯಿಯ ಡೈರಿ, ೧೨-೬-೧೯೩೨

# ಗೀತೆಯ ಬಗ್ಗೆ ಶ್ರದ್ಧೆ

ಆಮೇಲೆ ಒಬ್ಬ 'ವಿಶಾಲಬುದ್ಧಿ' ಪುರುಷ—ಗೀತೆಯ ಪ್ರಣೇತ ಹುಟ್ಟಿದ. ಹಿಂದೂ ಸಮಾಜದ ಆಳವಾದ ತತ್ತ್ವಜ್ಞಾನ ತುಂಬಿದ, ಮುಗ್ಧ ಜಿಜ್ಞಾಸುವಿಗೂ ಸಹಜವಾಗಿಯೆ ಅರ್ಥವಾಗುವ, ಹಿಂದೂ ಧರ್ಮದ ದೋಹನ ವನ್ನು ಅರ್ಪಿಸಿದ ಹಿಂದೂ ಧರ್ಮವನ್ನು ಅಧ್ಯಯನಮಾಡುವ ಬಯಕೆ ಯುಳ್ಳ ಪ್ರತಿಯೊಬ್ಬ ಹಿಂದುವಿಗೂ ಇದು ಏಕಮಾತ್ರ ಸುಲಭ ಗ್ರಂಥ. ಉಳಿದೆಲ್ಲ ಧರ್ಮಶಾಸ್ತ್ರಗಳೂ ಸುಟ್ಟುಬೂದಿಯಾದರೂ ಈ ಅಮರ ಗ್ರಂಥದ ಏಳುನೂರು ಶ್ಲೋಕ ಸಾಕು ಹಿಂದೂ ಧರ್ಮ ಏನೆಂಬುದನ್ನು ತೋರಿಸಲಿಕ್ಕೆ, ಅದನ್ನು ಜೀವನದಲ್ಲಿ ತರುವುದೆಂತೋ ತಿಳಿಸಲಿಕ್ಕೆ ನಾನು ಸನಾತನಿ ಎನ್ನು ತ್ತೇನೆ ಏಕೆಂದರೆ, ನಲವತ್ತು ವರ್ಷಗಳಿಂದ ಆ ಗ್ರಂಥದ ಉಪದೇಶವನ್ನು ಜೀವನದಲ್ಲಿ ಅಕ್ಷರಶಃ ಮೂಡಿಸಲು ಪ್ರಯತ್ನಿಸುತ್ತ ಬಂದಿದೇನೆ ಗೀತೆಯ ಮುಖ್ಯ ಸಿದ್ಧಾಂತಕ್ಕೆ ವಿಪರೀತವಾದುದೇನೇ ಇದ್ದರೂ ಅದನ್ನು ಹಿಂದೂ ಧರ್ಮಕ್ಕೆ ವಿರುದ್ಧವೆಂದು ಕೈಬಿಟ್ಟಿದೇನೆ. ಗೀತೆಯಲ್ಲಿ ಯಾವ ಧರ್ಮದ ಬಗ್ಗೆಯೂ ಧರ್ಮಗುರುವಿನ ಬಗ್ಗೆಯೂ ದ್ವೇಷವಿಲ್ಲ ಗೀತೆಯಲ್ಲಿ ಎಷ್ಟು ಪೂಜ್ಯ ಭಾವವೋ ನನಗೆ, ಬೈಬಲ್ ಕುರಾನ್ ಜಂದ-ಅವೆಸ್ತಾಗಳಲ್ಲಿ ಲೋಕದ ಇತರ ಧರ್ಮಗ್ರಂಥಗಳಲ್ಲಿಯೂ ಇದೆ ಎನ್ನಲು ಬಹಳ ಆನಂದವಾಗುತ್ತದೆ ಈ ವಾಚನದಿಂದ ಗೀತೆಯಲ್ಲಿ ನನ್ನ ಶ್ರದ್ಧೆ ದೃಢವಾಯಿತು ಅದರಿಂದ ನನ್ನ ದೃಷ್ಟಿಯೂ ನನ್ನ ಹಿಂದೂ ಧರ್ಮವೂ ವಿಶಾಲವಾಯಿತು ಜರತುಷ್ಟ್ರ, ಯೇಸು, ಮಹಮ್ಮದರ ಜೀವನಚರಿತ್ರೆಯನ್ನು ಹೇಗೆ ತಿಳಿದುಕೊಂಡಿದೇನೋ ಹಾಗೆ ಗೀತೆಯ ಅನೇಕ ವಚನಗಳ ಮೇಲೂ ಬೆಳಕು ಚೆಲ್ಲಿದೇನೆ ಇದರಿಂದಾಗಿ ನಮ್ಮ ಸನಾತನಿ ಗೆಳೆಯರು ನನ್ನ ಬಗ್ಗೆ ಮಾಡಿದ ಟೀಕೆ ನನಗೆ ಒಂದು ಆಶ್ವಾಸನವಾಯಿತು

ನಾನು ಹಿಂದೂ ಎಂಬುದರಲ್ಲಿ ಒಂದು ಗೌರವವಿದೆಯೆಂದು ತಿಳಿದಿದೇನೆ. ಏಕೆಂದರೆ, ಈ ಶಬ್ದ ಬಹಳ ವಿಶಾಲವಾದುದು ಪ್ರಪಂಚದ ನಾಲ್ಕು ಮೂಲೆಯ ಪ್ರವಾದಿಗಳ ಬಗ್ಗೆ ಸಹಿಷ್ಣುತೆ ತೋರುವುದಷ್ಟೇ ಅಲ್ಲ, ಅವರನ್ನು ಆತ್ಮಸಾತ್ ಮಾಡಿಕೊಳ್ಳುತ್ತದೆ. ಈ ಜೀವನಸಂಹಿತೆಯಲ್ಲಿ ಎಲ್ಲೂ ಅಸ್ಪೃಶ್ಯತೆಗೆ ಸ್ಥಾನ

ವಿದ್ದಂತೆ ನನಗೆ ಕಂಡಿಲ್ಲ ಇದಕ್ಕೆ ವಿರುದ್ಧ, ಭೂತಮಾತ್ರವೆಲ್ಲವೂ ಏಕರೂಪ, ಎಲ್ಲವೂ ಈಶ್ವರನೊಳಗಿಂದ ಹುಟ್ಟಿವೆ, ಈಶ್ವರನಲ್ಲೇ ವಿಲೀನವಾಗುತ್ತವೆ ಎಂಬ ಶ್ರದ್ಧೆಯನ್ನೂ ಮೂಡಿಸಿದೆ, ಲೋಹಚುಂಬಕಕ್ಕೆ ಸಮವಾದ ಮನಸೆಳೆವ ವಾಣಿಯಿಂದ ನನ್ನ ಬುದ್ಧಿಯನ್ನು ಸ್ಪರ್ಶಿಸಿ ಇನ್ನೂ ಮುಂಬರಿದು ನನ್ನ ಹೃದಯವನ್ನು ಪೂರ್ಣವಾಗಿ ಸ್ಪರ್ಶಿಸಿದೆ ಭಗವತಿ ಗೀತಾಮಾತೆ ಉಪದೇಶಿಸಿದ ಸನಾತನ ಧರ್ಮವನ್ನು ಅನುಸರಿಸಿದ ಜೀವನದ ಸಾಫಲ್ಯ ಬಾಹ್ಯ ಆಚಾರ ಕರ್ಮಕಾಂಡಗಳಲ್ಲಿಲ್ಲ, ಸಂಪೂರ್ಣ ಚಿತ್ತಶುದ್ಧಿಯಲ್ಲಿ ಶರೀರ ಮನ ಆತ್ಮ ಸಹಿತ ಸಮಗ್ರವ್ಯಕ್ತಿತ್ವವನ್ನು ಪರಬ್ರಹ್ಮನೊಡನೆ ಏಕಾಕಾರ ಮಾಡುವುದರಲ್ಲಿ ಗೀತೆಯ ಈ ಸಂದೇಶವನ್ನು ನನ್ನ ಬಾಳಿನಲ್ಲಿ ಓತಪ್ರೋತವಾಗಿಸಿ ನಾನು ಮಾನವ ಸಮೂಹದಲ್ಲಿ ಹೋಗಿದೇನೆ. ಅವರು ನನ್ನ ಮಾತನ್ನು ಲಾಲಿಸಿದುದು ನನ್ನ ರಾಜಕೀಯದಿಂದ ಅಥವಾ ನನ್ನ ವಾಣಿಯ ವಿಶೇಷ ಪ್ರಭೆಯ ದೆಸೆಯಿಂದಲೂ ಅಲ್ಲ, ನನ್ನನ್ನು ತಮ್ಮವನು ತಮ್ಮ ಧರ್ಮದವನು ಎಂದು ತಿಳಿದು. ನಾನು ಸನಾತನ ಧರ್ಮಿ ಎಂದು ಘೋಷಿಸಿದರೆ ತಪ್ಪಲ್ಲ, ಈಶ್ವರನಿಗೆ ಇಚ್ಛೆಯಿದ್ದರೆ ನನ್ನೀ ಘೋಷಣೆಗೆ ನನ್ನ ಸಾವಿನ ಮುದ್ರೆಯೊತ್ತಿಯಾನು, ಕಾಲ ಕಳೆದಂತೆಲ್ಲ ನನಗೆ ಈ ಶ್ರದ್ಧೆ ದೃಢವಾಗುತ್ತಿದೆ *

---

# ಗೀತೆಯ ಅರ್ಥ

ಒಬ್ಬ ಗೆಳೆಯ ಹೀಗೆ ಪ್ರಶ್ನೆಮಾಡಿದಾರೆ ·

'ಗೀತೆಯ ಸಂದೇಶವೇನು ? ಹಿಂಸೆಯೆ ಅಹಿಂಸೆಯೆ ? ಈ ಜಗಳ ಯಾವಾಗಲೂ ಇದ್ದೀತೆನಿಸುತ್ತದೆ ಗೀತೆಯ ಯಾವ ಸಂದೇಶವನ್ನು ಕಾಣಬೇಕು ನಾವು, ಯಾವ ಸಂದೇಶವನ್ನು ಅದರಿಂದ ಹಿಂಡಬೇಕು ಎಂಬುದು ಬೇರೆ, ಅದನ್ನು ಸುಮ್ಮನೆ ಓದಿದರೆ ಏನೆನಿಸುತ್ತದೆ ಎಂಬುದೇ ಬೇರೆ ಅಹಿಂಸಾ

*ಮಹಾದೇವಭಾಯಿಯ ದಿನಚರಿ, ೪-೧೧-೩೨

ತತ್ತ್ವವೇ ಜೀವನಸಂದೇಶ ಎಂದು ಯಾರ ಮನಸ್ಸಿನಲ್ಲಿ ದೃಢವಾಗಿದೆಯೋ ಅವರಿಗೆ ಈ ಪ್ರಶ್ನೆ ಗೌಣ ಗೀತೆಯಲ್ಲಿ ಅಹಿಂಸೆ ಹೊರಟರೆ ನನಗದು ಗ್ರಾಹ್ಯ ಎಂದಾನು ಅಂಧವನು ಇಂಥ ಭವ್ಯ ಗ್ರಂಥದಲ್ಲಿ ಅಹಿಂಸೆಯಂಥ ಭವ್ಯ ಧಾರ್ಮಿಕಸಿದ್ಧಾಂತವೇ ಹೊರಸೂಸಬೇಕು ಹಾಗಿಲ್ಲದಿದ್ದರೆ ಗೀತೆ ಒತ್ತಟ್ಟಿಗಿರಲಿ. ಅದನ್ನು ಗೌರವಿಸಿ ಪೂಜಿಸೋಣ, ಅದನ್ನು ಪ್ರಮಾಣ ಗ್ರಂಥ ಎನ್ನಲಾಗದು.

'ಮೊದಲನೆ ಅಧ್ಯಾಯವನ್ನು ನೋಡಿದರೆ ತಿಳಿಯುತ್ತದೆ—ಅಹಿಂಸಾ ವೃತ್ತಿಯಿಂದ ಪ್ರೇರಿತನಾಗಿ ಅರ್ಜುನ ಶಸ್ತ್ರವನ್ನು ಬಿಟ್ಟು ಕೌರವರ ಕೈಯಲ್ಲಿ ಸಾಯಲೂ ಸಿದ್ಧನಾಗಿದ್ದ ಹಿಂಸೆಯಿಂದ ಆಗುವ ಪಾಪಹಾನಿ ಅವನಿಗೆ ನಿಚ್ಚಳವಾಗಿ ಕಾಣುತ್ತಿತ್ತು ವಿಷಾದದಿಂದ ನಡುನಡುಗಿ ಅವನು ಹೇಳು ತ್ತಾನೆ 'ಅಹೋಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಂ' ಇದಕ್ಕೆ ಶ್ರೀಕೃಷ್ಣ ಹೇಳಿದುದೇನು ? ಜಾಣನಾಗಿ ಹೀಗೆ ಮಾತಾಡುತ್ತೀಯಲ್ಲ ಯಾರೂ ಯಾರನ್ನೂ ಸಾಯಿಸರು, ಯಾರೂ ಸಾಯರು ಆತ್ಮ ಅಮರ. ನಾಶವಾಗು ವುದು ಬರೀ ಶರೀರ ಆದುದರಿಂದ ಈ ಧರ್ಮಪ್ರಾಪ್ತ ಯುದ್ಧವನ್ನು ಮಾಡು. ಗೆಲವೇನು ಸೋಲೇನು ? ನಿನ್ನ ಕರ್ತವ್ಯವನ್ನು ನೀನು ಮಾಡು.

'೧೧ನೆ ಅಧ್ಯಾಯದಲ್ಲೂ ಅವನಿಗೆ ವಿಶ್ವರೂಪವನ್ನು ತೋರಿಸಿ ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ.

ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ ಲೋಕಾನ್
ಸಮಾಹರ್ತುಮಿಹಪ್ರವೃತ್ತಃ

ಮಯಾ ಹತಾಂಸ್ತ್ವಂ ಜಹಿಮಾ ವ್ಯಥಿಷ್ಠಾ ।

'ಈಶ್ವರನ ದೃಷ್ಟಿಯಲ್ಲಿ ಹಿಂಸೆ–ಅಹಿಂಸೆ ಎರಡೂ ಸಮಾನ ಆದರೆ ಮನುಷ್ಯನಿಗೇನು ಈಶ್ವರನ ಸಂದೇಶ ?

ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ।

ಗೀತೆಯ ಸಂದೇಶ ಅಹಿಂಸೆ ಎಂದರೆ ಇದೇನು ? ಒಂದನೆ ಅಧ್ಯಾಯಕ್ಕೂ ಹನ್ನೊಂದನೆ ಅಧ್ಯಾಯಕ್ಕೂ ಮೇಳಗೂಡದು. ಅದಕ್ಕೆ ಇದು ಪೋಷಕವಂತೂ ಅಲ್ಲ. ಇಂಥ ಶಂಕೆಗಳಿಗೆ ಯಾರು ಸಮಾಧಾನ ಕೊಡಬೇಕು ?

'ಕೆಲಸದ ಗಡಿಬಿಡಿಯಿದ್ದರೂ ಸ್ವಲ್ಪ ಬಿಡುವು ಮಾಡಿಕೊಂಡು ಇದಕ್ಕೆ ಉತ್ತರ ಕೊಟ್ಟರೆ ಎಷ್ಟು ಒಳ್ಳೆಯದಾದೀತು!'

ಇಂಥ ಪ್ರಶ್ನೆ ಇದ್ದೇ ಇರುತ್ತದೆ ಅಧ್ಯಯನ ಮಾಡಿದವರು ಯಥಾಶಕ್ತಿ ಉತ್ತರ ಕೊಡಬೇಕು ಆದರೆ ಎಷ್ಟೇ ಸಮಾಧಾನ ಹೇಳಿದರೂ ಮನುಷ್ಯ ತನ್ನ ಹೃದಯ ಮಾಡಲು ಹೇಳಿದುದನ್ನೇ ಮಾಡಿಯಾನು ಎಂದೇ ಕಡೆಗೂ ಹೇಳಬೇಕಾದೀತು. ಮೊದಲು ಹೃದಯ, ಆಮೇಲೆ ಬುದ್ಧಿ ಮೊದಲು ಸಿದ್ಧಾಂತ, ಆಮೇಲೆ ಪ್ರಮಾಣ ಮೊದಲು ಸ್ಫುರಣ, ಆಮೇಲೆ ಅದಕ್ಕೆ ಅನುಕೂಲ ತರ್ಕ. ಮೊದಲು ಕರ್ಮ, ಆಮೇಲೆ ಬುದ್ಧಿ ಅಂತೆಯೆ ಬುದ್ಧಿ ಕರ್ಮಾನುಸಾರಿಣಿ ಎಂದರು ಮನುಷ್ಯ ಏನು ಮಾಡುತ್ತಾನೋ, ಮಾಡಬಯಸುತ್ತಾನೋ ಅದನ್ನು ಸಮರ್ಥನ ಮಾಡಲು ಪ್ರಮಾಣವನ್ನೂ ಹುಡುಕಿ ತೆಗೆಯುತ್ತಾನೆ

ಆದುದರಿಂದ ಗೀತೆಗೆ ನಾನು ಮಾಡುವ ಅರ್ಥ ಎಲ್ಲರಿಗೂ ಅನುಕೂಲವಾಗಿರಲಾರದು ಇಂಥ ಸ್ಥಿತಿಯಲ್ಲಿ, ನಾನು ಗೀತೆಗೆ ಈ ಅರ್ಥವನ್ನು ಹೇಗೆ ಮಾಡಿದೆನೋ, ಧರ್ಮಶಾಸ್ತ್ರಿಗಳು ಅರ್ಥಮಾಡುವ ರೀತಿಯಲ್ಲಿ ಯಾವ ಸಿದ್ಧಾಂತ ನನಗೆ ಒಪ್ಪಿಗೆಯೋ ತಿಳಿಸಿದರೆ ಸಾಕೆನಿಸುತ್ತದೆ 'ಪರಿಣಾಮ ಏನಾದರೂ ಆಗಲಿ ನಾನಂತೂ ಯುದ್ಧ ಮಾಡಲೇಬೇಕು ಸಾಯಲು ಯೋಗ್ಯರಾದ ಶತ್ರುಗಳು ತಾವೇ ಸತ್ತಿದಾರೆ. ಅವರನ್ನು ಸಾಯಿಸಲು ಮಾತ್ರ ನಾನು ನಿಮಿತ್ತವಾಗಬೇಕು'

೧೮೮೯ರಲ್ಲಿ ನನಗೆ ಗೀತೆಯ ಪ್ರಥಮ ಪರಿಚಯವಾಯಿತು ಆಗ ನನ್ನ ವಯಸ್ಸು ೨೦ ನನಗೆ ಅಹಿಂಸಾಧರ್ಮ ಗೊತ್ತಿದ್ದುದು ಬಹಳೇ ಸ್ವಲ್ಪ ಶತ್ರುವನ್ನು ಪ್ರೇಮದಿಂದ ಗೆಲ್ಲಬೇಕೆಂಬುದನ್ನು ಗುಜರಾತಿ ಕವಿ ಶ್ಯಾಮಲಭಟ್ಟರ ಒಂದು ಷಟ್ಪದಿಯಿಂದ ಕಲಿತಿದ್ದೆ ಇದರಲ್ಲಿನ ಸತ್ಯ ನನ್ನ ಹೃದಯದಲ್ಲಿ ಚೆನ್ನಾಗಿ ನೆಟ್ಟುಹೋಗಿತ್ತು ಆದರೆ ಆಗ ಅದರಿಂದ ನನಗೆ ಜೀವದಯೆಯ ಸ್ಫೂರ್ತಿ ಹುಟ್ಟಿರಲಿಲ್ಲ ಇದಕ್ಕೆ ಮೊದಲು ನಾನು ಸ್ವದೇಶದಲ್ಲೇ ಮಾಂಸ ತಿಂದಿದ್ದೆ. ಹಾವು ಮುಂತಾದವನ್ನು ಕೊಲ್ಲುವುದು ಧರ್ಮವೆಂದು ತಿಳಿದಿದ್ದೆ. ತಗಣೆ ಮುಂತಾದ ಪ್ರಾಣಿಗಳನ್ನು ಕೊಂದುದು ನನಗೆ ನೆನಪಿದೆ ಒಂದು ಚೇಳನ್ನೂ ಕೊಂದಿದ್ದೆ ಅದೂ ನೆನಪಿದೆ. ಅಂಥ ವಿಷಜಂತುಗಳನ್ನು ಸಹ

ಕೊಲ್ಲಬಾರದೆಂದು ಈಗ ಅರಿತಿದೇನೆ ಇಂಗ್ಲೀಷರೊಡನೆ ಯುದ್ಧಮಾಡಲು ನಾವು ಸಿದ್ಧರಾಗಬೇಕೆಂದು ನನ್ನ ಆಗಿನ ತಿಳಿವಳಿಕೆ. 'ಇಂಗ್ಲೀಷರು ರಾಜ್ಯ ವಾಳಿದರೆ ಏನಾಶ್ಚರ್ಯ?' ಎಂಬ ಅರ್ಥದ ಕವಿತೆಯೊಂದನ್ನು ಗುಣುಗುಣಿಸು ತ್ತಿದ್ದೆ ಆ ಸಿದ್ಧತೆಗಾಗಿಯೆ ನನ್ನ ಮಾಂಸಾಹಾರ ವಿಲಾಯತಿಗೆ ಹೋಗುವ ಮೊದಲು ಹೀಗಿತ್ತು ನನ್ನ ವಿಚಾರ ಮಾಂಸಾಹಾರ ಮುಂತಾದವುಗಳಿಂದ ನಾನು ಉಳಿದುಕೊಂಡುದು ತಾಯಿಗೆ ಕೊಟ್ಟ ಭಾಷೆಯನ್ನು ಸಾಯುವವರೆಗೂ ನಡೆಸಬೇಕೆಂಬ ನನ್ನ ವೃತ್ತಿಯ ದೆಸೆಯಿಂದ. ಸತ್ಯದಲ್ಲಿ ನನಗಿರುವ ಪ್ರೇಮ ಅನೇಕ ಆಪತ್ತುಗಳಿಂದ ನನ್ನನ್ನು ಕಾಪಾಡಿದೆ

ಇಬ್ಬರು ಇಂಗ್ಲೀಷರ ಜೊತೆಯಲ್ಲಿ ಗೀತೆಯನ್ನು ಓದುವ ಪ್ರಸಂಗ ಬಂತು ನನಗೆ ಪ್ರಸಂಗ ಬಂತು ಎನ್ನಲು ಕಾರಣ, ನನಗೇನು ಗೀತೆಯನ್ನು ಓದುವ ಬಯಕೆ ಇರಲಿಲ್ಲ. ಆದರೆ ಆ ಅಣ್ಣತಮ್ಮಂದಿರಿಬ್ಬರು ತಮ್ಮ ಜೊತೆಯಲ್ಲಿ ಗೀತೆಯನ್ನು ಓದಲು ನನಗೆ ಹೇಳಿದಾಗ ಬಹಳ ನಾಚಿಕೆಯಾಯಿತು ನಮ್ಮ ಧರ್ಮಶಾಸ್ತ್ರಗಳ ಜ್ಞಾನ ನನಗೆ ಸ್ವಲ್ಪವೂ ಇಲ್ಲವಲ್ಲ ಎಂದು ಬಹಳ ದುಃಖ ವಾಯಿತು ಆ ದುಃಖಕ್ಕೆ ಕಾರಣ ಅಭಿಮಾನ ಎನಿಸುತ್ತದೆ ಯಾವ ಸಹಾಯವೂ ಇಲ್ಲದೆ ಗೀತೆಯ ಎಲ್ಲಾ ಶ್ಲೋಕಗಳ ಅರ್ಥವನ್ನೂ ಸರಿಯಾಗಿ ತಿಳಿದುಕೊಳ್ಳಬಲ್ಲಷ್ಟು ಸಂಸ್ಕೃತಜ್ಞಾನ ನನಗಿರಲಿಲ್ಲ ಆ ಅಣ್ಣತಮ್ಮಂದಿರಿ ಗಂತೂ ಏನೂ ಗೊತ್ತಿರಲಿಲ್ಲ ಸರ್ ಎಡ್ವಿನ್ ಆರ್ನಾಲ್ಡರ ಉತ್ತಮೋತ್ತಮ ಕಾವ್ಯಾನುವಾದವನ್ನು ಅವರು ನನ್ನ ಕೈಲಿಟ್ಟರು ಕೂಡಲೆ ಆ ಪುಸ್ತಕವನ್ನು ಓದಿದೆ, ಮುಗ್ಧನಾದೆ. ಅಂದಿನಿಂದ ಇಂದಿನವರೆಗೂ ಗೀತೆಯ ಎರಡನೆ ಅಧ್ಯಾಯದ ಕಡೆಯ ೧೯ ಶ್ಲೋಕ ನನ್ನ ಹೃದಯವನ್ನು ಆಚ್ಛೊತ್ತಿ ನಿಂತಿವೆ ನನಗಂತೂ ಸಮಸ್ತ ಧರ್ಮವೂ ಅದರಲ್ಲೇ ಇದೆ ಸಂಪೂರ್ಣ ಜ್ಞಾನವಿದೆ ಅದರಲ್ಲಿ ಅದರಲ್ಲಿ ಹೇಳಿರುವ ಸಿದ್ಧಾಂತ ಅಚಲ. ಅದರಲ್ಲಿ ಬುದ್ಧಿಯನ್ನು ಸಂಪೂರ್ಣವಾಗಿ ಪ್ರಯೋಗಿಸಿದೆ ಆದರೆ ಅದು ಸಂಸ್ಕಾರಿಬುದ್ಧಿ ಅದರಲ್ಲಿ ಅನುಭವಜ್ಞಾನವಿದೆ

ಈ ಪರಿಚಯವಾದಮೇಲೆ ನಾನು ಅನೇಕ ಅನುವಾದಗಳನ್ನೂ ಓದಿದೆ, ಅನೇಕ ಟೀಕೆಗಳನ್ನೂ ಓದಿದೆ, ಬೇಕಾದಷ್ಟು ತರ್ಕಮಾಡಿದೆ—ಕೇಳಿದೆ, ಆದರೆ ಅದನ್ನು ಓದಿದಾಗ ನನ್ನ ಮೇಲೆ ಬಿದ್ದ ಪ್ರಭಾವ ಮಾಸಲಿಲ್ಲ ಈ ಶ್ಲೋಕ

ಗೀತೆಯ ತಿರುಳನ್ನು ಅರಿಯಲು ಬೀಗದ ಕೈ ಅದಕ್ಕೆ ವಿರುದ್ಧ ಅರ್ಥ ಕೊಡುವ ವಾಕ್ಯ ಬಂದರೆ ಅದನ್ನು ಕೈಬಿಡಿ ಎಂದೂ ಸೂಚಿಸುತ್ತೇನೆ ನಮ್ರ, ವಿನಯವಂತ ಆದವನಿಗೆ ಕೈಬಿಡಬೇಕಾದ ಅಗತ್ಯವೂ ಇಲ್ಲ ಉಳಿದ ಶ್ಲೋಕಗಳಿಗೂ ಇದಕ್ಕೂ ಮೇಳಗೂಡುತ್ತಿಲ್ಲ, ಇದು ನನ್ನ ಬುದ್ಧಿಯ ದೋಷ ಎಂದಾನು ಅವನು. ಕೆಲವು ಕಾಲದಮೇಲೆ ಇವಕ್ಕೂ ಆ ಹತ್ತೊಂಬತ್ತು ಶ್ಲೋಕಗಳಲ್ಲಿ ಹೇಳಿರುವ ಸಿದ್ಧಾಂತಕ್ಕೂ ಮೇಳಗೂಡೀತು ತನ್ನ ಮನಸ್ಸಿಗೂ ಇತರರಿಗೂ ಹೀಗೆ ಹೇಳಿ ಅವನು ಶಾಂತನಾದಾನು

ಶಾಸ್ತ್ರಕ್ಕೆ ಅರ್ಥಮಾಡಲು ಸಂಸ್ಕಾರ, ಅನುಭವ ಅಗತ್ಯ. ಶೂದ್ರನಿಗೆ ವೇದಾಭ್ಯಾಸವಿಲ್ಲ ಎಂಬುದು ಸರ್ವಥಾ ತಪ್ಪೇನಲ್ಲ ಶೂದ್ರ ಎಂದರೆ ಸಂಸ್ಕಾರಹೀನ, ಮೂರ್ಖ, ಅಜ್ಞಾನಿ ಅವನು ವೇದಾಭ್ಯಾಸ ಮಾಡಿದರೆ ಅನರ್ಥ ಮಾಡಿಯಾನು ವಯಸ್ಸಾದವರೂ ಕೂಡ ಬೀಜಗಣಿತದ ಕಠಿನ ಪ್ರಶ್ನೆಗಳನ್ನು ತಮಗೆ ತಾವೇ ತಿಳಿದುಕೊಳ್ಳಲು ಅಧಿಕಾರಿಗಳಲ್ಲ ಅವನ್ನು ತಿಳಿದುಕೊಳ್ಳಲು ಮೊದಲು ಸ್ವಲ್ಪ ಪ್ರಾಥಮಿಕ ಶಿಕ್ಷಣ ಆಗಿರಬೇಕು ವ್ಯಭಿಚಾರಿಯ ನಾಲಗೆಯಲ್ಲಿ 'ಅಹಂ ಬ್ರಹ್ಮಾಸ್ಮಿ' ಶೋಭಿಸೀತೆ? ಅದಕ್ಕೆ ಅವನೇನು ಅರ್ಥ (ಅಥವಾ ಅನರ್ಥ) ಮಾಡಿಯಾನು ?

ಶಾಸ್ತ್ರಕ್ಕೆ ಅರ್ಥಮಾಡುವವನು ಯಮಾದಿಗಳ ಪಾಲನೆ ಮಾಡುವವನಾಗಬೇಕು. ಯಮನಿಯಮಗಳ ಶುಷ್ಕಪಾಲನೆ ಹೇಗೆ ಕಠಿಣವೋ ಹಾಗೇ ನಿರರ್ಥಕವೂ. ಶಾಸ್ತ್ರಗಳು ಗುರುವಿರಲೇಬೇಕೆಂದು ಹೇಳಿವೆ ಆದರೆ ಈ ಕಾಲದಲ್ಲಿ ಗುರುಗಳಿಗೆ ಹೆಚ್ಚುಕಡಮೆ ಲೋಪ ಬಂದಿದೆಯೆನ್ನಬಹುದು ಆದುದರಿಂದಲೇ ಜ್ಞಾನಿಗಳು ಭಕ್ತಿಪ್ರಧಾನ ಪ್ರಾಕೃತಗ್ರಂಥಗಳ ಅಧ್ಯಯನ–ಅಧ್ಯಾಪನಗಳ ಶಿಕ್ಷಣ ಕೊಡುತ್ತಾರೆ ಆದರೆ ಭಕ್ತಿಯಿಲ್ಲದವರು, ಶ್ರದ್ಧೆಯಿಲ್ಲದವರು ಶಾಸ್ತ್ರಕ್ಕೆ ಅರ್ಥಮಾಡಲು ಅಧಿಕಾರಿಗಳಲ್ಲ ವಿದ್ವಾಂಸರು ವಿದ್ವತ್ ಪೂರ್ಣವಾದ ಅರ್ಥಗಳನ್ನು ಅದರಿಂದ ಹೊರಡಿಸಿದರೆ ಹೊರಡಿಸಲಿ ಅದು ಶಾಸ್ತ್ರಾರ್ಥವಲ್ಲ ಶಾಸ್ತ್ರಾರ್ಥವನ್ನು ಅನುಭವಿಯೇ ಮಾಡಬಲ್ಲ.

ಆದರೆ ಪ್ರಾಕೃತ ಮನುಷ್ಯರಿಗಾಗಿಯೂ ಕೆಲವು ಸಿದ್ಧಾಂತ ಇದ್ದೇ ಇವೆ. ಶಾಸ್ತ್ರಕ್ಕೆ ಮಾಡಿದ ಸತ್ಯವಿರುದ್ಧವಾದ ಅರ್ಥ ಸರಿಯಲ್ಲ ಸತ್ಯವೇ ಅಲ್ಲವೆ ಎಂಬ ಸಂದೇಹ ಸತ್ಯದ ಬಗ್ಗೆಯೆ ಇರುವವನಿಗಲ್ಲ ಶಾಸ್ತ್ರ, ಅಥವಾ ಹೀಗೆನ್ನ

ಬಹುದು—ಅವನಿಗೆ ಎಲ್ಲವೂ ಅಶಾಸ್ತ್ರವೇ ಅವನನ್ನು ಯಾರೂ ಎಟುಕ ಲಾರರು ಶಾಸ್ತ್ರಗಳಿಂದ ಯಾರಿಗೆ ಅಹಿಂಸೆ ಪ್ರಾಪ್ತವಾಗಿಲ್ಲವೋ ಅವನಿಗೆ ಭಯವೇ, ಆದರೆ ಅವನ ಉದ್ಧಾರವಾಗದೆಂದಲ್ಲ. ಸತ್ಯ ವಿಧ್ಯಾತ್ಮಕ, ಅಹಿಂಸೆ ನಿಷೇಧಾತ್ಮಕ ಸತ್ಯ ವಸ್ತುವಿಗೆ ಸಾಕ್ಷಿ ವಸ್ತುವಾಗಿದ್ದರೂ ಅದನ್ನು ನಿಷೇಧಿಸುತ್ತದೆ ಅಹಿಂಸೆ ಸತ್ಯ ಇದೆ, ಅಸತ್ಯ ಇಲ್ಲ. ಹಿಂಸೆ ಇದೆ, ಅಹಿಂಸೆ ಇಲ್ಲ ಆದರೂ ಅಹಿಂಸೆಯೇ ಆಗಬೇಕು ಅದೇ ಪರಮಧರ್ಮ. ಸತ್ಯ ಸ್ವಯಂಸಿದ್ಧ ಅಹಿಂಸೆ ಅದರ ಸಂಪೂರ್ಣ ಫಲ ಸತ್ಯದಲ್ಲಿ ಅದು ಅಡಗಿದೆ. ಆದರೆ ಸತ್ಯದಂತೆ ಅದು ವ್ಯಕ್ತವಲ್ಲ ಆದುದರಿಂದ ಅದನ್ನು ಒಪ್ಪದೆ ಮನುಷ್ಯ ಎಷ್ಟೇ ಶಾಸ್ತ್ರಶೋಧನೆ ಮಾಡಲಿ, ಅದರ ಸತ್ಯವನ್ನು ಕಡೆಗೆ ಅವನಿಗೆ ಕಲಿಸು ವುದು ಅಹಿಂಸೆಯೇ

ಸತ್ಯ ಎಂದರೆ ತಪಶ್ಚರ್ಯೆ ಸುತ್ತಲೂ ಹರಡಿರುವ ಹಿಂಸೆಯೊಳಗಿನಿಂದ ಅಹಿಂಸಾದೇವಿಯನ್ನು ಲೋಕದ ಮುಂದೆ ಪ್ರಕಟಗೊಳಿಸಿ, ಸತ್ಯವನ್ನು ಸಾಕ್ಷಾತ್ಕರಿಸಿಕೊಂಡ ತಪಸ್ವಿಗಳು ಹೇಳಿದರು—ಹಿಂಸೆ ಮಿಥ್ಯೆ, ಮಾಯೆ, ಅಹಿಂಸೆಯೇ ಸತ್ಯ, ಅಹಿಂಸೆಯ ಹೊರತು ಸತ್ಯದ ಸಾಕ್ಷಾತ್ಕಾರ ಅಸಂಭವ ಬ್ರಹ್ಮಚರ್ಯ, ಅಸ್ತೇಯ, ಅಪರಿಗ್ರಹಗಳೂ ಅಹಿಂಸೆಯಲ್ಲಿ ಬರುತ್ತವೆ ಅಹಿಂಸೆ ಯನ್ನು ಸಿದ್ಧಮಾಡುವ ವಸ್ತುಗಳು ಅಹಿಂಸೆ ಸತ್ಯದ ಪ್ರಾಣ. ಅದರ ಹೊರತು ಮನುಷ್ಯ ಪಶುವೇ ತನ್ನ ಶೋಧನೆಗಾಗಿ ಪ್ರಯತ್ನಿಸುತ್ತ ಸತ್ಯಾರ್ಥಿ ಇದನ್ನು ಬಹಳ ಬೇಗ ಅರಿತಾನು, ಆಮೇಲೆ ಶಾಸ್ತ್ರಕ್ಕೆ ಅರ್ಥಮಾಡಲು ಯಾವ ಕಷ್ಟವೂ ಬಾರದು

ಶಾಸ್ತ್ರಕ್ಕೆ ಅರ್ಥಮಾಡಲು ಇನ್ನೂ ಒಂದು ನಿಯಮವಿದೆ—ಅದರ ಪ್ರತಿ ಯೊಂದು ಅಕ್ಷರವನ್ನೂ ಹಿಡಿಯಬಾರದು, ಅದರ ಧ್ವನಿಯನ್ನು ಅರಸಬೇಕು, ಅದರ ರಹಸ್ಯವನ್ನು ಅರಿಯಬೇಕು. ತುಲಸೀದಾಸರ ರಾಮಾಯಣ ಉತ್ತಮ ಗ್ರಂಥ ಏಕೆಂದರೆ ಅವರ ಧ್ವನಿ ಶುಚಿ, ದಯೆ, ಭಕ್ತಿ 'ಶೂದ್ರ ಗಮಾರ ನಗಾರಿ ಪಶು ನಾರಿ, ಇವೆಲ್ಲವೂ ತಾಡನೆಗೇ ಸರಿ' ಎಂದು ಬರೆದಿದಾರೆ ಅವರು ಹಾಗೆಂದು ಯಾವನಾದರೂ ತನ್ನ ಹೆಂಡತಿಯನ್ನು ಹೊಡೆಯುತ್ತ ಕೂತರೆ ಅಧೋಗತಿಗೆ ಹೋದಾನು ಶ್ರೀರಾಮ ಸೀತೆಯನ್ನು ಎಂದೂ ಹೊಡೆಯಲಿಲ್ಲ. ಇಷ್ಟೇ ಅಲ್ಲ, ಎಂದೂ ಆಕೆಗೆ ದುಃಖ ಕೊಡಲಿಲ್ಲ. ಪ್ರಚಲಿತ ವಾಕ್ಯವನ್ನು

ಬರೆದರು ತುಲಸೀದಾಸರು, ಅಷ್ಟೇ ಈ ವಾಕ್ಯವನ್ನೆ ಆಧಾರವಾಗಿ ಮಾಡಿಕೊಂಡು ತನ್ನ ಹೆಂಡತಿಯನ್ನು ಹೊಡೆಯುವ ಪಶುವೂ ಇದ್ದೀತು ಎಂಬ ವಿಚಾರವೇ ಅವರಿಗೆ ಹೊಳೆದಿಲ್ಲ. ಒಂದು ವೇಳೆ ರೂಢಿಗೆ ಬಲಿಯಾಗಿ ಸ್ವಯಂ ತುಲಸೀದಾಸರೇ ತಮ್ಮ ಹೆಂಡತಿಯನ್ನು ಹೊಡೆದಿದ್ದರೆ? ಅದು ಖಂಡಿತ ವಾಗಿಯೂ ದೋಷ. ಆದರೂ ಹೆಂಡತಿಯನ್ನು ಹೊಡೆಯಲಿಕ್ಕಾಗಿ ಬರೆದಿಲ್ಲ ರಾಮಾಯಣ. ಪುಣ್ಯಪುರುಷನ ದರ್ಶನ ಮಾಡಿಸಲು, ಸತೀಶಿರೋಮಣಿ ಸೀತಾದೇವಿಯ ಪರಿಚಯ ಮಾಡಿಸಲು, ಭರತನ ಆದರ್ಶಭಕ್ತಿಯ ಚಿತ್ರವನ್ನು ಚಿತ್ರಿಸಲು ಬರೆದುದು ರಾಮಾಯಣ. ಅದರಲ್ಲಿ ದೋಷಯುಕ್ತ ರೂಢಿಗಳ ಸಮರ್ಥನೆ ಕಂಡರೆ ಅದು ತ್ಯಾಜ್ಯ ಭೂಗೋಳ ಕಲಿಸಲು ತಮ್ಮ ಅಮೂಲ್ಯ ಗ್ರಂಥವನ್ನು ಬರೆಯಲಿಲ್ಲ ತುಲಸೀದಾಸರು ಆದುದರಿಂದ ಅದರಲ್ಲಿ ತಪ್ಪು ಭೂಗೋಳ ಕಂಡುಬಂದರೆ ಅದನ್ನು ಬಿಡಬೇಕಾದುದು ಧರ್ಮ.

ಗೀತೆಯನ್ನು ನೋಡೋಣ. ಬ್ರಹ್ಮಜ್ಞಾನಪ್ರಾಪ್ತಿ, ಅದರ ಸಾಧನಗಳೇ ಗೀತೆಯ ವಿಷಯ. ಎರಡು ಸೇನೆಗಳ ನಡುವೆ ಯುದ್ಧ ಎಂಬುದು ಬರೀ ನಿಮಿತ್ತ. ಕವಿ ಸ್ವಯಂ ಯುದ್ಧನಿಷೇಧವಾದಿಯಲ್ಲ, ಆದ್ದರಿಂದ ಯುದ್ಧ ಪ್ರಸಂಗವನ್ನು ಹೀಗೆ ಬಳಸಿಕೊಂಡಿದಾನೆ ಎಂದು ಬೇಕಾದರೆ ಹೇಳಿ. ಮಹಾಭಾರತವನ್ನು ಓದಿದಮೇಲೆ ನನ್ನಲ್ಲಿ ಆದ ಪರಿಣಾಮವೇ ಬೇರೆ ವ್ಯಾಸರು ಇಂಥ ಸೊಗಸಾದ ಗ್ರಂಥ ಬರೆದು ಯುದ್ಧದ ಮಿಥ್ಯಾತ್ವವನ್ನು ವರ್ಣಿಸಿದಾರೆ ಕೌರವ ಸೋತ ಆದರೇನಾಯಿತು? ಪಾಂಡವರು ಗೆದ್ದರು. ಏನಾಯಿತು? ಗೆದ್ದವರು ಎಷ್ಟು ಜನ ಉಳಿದರು? ಅವರ ಗತಿ ಏನಾಯಿತು? ಕುಂತಿಯ ಗತಿ ಏನು? ಯಾದವಕುಲ ಈಗೆಲ್ಲಿದೆ?

ವಿಷಯ ಯುದ್ಧವರ್ಣನೆಯೂ ಅಲ್ಲ, ಹಿಂಸೆಯ ಪ್ರತಿಪಾದನವೂ ಅಲ್ಲ. ಅಂಥಲ್ಲಿ ಅದರ ಬಗ್ಗೆ ಒತ್ತಿಹೇಳುವುದು ಅನುಚಿತವಾದೀತು. ಕೆಲವು ಶ್ಲೋಕಗಳಿಗೂ ಅಹಿಂಸೆಗೂ ಮೇಳ ಕೂಡುವುದು ಕಷ್ಟವೆನಿಸಿದರೆ ಇಡೀ ಗೀತೆಯನ್ನು ಹಿಂಸೆಯ ಚೌಕಟ್ಟಿನಲ್ಲಿ ನೇರಿಸುವುದು ಅದಕ್ಕಿಂತಲೂ ಕಷ್ಟ.

ಕವಿ ಗ್ರಂಥವನ್ನು ರಚಿಸಿದಾಗ ಎಲ್ಲಾ ಅರ್ಥಗಳ ಕಲ್ಪನೆಯನ್ನು ಮಾಡಿರಲಾರ ಕಾವ್ಯದ ಕೌಶಲವೇ ಅದು! ಕವಿಗಿಂತಲೂ ದೊಡ್ಡದಾಗುತ್ತದೆ ಕಾವ್ಯ. ತನ್ನ ತನ್ಮಯತೆಯಲ್ಲಿ ಕವಿ ಉಚ್ಚಾರಣೆಮಾಡಿದ ಸತ್ಯ ಅನೇಕ ವೇಳೆ ಅವನ

ಬಾಳಿನಲ್ಲಿಯೆ ಕಾಣದಿರಬಹುದು ಆದುದರಿಂದ ಅನೇಕ ಕವಿಗಳ ಜೀವನ ಅವರ ಕಾವ್ಯಕ್ಕೆ ಸುಸಂಗತವಾಗದು. ಗೀತೆಯ ಆರಂಭವಾಗುವುದು ಎರಡ ನೆಯ ಅಧ್ಯಾಯದಲ್ಲಿ, ಅದರ ಪೂರ್ಣಾಹುತಿ ಹದಿನೆಂಟನೆಯ ಅಧ್ಯಾಯದಲ್ಲಿ ಎರಡನ್ನೂ ನೋಡಿದರೆ ಗೀತೆಯ ಸರ್ವಾಂಶ ತಾತ್ಪರ್ಯ ಹಿಂಸೆಯಲ್ಲ, ಅಹಿಂಸೆ ಎಂದು ತಿಳಿಯುತ್ತದೆ ಮಧ್ಯದಲ್ಲಿ ನೋಡಿದರೂ ಇದೇ ಕಾಣಬರುತ್ತದೆ ಕ್ರೋಧ, ರಾಗದ್ವೇಷಗಳಿಲ್ಲದೆ ಹಿಂಸೆ ಸಂಭವವಲ್ಲ ಗೀತೆಯಂತೂ ಕ್ರೋಧಾದಿ ಗಳನ್ನು ದಾಟಿ ಗುಣಾತೀತ ಸ್ಥಿತಿಗೆ ಏರುವ ಪ್ರಯತ್ನ ಮಾಡುತ್ತದೆ ಗುಣಾ ತೀತನಲ್ಲಿ ಕ್ರೋಧಕ್ಕೆ ಸರ್ವಥಾ ಅಭಾವ. ಅರ್ಜುನ ಕಿವಿಯವರೆಗೆ ಸೆಳೆದು ಬಾಣ ಬಿಟ್ಟಾಗ ಅವನ ಕಣ್ಣು ಹೇಗೆ ಕೆಂಪಾಗಿದ್ದವೆಂಬುದು ಈಗಲೂ ನನಗೆ ಕಾಣುತ್ತಿದೆ.

ಆದರೆ ಅಹಿಂಸೆಗಾಗಿ ಯುದ್ಧವನ್ನು ಕೈಬಿಡುವುದಾಗಿ ಅರ್ಜುನ ಯಾವಾಗ ಮಾಡಿದ್ದ ಹಟ? ಬೇಕಾದಷ್ಟು ಯುದ್ಧ ಮಾಡಿದ್ದ ಅವನು. ಏಕಾಏಕಿ ಅವನಿಗೆ ಮೋಹ ಹುಟ್ಟಿತು ತನ್ನ ಬಂಧುಬಳಗದವರನ್ನು ಕೊಲ್ಲಲು ಬಯಸಲಿಲ್ಲ ತಾನು ಯಾರನ್ನು ಪಾಪಿಗಳೆಂದೆಣಿಸಿದ್ದನೋ ಅಂಥ ಇತರರನ್ನು ಕೊಲ್ಲದಿರುವ ಮಾತನ್ನೇ ಎತ್ತಲಿಲ್ಲ ಶ್ರೀಕೃಷ್ಣ ಅಂತರ್ಯಾಮಿ! ಅರ್ಜುನನ ಈ ಕ್ಷಣಿಕ ಮೋಹ ಅವನಿಗೆ ಗೊತ್ತು ಆದುದರಿಂದಲೇ ಅವನಿಗೆ ಹೇಳುತ್ತಾನೆ—'ಹಿಂಸೆ ಯನ್ನಂತೂ ನೀನು ಮಾಡಿದೀಯೆ ಹೀಗೆ ಏಕಾಏಕಿ ಜಾಣನಾಗುವ ತೋರಿಕೆ ಯಿಂದ ನೀನು ಅಹಿಂಸೆಯನ್ನು ಕಲಿಯಲಾರೆ ಅದರಿಂದ ಆರಂಭಿಸಿದ ಕೆಲಸ ವನ್ನು ಮುಗಿಸಲೇ ಬೇಕು' ಗಂಟೆಗೆ ನಲವತ್ತು ಮೈಲಿ ವೇಗದಿಂದ ಓಡುವ ರೈಲಿನಲ್ಲಿ ಕುಳಿತ ಮನುಷ್ಯ ಇದ್ದಕ್ಕಿದ್ದಂತೆ ಪ್ರವಾಸಕ್ಕೆ ಬೇಸತ್ತು ಓಡುವ ಗಾಡಿ ಯಿಂದ ಕೆಳಗೆ ಧುಮುಕಿದರೆ, ಆತ್ಮಹತ್ಯೆಮಾಡಿಕೊಂಡ ಎನ್ನುತ್ತೇವೆ ಅದರಿಂದ ಅವನು ಪ್ರವಾಸದ ಅಥವಾ ರೈಲು ಪ್ರಯಾಣದ ಮಿಥ್ಯಾತ್ವವನ್ನು ಕಲಿಯಲಿಲ್ಲ ಅರ್ಜುನನದೂ ಇದೇ ಸ್ಥಿತಿ ಅಹಿಂಸಕ ಕೃಷ್ಣ ಅರ್ಜುನನಿಗೆ ಬೇರೆ ಸಲಹೆ ಕೊಡಲು ಸಾಧ್ಯವಿರಲಿಲ್ಲ ಆದರೆ ಅದರಿಂದ ಗೀತೆಯಲ್ಲಿ ಹಿಂಸೆಯನ್ನು ಪ್ರತಿ ಪಾದಿಸಿದೆಯೆಂದು ಅರ್ಥಮಾಡಲಾಗದು. ಶರೀರವ್ಯಾಪಾರಕ್ಕೆ ಹಿಂಸೆ ಅನಿವಾರ್ಯ, ಆದುದರಿಂದ ಹಿಂಸೆಯೇ ಧರ್ಮ ಎಂಬುದು ಎಷ್ಟು ಅನುಚಿತವೋ ಈ ರೀತಿ ಅರ್ಥಮಾಡುವುದೂ ಅಷ್ಟೇ ಅನುಚಿತ ಈ ಹಿಂಸಾಮಯ ಶರೀರದಿಂದ

ಬಿಡುಗಡೆಯಾಗುವ ಎಂದರೆ ಮೋಕ್ಷದ ಧರ್ಮವನ್ನು ಕಲಿಸುತ್ತಾನೆ ಸೂಕ್ಷ್ಮದರ್ಶಿ

ಈ ಧೃತರಾಷ್ಟ್ರ ಯಾರು? ದುರ್ಯೋಧನ ಯುಧಿಷ್ಠಿರ ಅರ್ಜುನರು ಯಾರು? ಕೃಷ್ಣ ಯಾರು? ಇವರೆಲ್ಲರೂ ಐತಿಹಾಸಿಕ ಪುರುಷರೇಯೆ? ಗೀತೆಯಲ್ಲಿ ಇದರ ಸ್ಥೂಲ ವ್ಯವಹಾರದ ವರ್ಣನೆಯನ್ನೆ ಮಾಡಿದಾರೆಯೆ? ಅಕಸ್ಮಾತ್ ಅರ್ಜುನ ಪ್ರಶ್ನಿಸುತ್ತಾನೆ ಕೃಷ್ಣ ಇಡೀ ಗೀತೆಯನ್ನೆ ಹೇಳುತ್ತಾನೆ ನನ್ನ ಮೋಹ ಕಳೆಯಿತು ಎಂದು ಹೇಳಿಯೂ ಅರ್ಜುನ ಗೀತೆಯನ್ನು ಮರೆಯುತ್ತಾನೆ, ಮತ್ತೆ ಅನುಗೀತೆಯನ್ನು ಕೃಷ್ಣನಿಂದ ಹೇಳಿಸುತ್ತಾನೆ

ದುರ್ಯೋಧನಾದಿಗಳು ಆಸುರೀವೃತ್ತಿ, ಅರ್ಜುನಾದಿಗಳು ದೈವೀವೃತ್ತಿ ಎನ್ನುತ್ತೇನೆ ನಾನು. ಈ ಶರೀರವೇ ಧರ್ಮಕ್ಷೇತ್ರ. ಅವರಲ್ಲಿ ದ್ವಂದ್ವ ನಡೆದೇ ಇರುತ್ತದೆ. ಅನುಭವಿಯಾದ ಋಷಿ–ಕವಿ ಅದನ್ನು ತದ್ವತ್ತಾಗಿ ವರ್ಣಿಸುತ್ತಾನೆ ಕೃಷ್ಣನಂತೂ ಅಂತರ್ಯಾಮಿ ಯಾವಾಗಲೂ ಶುದ್ಧ ಚಿತ್ತದಲ್ಲಿ ಗಡಿಯಾರದಂತೆ ಟಿಕ್ ಟಿಕ್ ಮಾಡುತ್ತಿರುತ್ತಾನೆ ಚಿತ್ತಕ್ಕೆ ಬುದ್ಧಿಯ ಕೀಲಿ ಕೊಡದಿದ್ದರೆ, ಅಂತರ್ಯಾಮಿ ಅಲ್ಲೇ ಇದ್ದರೂ ಟಿಕ್ ಟಿಕ್ ಮಾತ್ರ ನಿಂತುಹೋಗುತ್ತದೆ

ಇದರಲ್ಲಿ ಸ್ಥೂಲಯುದ್ಧಕ್ಕೆ ಅವಕಾಶವೇ ಇಲ್ಲವೆಂದಲ್ಲ ಅಹಿಂಸೆ ಯಾರಿಗೆ ಹೊಳೆದಿಲ್ಲವೋ ಅವರಿಗೆ ಹೇಡಿಯಾಗಬಾರದೆಂದು ಕಲಿಸಲಾಗಿದೆ ಭಯ ಇರುವವನು, ಸಂಗ್ರಹ ಮಾಡುವವನು, ವಿಷಯರತನಾದವನು, ಅವಶ್ಯವಾಗಿ ಹಿಂಸಾಮಯ ಯುದ್ಧ ಮಾಡಿಯಾನು ಆದರೆ ಅದು ಅವನ ಧರ್ಮವಲ್ಲ ಧರ್ಮ ಒಂದೇ ಅಹಿಂಸೆಯೆಂದರೆ ಮೋಕ್ಷ, ಮೋಕ್ಷವೆಂದರೆ ಸತ್ಯನಾರಾಯಣನ ಸಾಕ್ಷಾತ್ಕಾರ. ಇದರಲ್ಲಿ ಬೆನ್ನು ತೋರಿಸುವ ಮಾತಂತೂ ಇಲ್ಲವೇ ಇಲ್ಲ. ಈ ವಿಚಿತ್ರ ಪ್ರಪಂಚದಲ್ಲಿ ಹಿಂಸೆ ಆಗುತ್ತಲೇ ಇರುತ್ತದೆ ಅದರಿಂದ ತಪ್ಪಿಸಿಕೊಳ್ಳುವ ಮಾರ್ಗವನ್ನು ತೋರಿಸುತ್ತದೆ ಗೀತೆ ಅದರ ಜೊತೆಯಲ್ಲಿಯೆ ಹೇಡಿಯಾಗಿ ಓಡಿದರೆ ಹಿಂಸೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲವೆಂದೂ ಹೇಳುತ್ತದೆ ಓಡಿಹೋಗಲೆಣಿಸುವವನು ಕೊಂದೂಕೊಂದಾನು, ತಾನೂ ಸತ್ತಾನು.

ಪ್ರಶ್ನೆ ಹಾಕಿದವರು ಎತ್ತಿತೋರಿಸಿದ ಶ್ಲೋಕಗಳನ್ನು ಈಗಲೂ ಅರ್ಥ ಮಾಡಿಕೊಳ್ಳದಿದ್ದರೆ ಅರ್ಥ ಹೇಳಲು ನಾನು ಅಸಮರ್ಥ, ಸರ್ವಶಕ್ತಿವಂತ ಈಶ್ವರ ಕರ್ತ, ಭರ್ತ, ಸಂಹರ್ತ ಹಾಗೆಯೇ ಇರಬೇಕು ಈ ವಿಷಯದಲ್ಲಿ ಶಂಕೆಯಿಲ್ಲವಲ್ಲ? ಹುಟ್ಟಿಸಿದವನಿಗೇ ಅದನ್ನು ನಾಶಮಾಡುವ ಅಧಿಕಾರವೂ

ಇದೆ ಆದರೂ ಅವನು ಯಾರನ್ನೂ ಕೊಲ್ಲ ಏಕೆಂದರೆ ಅವನು ಹುಟ್ಟಿಸುವುದೂ ಇಲ್ಲ ಹುಟ್ಟಿದವನು ಸಾಯಲಿಕ್ಕೇ ಹುಟ್ಟಿದ—ಇದು ನಿಯಮ ಈಶ್ವರನೂ ಈ ನಿಯಮವನ್ನು ಮುರಿಯಲಾರ ಇದು ಅವನ ದಯೆ, ಈಶ್ವರನೇ ಸ್ವಚ್ಛಂದಿ, ಸ್ವೇಚ್ಛಾಚಾರಿ ಆದರೆ ನಾವೆಲ್ಲರೂ ಎಲ್ಲಿಗೆ ಹೋಗಬೇಕು ?*

---

## ಗೀತೆಯನ್ನು ಬಾಯಿಪಾರ ಮಾಡಿ

ಗೀತೆಯ ಬಾಯಿಪಾರದ ಬಗ್ಗೆ ಅನೇಕ ಸಲ ಬರೆದಿದೇನೆ, ಹೇಳಿದೇನೆ ನಾನು ಮಾಡಿಲ್ಲ, ಆದುದರಿಂದ ಹೀಗೆ ಹೇಳುವುದು ನನಗೆ ಭೂಷಣವಲ್ಲ ಆದರೂ ಸಾರಿ ಸಾರಿ ಇದನ್ನು ಹೇಳಲು ನನಗೆ ನಾಚಿಕೆಯೇನಿಲ್ಲ ಏಕೆಂದರೆ, ನನಗದರ ಲಾಭವು ಗೊತ್ತಿದೆ ನನ್ನದೇನೋ ಹೇಗೋ ಸಾಗಿದೆ ಒಮ್ಮೆ ಹದಿಮೂರನೆ ಅಧ್ಯಾಯದವರೆಗೆ ಬಾಯಿಪಾರ ಮಾಡಿದ್ದೆ. ಗೀತೆಯ ಮನನ ವಂತೂ ಹಲವು ವರ್ಷಗಳಿಂದ ನಡೆದಿದೆ ಆದುದರಿಂದ ಅದರ ನೆರಳಿನಲ್ಲಿ ಸ್ವಲ್ಪಮಟ್ಟಿಗೆ ನಾಗಿದೇನೆ ನಾನು ಎನ್ನಬಹುದು ಆದರೆ ನಾನದನ್ನು ಬಾಯಿ ಪಾರ ಮಾಡಿದ್ದರೆ, ಅದರಲ್ಲಿ ಇನ್ನೂ ಆಳವಾಗಿ ಇಳಿದಿದ್ದರೆ ಇನ್ನೂ ಬಹಳ ಹೆಚ್ಚು ಲಾಭ ಪಡೆಯುತ್ತಿದ್ದೆ. ನನ್ನದೇನು ಹೇಗಾದರೂ ಆಗಿರಲಿ ಅಥವಾ ಆಗಲಿ, ನನ್ನ ಕಾಲ ಮುಗಿಯಿತು ಎನ್ನಬಹುದು ಈಗಲೂ ನನಗೆ ಅವಕಾಶ ದೊರೆತರೆ ಗೀತೆಯನ್ನು ಬಾಯಿಪಾರ ಮಾಡಲು ಪ್ರಯತ್ನಿಸುತ್ತೇನೆ

ಗೀತೆಯ ಅರ್ಥವನ್ನು ಸ್ವಲ್ಪ ವಿಸ್ತರಿಸುತ್ತೇನೆ. ಗೀತೆ ನಮ್ಮ ಆಧಾರ ಗ್ರಂಥ ನಮ್ಮಲ್ಲನೇಕರಿಗೆ ಗೀತೆಯೇ ಆಧಾರ ಆದುದರಿಂದ ನಾನು ಗೀತೆಯ ಮಾತನ್ನೆತ್ತಿದೆ ಆದರೆ ಅಮತುಸ್ಸಲಾಮ್ ಪ್ರಾರ್ಥನೆಯ ಬದಲು, ಕುರೇಷಿ ಗೀತೆಯ ಬದಲು ಕೊರಾನನ್ನು ಬಾಯಿಪಾರ ಮಾಡಬಹುದು. ಸಂಸ್ಕೃತ ಬಾರದವರು, ಈಗ ಕಲಿಯಲಾರದವರು, ಗುಜರಾತಿಯಲ್ಲೋ ಹಿಂದಿಯಲ್ಲೋ

---

1 ೧೫–೧೦–೧೯೩೫

ಬಾಯಿಪಾಠ ಮಾಡಲಿ. ಗೀತೆಯಲ್ಲಿ ಶ್ರದ್ಧೆಯಿಲ್ಲದೆ ಬೇರೆ ಧರ್ಮಗ್ರಂಥದಲ್ಲಿ ಶ್ರದ್ಧೆಯಿದ್ದವರು ಅದನ್ನೆ ಬಾಯಿಪಾಠ ಮಾಡಲಿ.

ಬಾಯಿಪಾಠ ಮಾಡುವುದರ ಅರ್ಥವನ್ನೂ ಅರಿಯಲಿ. ಯಾವುದನ್ನು ಬಾಯಿಪಾಠ ಮಾಡುತ್ತೇವೋ ಅದರಂತೆ ನಡೆಯುವ ಆಗ್ರಹವಿರಬೇಕು ಮೂಲ ಸಿದ್ಧಾಂತಗಳಿಗೆ ಘಾತಕವಾಗಬಾರದು.

ಇದಕ್ಕೆ ಫಲವುಂಟು ನಮ್ಮಲ್ಲಿ ಗ್ರಂಥವಿರದಿದ್ದರೆ, ಕಳವಾದರೆ, ಸುಟ್ಟು ಹೋದರೆ, ನಾವು ಮರೆತರೆ, ನಮ್ಮ ಕಣ್ಣು ಹೋದರೆ, ಮಾತು ನಿಂತರೆ, ತಿಳಿವಳಿಕೆಯೊಂದಿದ್ದರೆ ನಮ್ಮ ಪ್ರಿಯ ಆಧಾರಗ್ರಂಥ ಬಾಯಿಗೆ ಬರುತ್ತಿದ್ದರೆ ಎಷ್ಟು ಶಾಂತಿ ದೊರೆತೀತು, ಮಾರ್ಗದರ್ಶಕವಾದೀತು, ಸಂಕಟದಲ್ಲಿ ಸಂಗಾತಿ ಆಗಿದ್ದೀತು

ಜಗತ್ತಿನ ಅನುಭವವೂ ಇದೇ ನಮ್ಮ ಹಿರಿಯರು—ಹಿಂದೂ ಮುಸಲ್ಮಾನ ಕಿರಸ್ತಾನ ಪಾರಸೀ—ಬಾಯಿಪಾಠ ಮಾಡಿರುತ್ತಿದ್ದರು ಈಗಲೂ ಬಹಳ ಜನ ಮಾಡುತ್ತಾರೆ ಇದರಲ್ಲಿ ಕೆಲವು ಮಟ್ಟಿಗೆ ನಮ್ಮ ಶ್ರದ್ಧೆಯ ಪರೀಕ್ಷೆಯಿದೆ *

---

## ಗೀತಾಜಯಂತಿ

ಪೂನಾದಿಂದ 'ಕೇಸರಿ'ಯ ಶ್ರೀ ಜಿ ವಿ ಕೇತಕರ ಅವರು ಬರೆಯುತ್ತಾರೆ

'ಈ ವರ್ಷ ಡಿಸೆಂಬರ್ ೨೨ಕ್ಕೆ ಗೀತಾಜಯಂತಿ ಕೆಲವು ವರ್ಷಗಳಿಂದ ನಾನು ಪ್ರಾರ್ಥಿಸುತ್ತಿದೇನೆ, ಈಗಲೂ ಮತ್ತೆ ಮಾಡುತ್ತಿದೇನೆ. ಗೀತೆಯ ಬಗ್ಗೆ ಗೀತಾಜಯಂತಿಯ ಬಗ್ಗೆ ತಾವು ಬರೆಯಬೇಕು ಹೋದ ವರ್ಷ ಇನ್ನೊಂದು ಮಾತನ್ನು ಹೇಳಿದ್ದೆ ಈಗಲೂ ಹೇಳುತ್ತೇನೆ ಗೀತೆಯ ಬಗ್ಗೆ ಮಾತಾಡುತ್ತ ಒಂದು ಕಡೆ ನೀವು ಹೇಳಿದೀರಿ—ಗೀತೆಯ ೭೦೦ ಶ್ಲೋಕಗಳನ್ನು ಪಾರಾಯಣ

---

* ಆಶ್ರಮವಾಸಿಗಳೊಡನೆ, ೩೧–೭–೧೯೩೨

ಮಾಡಲು ಅವಕಾಶ ಸಿಗದವರು ೨–೩ನೆ ಅಧ್ಯಾಯಗಳನ್ನು ಓದಿದರೆ ಸಾಕು. ಇವೆರಡರ ಸಾರವನ್ನು ತೆಗೆಯಬಹುದು ಹೀಗೆ ೨ನೆ–೩ನೆ ಅಧ್ಯಾಯಗಳನ್ನು ಏಕೆ ಆಧಾರಭೂತವೆಂದು ತಿಳಿಯುತ್ತೀರೋ ತಿಳಿಸಬಹುದಾದರೆ ತಿಳಿಸಿ ನಾನು ೨ನೆ–೩ನೆ ಅಧ್ಯಾಯಗಳನ್ನು ಗೀತಾಬೀಜವೆಂದು ಪ್ರಕಾಶನಮಾಡಿ ಇದೇ ವಿಚಾರವನ್ನೆ ಜನತೆಯ ಮುಂದೆ ಇಟ್ಟಿದೇನೆ ತಾವು ಈ ವಿಷಯವಾಗಿ ಬರೆದರೆ ಹೆಚ್ಚು ಪರಿಣಾಮವಾದೀತು '

ಇಲ್ಲಿಯವರೆಗೆ ನಾನು ಶ್ರೀ ಕೇತಕರರ ಮಾತನ್ನು ಒಪ್ಪಿರಲಿಲ್ಲ ಜಯಂತಿಯನ್ನು ಆಚರಿಸುವ ಉದ್ದೇಶ್ಯ ಈ ರೀತಿಯಲ್ಲಿ ಸಫಲವಾಗುತ್ತದೆಯೆಂದು ನಾನು ತಿಳಿದಿಲ್ಲ ಆಧ್ಯಾತ್ಮಿಕ ವಿಷಯಗಳಲ್ಲಿ ವಿಜ್ಞಾಪನೆಯ ಸಾಧಾರಣ ಸಾಧನಗಳಿಗೆ ಸ್ಥಾನವಿಲ್ಲ ಆಧ್ಯಾತ್ಮಿಕ ವಸ್ತುವಿನ ಉತ್ತಮ ವಿಜ್ಞಾಪನೆ ಅದಕ್ಕೆ ಅನುರೂಪವಾದ ಕರ್ಮವೇ ಎಲ್ಲ ಆಧ್ಯಾತ್ಮಿಕ ಗ್ರಂಥಗಳ ಪ್ರಭಾವ ಬೀಳಲಿಕ್ಕೂ ಎರಡು ಸಂಗತಿ ಆಗಬೇಕೆಂದು ನನ್ನ ವಿಶ್ವಾಸ ಅದರಲ್ಲಿ ಲೇಖಕರ ಅನುಭವಗಳ ಸತ್ಯವಾದ ಇತಿಹಾಸವಿರಬೇಕು ಅದರ ಭಕ್ತರ ಬಾಳು ಅದರ ಉಪದೇಶಕ್ಕೆ ಅನುಸಾರವಾಗಿರಬೇಕು ಗ್ರಂಥಕಾರ ತನ್ನ ಗ್ರಂಥದಲ್ಲಿ ಪ್ರಾಣಸಂಚಾರ ಮಾಡುತ್ತಾನೆ ಅನುಯಾಯಿಗಳು ಅದನ್ನು ಅನುಸರಿಸಿ ಆಚರಣೆಮಾಡಿ ಅದನ್ನು ಪೋಷಿಸುತ್ತಾರೆ ಗೀತೆ, ತುಲಸೀರಾಮಾಯಣ ಮುಂತಾದ ಪುಸ್ತಕಗಳು ಕೋಟ್ಯಂತರ ಜನರ ಮೇಲೆ ಪ್ರಭಾವ ಬೀರಿರುವುದರ ಗುಟ್ಟು ಇದೇ ಎಂದು ನನ್ನ ಅಭಿಪ್ರಾಯ. ಶ್ರೀ ಕೇತಕರರ ಆಗ್ರಹವನ್ನು ಮನ್ನಿಸುವಾಗ ಬರುವ ಗೀತಾಜಯಂತಿಯಲ್ಲಿ ಭಾಗವಹಿಸುವವರು ತಕ್ಕ ಭಾವನೆಯಿಂದ ಪ್ರೇರಿತರಾದಾರೆಂದು ಆಸೆ, ಗೀತೆಯ ಪವಿತ್ರ ಸಂದೇಶಕ್ಕೆ ಅನುಸಾರವಾಗಿ ತಮ್ಮ ಬಾಳನ್ನು ಬದುಕುವ ದೃಢನಿಶ್ಚಯ ಮಾಡಿಯಾರೆಂಬ ಆಸೆ ನನಗಿದೆ ಆಸಕ್ತಿ ಬಿಟ್ಟು ಸ್ವಧರ್ಮಪಾಲನೆ ಮಾಡಬೇಕೆಂಬುದೇ ಈ ಸಂದೇಶ ಎಂದು ಸಿದ್ಧಮಾಡಲು ಪ್ರಯತ್ನಿಸಿದೇನೆ ಗೀತೆಯ ಮುಖ್ಯ ವಿಷಯ ಎರಡನೆ ಅಧ್ಯಾಯದಲ್ಲಿದೆ, ಅದಕ್ಕನುಸಾರವಾಗಿ ಆಚರಣೆ ಮಾಡುವ ವಿಧಿ ಮೂರನೆ ಅಧ್ಯಾಯದಲ್ಲಿ ಹೀಗೆಂದರೆ ಉಳಿದ ಅಧ್ಯಾಯಗಳ ಮಹಿಮೆ ಕಡಮೆಯೆಂದಲ್ಲ ನಿಜವಾಗಿ ನೋಡಿದರೆ ಒಂದೊಂದು ಅಧ್ಯಾಯದ್ದೂ ಬೇರೆ ಬೇರೆ ಮಹತ್ತ್ವವೇ ಇದೆ ವಿನೋಬಾ ಗೀತೆಯನ್ನು ' ಗೀತಾಯಿ ' ಅಥವಾ ಗೀತಾಮಾತೆ ಎಂದು ಕರೆದಿದಾರೆ ಅದಕ್ಕೆ ಬಹಳ ಸರಳವೂ ತೇಜೋ

ವಂತವೂ ಆದ ಪದ್ಯಾನುವಾದ ಮಾಡಿದಾರೆ ಮರಾಠಿಯಲ್ಲಿ ಮೂಲ ಸಂಸ್ಕೃತದ ಛಂದಸ್ಸೇ ಸಾವಿರಾರು ಜನರಿಗೆ ಗೀತೆಯೇ ನಿಜವಾದ ತಾಯಿ ಏಕೆಂದರೆ, ಕಷ್ಟ ಬಂದಾಗ ಅದು ಸಾಂತ್ವನದ ಪುಷ್ಟಿಕರ ಹಾಲನ್ನು ಕೊಡುತ್ತದೆ. ಅದನ್ನು ನನ್ನ ಆಧ್ಯಾತ್ಮಿಕ ಕೋಶ ಎಂದಿದೇನೆ. ದುಃಖ ಬಂದಾಗ ಅದು ನನ್ನನ್ನು ನಿರಾಶೆಗೊಳಿಸಿಲ್ಲ ಇದಲ್ಲದೆ, ಆ ಗ್ರಂಥದಲ್ಲಿ ಸಾಂಪ್ರದಾಯಿಕತೆ, ಧಾರ್ಮಿಕ ಅಧಿಕಾರವಾದಗಳ ಹೆಸರೇ ಇಲ್ಲ ಮನುಷ್ಯಮಾತ್ರನಿಗೆ ಅದು ಪ್ರೇರಣೆ ಕೊಡುತ್ತದೆ. ಗೀತೆ ಕ್ಲಿಷ್ಟವೆಂದು ನಾನು ಒಪ್ಪುವುದಿಲ್ಲ ಪಂಡಿತರಂತೂ ಏನೇ ಕೈಗೆ ಬಿದ್ದರೂ ಅದರಲ್ಲಿಯೆ ಗೂಢವನ್ನು ನೋಡುತ್ತಾರೆ ಆದರೆ ನನ್ನ ಅಭಿಪ್ರಾಯದಲ್ಲಿ ಸಾಧಾರಣಬುದ್ಧಿಯ ಮನುಷ್ಯನಿಗೂ ಗೀತೆಯ ಸರಳ ಸಂದೇಶ ವನ್ನು ಅರಿತುಕೊಳ್ಳಲು ಏನೂ ಕಷ್ಟವಿಲ್ಲ ಅದರ ಸಂಸ್ಕೃತವೂ ಬಹಳ ಸುಲಭ ಗೀತೆಯ ಇಂಗ್ಲೀಷ್ ಅನುವಾದಗಳು ಹಲವನ್ನು ನೋಡಿದೇನೆ ಎಡ್ವಿನ್ ಆರ್ನಾಲ್ಡರ ಛಂದಾನುವಾದಕ್ಕೆ ಹೋಲಿಸಬಲ್ಲದ್ದು ಬೇರೆ ಇಲ್ಲ ಅದರ ಹೆಸರನ್ನು ಬಹಳ ಉಪಯುಕ್ತವಾಗಿ ಅಂದವಾಗಿಟ್ಟಿದಾರೆ. ಸ್ವರ್ಗೀಯ ಗೀತೆ *

---

## ಗೀತೆ ಹಾಗೂ ರಾಮಾಯಣ

ತರುಣರನೇಕರು ಪ್ರಯತ್ನ ಮಾಡಿಯೂ ಕೂಡ ಪಾಪಕ್ಕೆ ಗುರಿಯಾಗ ದಿರಲಾರರು ಅದರಿಂದ ಅವರಿಗೆ ಧೈರ್ಯವೇ ಉಡುಗಿಹೋಗುತ್ತದೆ ಆಮೇಲೆ ದಿನೇ ದಿನೇ ಆಳವಾಗಿ ಪಾಪಕೂಪದಲ್ಲಿ ಮುಳುಗುತ್ತಾರೆ ಕಡೆಯಲ್ಲಿ ಅನೇಕರು ಪಾಪವನ್ನೆ ಪುಣ್ಯವೆಂದು ತಿಳಿಯುತ್ತಾರೆ ಅಂಥವರಿಗೆ ನಾನು ಅನೇಕ ಸಲ ಸಲಹೆ ಕೊಡುತ್ತೇನೆ—ಗೀತೆಯನ್ನು ರಾಮಾಯಣವನ್ನು ಸಲ ಸಲಕ್ಕೂ ಅಧ್ಯಯನಮಾಡಿ, ಮನನಮಾಡಿ ಎಂದು ಆದರೆ ಅವರಿಗೆ ಇದರಲ್ಲಿ ರುಚಿಯಿಲ್ಲ ಇಂಥ ತರುಣರಿಗೆ ಧೈರ್ಯ ಕೊಡಲು, ಮನಸ್ಸನ್ನು ಗಟ್ಟಿಮಾಡಲು ಒಬ್ಬ ತರುಣನ ಪತ್ರದ ಒಂದು ಭಾಗವನ್ನು ಇಲ್ಲಿ ಕೊಡುತ್ತೇನೆ.

---

* ೧೧ ಡಿಸೆಂಬರ್, ೧೯೩೬

'ಮನಸ್ಸು ಸಾಧಾರಣವಾಗಿ ಸ್ವಸ್ಥವಾಗಿದೆ. ಕೆಲವು ದಿನ ಹೀಗೇ ಸ್ವಸ್ಥವಾಗಿದ್ದಮೇಲೆ, ಸ್ವಸ್ಥವಾಗಿದೇನೆ ಎಂದು ನನಗೆ ಅನಿಸಿದರೆ, ಮತ್ತೆ ಮನಸ್ಸು ಅಸ್ವಸ್ಥವಾಗುತ್ತದೆ ವಿಕಾರ ಬಹಳ ಬಲವಾಗಿ, ಅದನ್ನು ಹೇಗೆ ತಡೆಗಟ್ಟಬೇಕೋ ಬುದ್ಧಿಗೆ ತಿಳಿಯದಾಗುತ್ತದೆ ಆಗ ಪ್ರಾರ್ಥನೆ, ಗೀತಾಪಾಠ, ತುಲಸೀ ರಾಮಾಯಣಗಳಿಂದ ಬಹಳ ನೆರವು ಸಿಗುತ್ತದೆ. ರಾಮಾಯಣ ಎಂದರೆ ಹೆದರುತ್ತಿದ್ದೆ ಮೊದಲು ಈಗ ಅದರ ಪುಟಪುಟವೂ ಸ್ವಾರಸ್ಯವೆನಿಸುತ್ತಿದೆ ಓದಿದ್ದನ್ನೇ ಮತ್ತೆ ಮತ್ತೆ ಓದಿದರೂ ಬೇಸರವಾಗದು ಮೂರು ನಾಲ್ಕು ವರ್ಷಕ್ಕೆ ಹಿಂದೆ ಅರೆಮನಸ್ಸಿನಿಂದ ಪರಿಶುದ್ಧಿಗಾಗಿ ಪ್ರಯತ್ನಿಸಿ ನಿರಾಶನಾದೆ ಈಗ ಆ ನಿರಾಶೆಯ ಹೆಸರೇ ಇಲ್ಲ ಅಷ್ಟೇ ಅಲ್ಲ, ಅನಂತ ಕಾಲದ ತರುವಾಯ ಆಗಬೇಕಾದುದು ಈಗಲೇ ಆಗಬೇಕೆಂದು ಹಠ ಹಿಡಿಯುವುದು ಎಂಥ ಮೂರ್ಖತನ ಎಂದುಕೊಳ್ಳುತ್ತೇನೆ ಇಡೀ ದಿನದಲ್ಲಿ ನೂಲುವಾಗ ರಾಮಾಯಣವನ್ನು ಓದುವಾಗ ಹಾಯಿ ಎನಿಸುತ್ತದೆ'

ಈ ಪತ್ರ ಬರೆದವನಿಗೆ ಇದ್ದಷ್ಟು ನಿರಾಶೆ, ಅವಿಶ್ವಾಸ ಬೇರೆ ಯಾವ ತರುಣನಲ್ಲೂ ಇರಲಾರದು ಎರಡೂ ಮೈಯುಂಡಿದ್ದವು ಅದೇ ಈಗ ಅವನಲ್ಲಿ ಮೂಡಿರುವ ಶ್ರದ್ಧೆಯಿಂದ ತರುಣರೆಲ್ಲರಲ್ಲೂ ಆಸೆಯ ಸಂಚಾರವಾಗಬೇಕು ತಮ್ಮ ಇಂದ್ರಿಯಗಳನ್ನು ಗೆದ್ದಂಥವರ ಅನುಭವವನ್ನು ನಂಬಿ ಮನಗೊಟ್ಟು ರಾಮಾಯಣಾದಿಗಳನ್ನು ಅಭ್ಯಾಸಮಾಡಿದರೆ, ಅವರ ಮನಸ್ಸು ಕರಗದೆ ಇರಲಾರದು ಸಾಮಾನ್ಯ ವಿಷಯಗಳ ಅಭ್ಯಾಸಕ್ಕೂ ನಾವು ವರ್ಷಗಟ್ಟಲೆ ದುಡಿಯಬೇಕಾಗುತ್ತದೆ, ಎಷ್ಟೋ ಉಪಾಯ ಮಾಡಬೇಕಾಗುತ್ತದೆ ಅಂಥದರಲ್ಲಿ ಇಡೀ ಬಾಳಿನ, ಅದರ ಮುಂದಿನ ಶಾಂತಿಯ ಪ್ರಶ್ನೆ ಯಾವುದರಲ್ಲಿ ಅಡಗಿದೆಯೋ ಆ ವಿಷಯದ ಅಭ್ಯಾಸಕ್ಕೆ ಎಷ್ಟು ಮನಗೊಡಬೇಕಾದೀತು? ಹೀಗಿದ್ದರೂ ಅದಷ್ಟು ಅತ್ಯಲ್ಪ ಸಮಯದಲ್ಲಿ ಬಹಳ ಕಡಮೆ ಗಮನಕೊಟ್ಟು ರಾಮಾಯಣ ಗೀತೆಗಳ ಸ್ವಾರಸ್ಯವನ್ನು ಸವಿಯಲು ಬಯಸುವವರಿಗೆ ಏನು ಹೇಳೋಣ ?

ಮೇಲಿನ ಪತ್ರದಲ್ಲಿ ಒಂದು ಮಾತಿದೆ ಸ್ವಸ್ಥನಾಗುವ ವಿಚಾರ ಬಂದೊಡನೆ ವಿಕಾರವೂ ಏರಿಬರುತ್ತದೆ ಶರೀರಕ್ಕೆ ಹೇಗೋ ಮನಸ್ಸಿಗೂ ಹಾಗೇ. ಆರೋಗ್ಯವಂತನಾದವನಿಗೆ ತನ್ನ ಆರೋಗ್ಯದ ಮಾತೇ ಹೊಳೆಯದು.

ಅದು ಅಗತ್ಯವೂ ಇಲ್ಲ ಏಕೆಂದರೆ ಶರೀರದ ಸ್ವಭಾವವೆ ಆರೋಗ್ಯ ಮನಸ್ಸಿನದೂ ಹೀಗೇ ಮನಸ್ಸು ಶುದ್ಧವಾಗಿರಬೇಕು ಎಂಬ ವಿಚಾರ ಬಂದರೆ ವಿಕಾರ ಬಂದು ಇಣಿಕಿನೋಡುತ್ತಿದೆ ಎಂದರ್ಥ ಮನಸ್ಸು ಸದಾ ಶುದ್ಧವಾಗಿರ ಬೇಕೆಂದರೆ ಯಾವಾಗಲೂ ಅದನ್ನು ಒಳ್ಳೆಯ ವಿಚಾರಗಳಲ್ಲಿ ತೊಡಗಿಸಿರಬೇಕು. ಇದೊಂದೇ ಉಪಾಯ ಇದರ ದೆಸೆಯಿಂದಲೇ ರಾಮನಾಮ ಮುಂತಾದುದರ ಜಪದ ವಿಷಯದ ಶೋಧನೆ ನಡೆದುದು, ಅದರ ಗುಣವನ್ನು ಹಾಡಿದುದು ಯಾರ ಹೃದಯದಲ್ಲಿ ಗಳಿಗೆ ಗಳಿಗೆಯೂ ಶ್ರೀರಾಮನಿರುತ್ತಾನೆಯೋ ಅವನ ಮೇಲೆ ವಿಕಾರಗಳು ದಾಳಿ ಮಾಡಲೇ ಆರವು ಶುದ್ಧಬುದ್ಧಿಯಿಂದ ರಾಮ ನಾಮದ ಜಪ ಮಾಡುವವನ ಹೃದಯದಲ್ಲಿ ಸಮಯ ನೋಡಿ ರಾಮನಾಮ ನೆಲೆಸುತ್ತದೆ ಇದು ನಿಜ. ಹೀಗೆ ಹೃದಯವನ್ನು ಹೊಕ್ಕಮೇಲೆ ಆ ಮನುಷ್ಯ ನಿಗೆ ಒಂದು ಅಭೇದ್ಯ ಕೋಟೆಯಾಗಿಬಿಡುತ್ತದೆ ರಾಮನಾಮ. ಕೆಟ್ಟುದು ಕೆಟ್ಟುದು ಎಂದು ಚಿಂತಿಸಿದರೆ ಅದು ಅಳಿಯದು ಒಳ್ಳೆಯದರ ವಿಚಾರ ಮಾಡುತ್ತಿದ್ದರೆ ಕೆಟ್ಟುದು ಅಳಿದುಹೋಗುತ್ತದೆ ಆದರೆ ಜನರು ಒಳ್ಳೆಯ ಉದ್ದೇಶ್ಯದಿಂದಲೇ ವಿರುದ್ಧ ಉಪಾಯ ಹೂಡುತ್ತಾರೆ ‘ ಇದು ಹೇಗೆ ಬಂತು, ಎಲ್ಲಿಂದ ಬಂತು ? ’ ಎಂದು ಯೋಚಿಸುತ್ತಿದ್ದರೆ ಕೆಟ್ಟುದರ ಧ್ಯಾನ ಹೆಚ್ಚುತ್ತದೆ ಕೆಟ್ಟುದನ್ನು ಕಳೆಯಲು ಈ ಉಪಾಯ ಹಿಂಸಕ ಎನ್ನಬಹುದು ನಿಜವಾದ ಉಪಾಯ ಕೆಟ್ಟುದರೊಡನೆ ಅಸಹಕಾರ ಕೆಟ್ಟುದು ನಮ್ಮ ಮೇಲೆ ದಾಳಿ ಮಾಡಿದಾಗ ಅದಕ್ಕೆ ಓಡಿಹೋಗು ಎಂದು ಹೇಳಬೇಕಾಗಿಲ್ಲ ಕೆಟ್ಟುದೆಂಬ ವಸ್ತು ಇಲ್ಲವೇ ಇಲ್ಲವೆಂಬುದನ್ನು ಅರಿಯಬೇಕು, ಯಾವಾಗಲೂ ನಾವು ಒಳ್ಳೆಯದರ ಶುದ್ಧವಾದುದರ ವಿಚಾರವನ್ನೆ ಮಾಡಬೇಕು ಓಡಿಹೋಗು ಎಂಬುದರಲ್ಲಿ ಅಂಜಿಕೆಯ ಭಾವವಿದೆ ಅದರ ವಿಚಾರವನ್ನೆ ಮಾಡದಿರುವುದು ನಿರ್ಭಯ ಕೆಟ್ಟುದು ನನ್ನ ಬಳಿ ಸುಳಿಯಲೇ ಆರದೆಂದು ನಾವು ಯಾವಾಗಲೂ ನಂಬಬೇಕು. ಅನುಭವದಿಂದ ಇದನ್ನೆಲ್ಲಾ ಸಿದ್ಧಮಾಡಬಹುದು *

---

* ೧೪ ಏಪ್ರಿಲ್, ೧೯೩೬

# ಭಗವದ್ಗೀತೆ ಅಥವಾ ಅನಾಸಕ್ತಿಯೋಗ

ಗೀತೆಯನ್ನು ಓದುತ್ತ ಚಿಂತನಮಾಡುತ್ತ ಅದನ್ನು ಅನುಸರಿಸುತ್ತ ನಲವತ್ತು ವರ್ಷ ಕಳೆದಿದ್ದೇನೆ  ನಾನು ಗೀತೆಯನ್ನು ಹೇಗೆ ಅರಿತುಕೊಂಡಿದ್ದೇನೋ ಅದನ್ನು ಜನತೆಗೆ ತಿಳಿಸಬೇಕೆಂದು ಗೆಳೆಯರು ಬಯಸಿದರು  ಅದರ ಫಲವಾಗಿ ನಾನು ಅನುವಾದವನ್ನು ಮೊದಲಿಟ್ಟೆ  ಪಂಡಿತರ ದೃಷ್ಟಿಯಿಂದ ನೋಡಿದರೆ ಅನುವಾದ ಮಾಡುವ ಯೋಗ್ಯತೆ ಎಳ್ಳಷ್ಟೂ ಇಲ್ಲ  ಆಚರಣೆ ಮಾಡುವವರ ದೃಷ್ಟಿಯಿಂದೇನೋ ಸರಿಯೆನಿಸಬಹುದು. ಈಗ ಈ ಅನುವಾದ ಅಚ್ಚಾಗಿದೆ  ಗೀತೆಯಲ್ಲಿ ಸಂಸ್ಕೃತ ಮೂಲವನ್ನೂ ಅನೇಕರು ಕೊಡುತ್ತಾರೆ ಇದರಲ್ಲಿ ಬೇಕೆಂದೇ ಸಂಸ್ಕೃತ ಮೂಲವನ್ನು ಕೊಟ್ಟಿಲ್ಲ  ಎಲ್ಲರಿಗೂ ಸಂಸ್ಕೃತ ತಿಳಿದರೆ ನನಗೆ ಸಂತೋಷ  ಆದರೆ ಎಲ್ಲರಿಗೂ ಸಂಸ್ಕೃತ ಎಂದಿಗೂ ಬರಲಿಕ್ಕಿಲ್ಲ ಅಲ್ಲದೆ ಸಂಸ್ಕೃತ ಮೂಲದ ಗೀತೆಯ ಪ್ರತಿ ಬೇಕಾದಷ್ಟು ಸಿಗುತ್ತವೆ  ಆದುದರಿಂದ ಮೂಲವನ್ನು ಬಿಟ್ಟು ಪುಸ್ತಕದ ಆಕಾರವನ್ನೂ ಬೆಲೆಯನ್ನೂ ತಗ್ಗಿಸಲು ನಿಶ್ಚಯಿಸಿದೆ  ೧೮ ಪುಟಗಳ ಪ್ರಸ್ತಾವನೆ, ೧೬೧ ಪುಟಗಳ ಅನುವಾದಗಳ ಜೇಬಿನ ಆವೃತ್ತಿಯನ್ನು ಅಚ್ಚುಮಾಡಿಸಿದೇನೆ  ಎರಡಾಣೆ ಬೆಲೆ ಇಟ್ಟಿದೆ. ಪ್ರತಿಯೊಬ್ಬರೂ ಗೀತೆಯನ್ನು ಓದಲಿ, ಮನನ ಮಾಡಲಿ, ಅದರಂತೆ ಆಚರಣೆ ಮಾಡಲಿ ಎಂದು ನನ್ನ ಆಸೆ. ಸಂಸ್ಕೃತದ ಯೋಚನೆಯನ್ನೆ ಮಾಡದೆ ಇದರ ಅರ್ಥವನ್ನು ತಿಳಿದುಕೊಳ್ಳಲು ಪ್ರಯತ್ನಿಸುವುದು, ಅದರಂತೆ ಆಚರಣೆ ಮಾಡುವುದು—ಇದಕ್ಕೆ ಸುಲಭೋಪಾಯ  ಉದಾಹರಣೆಗೆ—ತನ್ನವರು ಹೆರವರು ಎಂಬ ಭೇದವಿಲ್ಲದೆ ದುಷ್ಟರನ್ನು ಕೊಲ್ಲಲು ಗೀತೆ ಹೇಳುತ್ತದೆ ಎನ್ನುವವರು ಮೊದಲು ತಮ್ಮ ದುಷ್ಟ ತಾಯಿತಂದೆಗಳನ್ನು ಅಥವಾ ಇತರ ಪ್ರಿಯಜನರನ್ನು ಕೊಲ್ಲಲಿ  ಆದರೆ ಅವರು ಹಾಗೆ ಮಾಡಲಾರರು  ಹಾಗಿದ್ದರೆ, ಎಲ್ಲೆಲ್ಲಿ ಸಂಹಾರದ ಪ್ರಸ್ತಾಪ ಬರುತ್ತದೆಯೋ ಅಲ್ಲಿ ಬೇರೆ ಅರ್ಥವಿರಬೇಕು  ಈ ಮಾತು ಓದುಗರಿಗೆ ಸಹಜವಾಗಿಯೆ ಹೊಳೆಯಬೇಕಲ್ಲವೆ. ತನ್ನವರು–ಪರರು ಎಂಬ ಭೇದವಿಡಬಾರದೆಂದು ಗೀತೆ ಪಂಕ್ತಿಪಂಕ್ತಿಯಲ್ಲೂ ಹೇಳುತ್ತದೆ  ಇದು ಹೇಗೆ ಸಾಧ್ಯ ? ಹೀಗೆ ಯೋಚಿಸುತ್ತ ಯೋಚಿಸುತ್ತ ಅನಾಸಕ್ತಿಪೂರ್ವಕ ಎಲ್ಲಾ ಕೆಲಸಗಳನ್ನೂ ಮಾಡಬೇಕೆಂಬುದೇ ಗೀತೆಯ ಪ್ರಧಾನ ಧ್ವನಿ ಎಂಬ ನಿಶ್ಚಯಕ್ಕೆ

ಬಂದು ಮುಟ್ಟುತ್ತೇವೆ  ಮೊದಲನೆ ಅಧ್ಯಾಯದಲ್ಲೇ ಅರ್ಜುನನ ಎದುರಿಗೆ ತನ್ನವರು–ಪರರು ಎಂಬ ಜಗಳ ಬಂದು ನಿಲ್ಲುತ್ತದೆ  ಇಂಥ ಭೇದ ಮಿಥ್ಯೆ, ಹಾಗೂ ಹಾನಿಕರ ಎಂದು ಗೀತೆಯ ಒಂದೊಂದು ಅಧ್ಯಾಯದಲ್ಲೂ ತೋರಿಸ ಲಾಗಿದೆ

ಗೀತೆಗೆ ನಾನು ಅನಾಸಕ್ತಿಯೋಗ ಎಂದು ಹೆಸರಿಟ್ಟಿದ್ದೇನೆ  ಅನಾಸಕ್ತಿ ಎಂದರೇನು, ಹೇಗೆ ಅದು ಕೈಗೂಡುತ್ತದೆ, ಅದರ ಲಕ್ಷಣವೇನು—ಇವೇ ಮೊದಲಾದ ವಿಷಯಗಳಿಗೆ ಈ ಪುಸ್ತಕದಲ್ಲಿ ಉತ್ತರವಿದೆ  ಗೀತೆಯನ್ನು ಅನುಸರಿಸುತ್ತ ಈ ಯುದ್ಧವನ್ನು ನಾನು ಪ್ರಾರಂಭ ಮಾಡದಿರಲಾರದಾದೆ ಒಬ್ಬ ಗೆಳೆಯನ ಮಾತಿನಂತೆ ನನ್ನ ಮನಸ್ಸಿಗೆ ಇದೊಂದು ಧರ್ಮಯುದ್ಧ ಅದರ ಕಟ್ಟಕಡೆಯ ತೀರ್ಮಾನದ ಕಾಲಕ್ಕೆ ಸರಿಯಾಗಿ ಈ ಪುಸ್ತಕ ಪ್ರಕಾಶಿತ ವಾಗುತ್ತಿರುವುದು ನನಗೆ ಒಂದು ಶುಭ ಶಕುನ *

---

## ರಾಷ್ಟ್ರೀಯ ಶಾಲೆಗಳಲ್ಲಿ ಗೀತೆ

ಹಿಂದೂಗಳೂ ಇತರರೂ ಇರುವ ರಾಷ್ಟ್ರೀಯ ಶಾಲೆಗಳಲ್ಲಿ ಗೀತೆಯನ್ನು ಕಡ್ಡಾಯವಾಗಿ ಕಲಿಸಬಹುದೆ ಎಂದು ಒಬ್ಬ ಸುದ್ದಿಗಾರ ಕೇಳಿದಾನೆ  ಎರಡು ವರ್ಷದ ಹಿಂದೆ ಮೈಸೂರಿನಲ್ಲಿ ನಾನು ಪ್ರವಾಸ ಮಾಡುತ್ತಿದ್ದಾಗ ಒಂದು ಹೈಸ್ಕೂಲಿನಲ್ಲಿ ಹಿಂದೂ ಹುಡುಗರಿಗೇ ಗೀತೆಯ ಪರಿಚಯವಿರಲಿಲ್ಲವೆಂದು ದುಃಖದಿಂದ ಹೇಳಬೇಕಾಯಿತು. ಹೀಗೆ ಗೀತೆಯ ಬಗ್ಗೆ ನನ್ನ ಪಕ್ಷಪಾತ ಸ್ಪಷ್ಟವಾಗಿಯೆ ಇದೆ  ಕೇವಲ ರಾಷ್ಟ್ರೀಯ ಶಾಲೆಗಳಲ್ಲೇ ಅಲ್ಲ, ಪ್ರತಿಯೊಂದು ಶಿಕ್ಷಣಸಂಸ್ಥೆಯಲ್ಲೂ ಅದನ್ನು ಓದಿಸಬೇಕೆಂದು ನನ್ನ ಆಸೆ  ಹಿಂದೂ ಹುಡುಗ ಹುಡುಗಿಯರಿಗೆ ಗೀತೆ ಗೊತ್ತಿಲ್ಲವೆಂದರೆ ನಾಚಿಕೆಗೇಡಿನ ಮಾತು  ಆದರೆ ಕಡ್ಡಾಯ ಮಾಡುವುದರ ಬಗ್ಗೆ ನನ್ನ ಆಗ್ರಹ ಕಡಮೆಯಾಗುತ್ತಿದೆ  ಅದೂ ರಾಷ್ಟ್ರೀಯ ಶಾಲೆಗಳಲ್ಲಿ. ಗೀತೆ ವಿಶ್ವಧರ್ಮದ ಗ್ರಂಥ, ನಿಜ  ಆದರೂ ಈ

---

* ೨೩ ಮೇ, ೧೯೩೦

ಮಾತನ್ನು ಯಾರ ಮೇಲೂ ಹೊರಿಸಲಾಗದು ಯಾರಾದರೂ ಮುಸಲ್ಮಾನರು, ಕ್ರಿಸ್ತಾನರು, ಪಾರಸೀಗಳು ಇದನ್ನು ವಿರೋಧಿಸಬಹುದು, ಬೈಬಲ್ ಕೊರಾನ್ ಅವೆಸ್ತಾಗಳ ಬಗೆಗೂ ಇದೇ ಮಾತನ್ನೇ ಹೇಳಬಹುದು. ಹಿಂದೂಗಳೆನಿಸುವವರಿಗೂ ಗೀತೆಯ ಶಿಕ್ಷಣವನ್ನು ಕಡ್ಡಾಯ ಮಾಡಲಾಗದೆಂದು ನನ್ನ ಭಯ. ಎಷ್ಟೋ ಮಂದಿ ಸಿಖ್ಖರು ಜೈನರು ತಾವು ಹಿಂದೂಗಳೆನ್ನುತ್ತಾರಾದರೂ ಅವರ ಮಕ್ಕಳಿಗೆ ಕಡ್ಡಾಯವಾಗಿ ಗೀತೆಯನ್ನು ಓದಿಸುವುದನ್ನು ವಿರೋಧಿಸಬಹುದು. ಸಾಂಪ್ರದಾಯಿಕ ಅಥವಾ ಜಾತೀಯ ಶಾಲೆಗಳ ಮಾತು ಬೇರೆ ವೈಷ್ಣವ ಶಾಲೆಯಲ್ಲಿ ಗೀತೆಯನ್ನು ಧಾರ್ಮಿಕ ಶಿಕ್ಷಣದ ಅಂಗವಾಗಿ ಕಡ್ಡಾಯ ಮಾಡಿದರೆ ಅದು ಸರಿ ಪ್ರತಿಯೊಂದು ಶಾಲೆಗೂ ತನ್ನ ಪಾಠ್ಯಕ್ರಮವನ್ನು ನಿಶ್ಚಯಿಸುವ ಹಕ್ಕು ಇದೆ ಆದರೆ ರಾಷ್ಟ್ರೀಯ ಶಾಲೆಗಳು ಒಂದು ಮಿತಿಯಲ್ಲಿದ್ದುಕೊಂಡು ಕೆಲಸಮಾಡಬೇಕು. ಅಧಿಕಾರ ಅಥವಾ ಹಕ್ಕಿನ ವಿಷಯದಲ್ಲಿ ಕೈಹಾಕದಿರುವ ಕಡೆ ಕಡ್ಡಾಯದ ಮಾತೇ ಇಲ್ಲ ಖಾಸಗೀ ಪಾಠಶಾಲೆಯಲ್ಲಿ ಪ್ರವೇಶ ಸಿಗಬೇಕೆಂದು ಒತ್ತಾಯ ಮಾಡುವಂತಿಲ್ಲ ರಾಷ್ಟ್ರೀಯ ಶಾಲೆಯಲ್ಲಿ ಎಲ್ಲರಿಗೂ ಪ್ರವೇಶದ ಅಧಿಕಾರವಿದೆ ಹೀಗೆ ಒಂದು ಕಡೆ ಪ್ರವೇಶಕ್ಕೆ ನಿಯಮ ಎನಿಸಿದುದು ಇನ್ನೊಂದು ಕಡೆ ಆಗಲೇಬೇಕಾದ ಅಗತ್ಯವಿಲ್ಲ ಒತ್ತಾಯದಿಂದ ಗೀತೆ ಎಂದೂ ವಿಶ್ವವ್ಯಾಪಿಯಾಗಲಾರದು ಅದರ ಭಕ್ತರು ಅದನ್ನು ಇತರರ ಮೇಲೆ ಬಲವಂತವಾಗಿ ಹೊರಿಸದೆ ತಮ್ಮ ಬಾಳಿನ ಮೂಲಕ ಅದರ ಉಪದೇಶಕ್ಕೆ ಮೂರ್ತಸ್ವರೂಪ ಕೊಟ್ಟರೆ ಗೀತೆ ವಿಶ್ವವ್ಯಾಪಿಯಾದೀತು

---

## ಅಹಿಂಸಾ ಪರಮೋ ಧರ್ಮಃ

ಕ್ಯಾನನ್ ಷಪರ್ಡ್ ಹಾಗೂ ಇನ್ನು ಕೆಲವರು ಉತ್ಸಾಹವಂತ ಕ್ರಿಸ್ತಾನರು ಇಂಗ್ಲೆಂಡಿನಲ್ಲಿ ಯುದ್ಧಕ್ಕೆ ವಿರುದ್ಧವಾಗಿ ಚಳುವಳಿ ನಡೆಸುತ್ತಿದಾರೆ ದಿಲ್ಲಿಯ ಸ್ಟೇಟ್ಸ್‌ಮನ್ ಪತ್ರಿಕೆ ನಾಲ್ಕು ಲೇಖನ ಬರೆದು ಆ ಚಳುವಳಿಯನ್ನು ಇತಿಮಿತಿಯಿಲ್ಲದೆ ಟೀಕಿಸಿದೆ. ತನ್ನ ನಿಲುವನ್ನು ಸಮರ್ಥಿಸಲು ಈ ಪತ್ರಿಕೆ ಭಗವದ್ಗೀತೆಯನ್ನೂ ಎಳೆದಿದೆ.

'ನಿಜವಾಗಿ, ಸಮಾಜ ತನ್ನ ಶತ್ರುಗಳೊಡನೆ ಹೋರಾಡಬೇಕು, ಆದರೆ ಅವರ ಬಗ್ಗೆ ಪ್ರೇಮವೂ ಇರಬೇಕು ಎಂಬುದೇ ಕ್ರಿಸ್ತನ ಮತದ ವಾಸ್ತವವಾದ—ಆದರೆ ಕಠಿನವಾದ ಉಪದೇಶ

'ಗೀತೆಯ ಉಪದೇಶವೂ ಇದೇ ಗಾಂಧಿ ಇದನ್ನು ಗಮನಿಸಲಿ ಪೂರ್ಣವಾಗಿ ನಿರ್ಭಯನಾಗಿ ನಿರ್ವೈರನಾಗಿ ಹೋರಾಡುವವನಿಗೇ ಗೆಲವು ಎಂದು ಅರ್ಜುನನಿಗೆ ಕೃಷ್ಣ ಹೇಳುತ್ತಾನೆ. ಈ ಮಹಾಕಾವ್ಯ ತನ್ನ ಎರಡನೆ ಅಧ್ಯಾಯದಲ್ಲಿ ಒಬ್ಬ ವಿವೇಕವಂತ ಯುದ್ಧವಿರೋಧಿ, ಒಬ್ಬ ನಿಜವಾದ ಯೋಧ, ಇವರು ಇಬ್ಬರ ನಡುವೆ ಸರ್ವೋಚ್ಚ ಭೂಮಿಕೆಯ ಮೇಲೆ ಯೋಚಿಸಿದರೂ ಈ ವಿವಾದವನ್ನು ಮುಕ್ತಾಯಮಾಡಿದೆ ಸ್ಥಳಾಭಾವದಿಂದ ಗೀತೆಯನ್ನು ಇಲ್ಲಿ ಎತ್ತಿ ಬರೆದಿಲ್ಲ. ಆದರೆ ಗೀತೆ ಒಮ್ಮೆಯಲ್ಲ ಹಲವು ಸಲ ಓದಬೇಕಾದ ಗ್ರಂಥ'

ಉಗ್ರವಾದಿಗಳೂ ಇವೇ ಶ್ಲೋಕಗಳನ್ನೆ ಉದಾಹರಿಸಿದಾರೆಂಬುದು ಈ ಲೇಖನಗಳ ಲೇಖಕನಿಗೆ ಬಹುಶಃ ಗೊತ್ತಿಲ್ಲ ನಿರ್ವಿಕಾರಚಿತ್ತದಿಂದ ಓದಿದರೆ ಭಗವದ್ಗೀತೆಯಲ್ಲಿ ಈ ಲೇಖಕನಿಗೆ ಹೊಳೆದ ಅರ್ಥಕ್ಕೆ ತೀರಾ ವಿರುದ್ಧ ಅರ್ಥವೆ ನನಗೆ ತೋರಿದೆ ಪಶ್ಚಿಮ ದೇಶಗಳಲ್ಲಿ ಯುದ್ಧವಿರೋಧಿಗಳನ್ನು ಯಾವ ಅರ್ಥದಲ್ಲಿ ವಿವೇಕವಂತರೆನ್ನುತ್ತೇವೋ ಆ ಅರ್ಥದಲ್ಲಿ ಅರ್ಜುನ ಯುದ್ಧವಿರೋಧಿ ಅಲ್ಲ ಅರ್ಜುನ ಕದನದಲ್ಲಿ ಕಡುಗಲಿ ಯುದ್ಧ ಬಯಸುವವನು ಕೌರವರ ಸೇನೆಯೊಡನೆ ಮೊದಲು ಎಷ್ಟೋ ಸಲ ಕಾದಿದಾನೆ ಎರಡೂ ಸೇನೆ ಯುದ್ಧಕ್ಕೆ ಸಿದ್ಧವಾಗಿವೆ ಅದರಲ್ಲಿ ತನ್ನ ಇಷ್ಟಮಿತ್ರರು ಪೂಜ್ಯಗುರುಜನರು ಇದ್ದುದನ್ನು ನೋಡಿದ ಆಗ ಅವನ ಕೈಕಾಲು ನಡುಗತೊಡಗಿದವು ಅಲ್ಲಿ ಮಾನವತೆಯ ಪ್ರೇಮವೂ ಇಲ್ಲ, ಯುದ್ಧದ ಬಗ್ಗೆ ತಿರಸ್ಕಾರವೂ ಇಲ್ಲ, ಅರ್ಜುನ ಯಾವುದರಿಂದ ಪ್ರೇರಿತನಾಗಿ ಕೃಷ್ಣನನ್ನು ಪ್ರಶ್ನೆ ಕೇಳಿದನೊ ಅದರಲ್ಲಿ, ಅಂಥ ಪರಿಸ್ಥಿತಿಯಲ್ಲಿ ಕೃಷ್ಣನೂ ಬೇರೆ ಉತ್ತರ ಕೊಡಲಾರದವನಾಗಿದ್ದ ಮಹಾಭಾರತ ರತ್ನಗಳ ಗಣಿ ಅದರೊಳಗಿನ ಒಂದು ರತ್ನ—ಗೀತೆ ಆದರೆ ಎಲ್ಲಕ್ಕಿಂತ ಹೆಚ್ಚು ದೇದೀಪ್ಯಮಾನವಾದುದು ಆ ಯುದ್ಧದಲ್ಲಿ ಲಕ್ಷಾಂತರ ಯೋಧರು ಎರಡೂ ಕಡೆ ಸೇರಿದ್ದರು ಎರಡೂ ಕಡೆಯಲ್ಲಿ ಅವರ್ಣನೀಯ ಅಮಾನುಷತನ ನಡೆಯಿತು ಎಂದು ಬರೆದಿದೆ. ಈ ಲಕ್ಷಾಂತರ ಯೋಧರಲ್ಲಿ ಕೇವಲ ಏಳೇ ಜನರನ್ನು ಉಳಿಸಿ ಅವರಿಗೆ ನಿಃಸಾರವಾದ ಗೆಲವನ್ನು ನೀಡಿ ಈ ಮಹಾಕಾವ್ಯದ ಅಮರ

ಕವಿ ಯುದ್ಧದ ನಿರರ್ಥಕತೆಯನ್ನೆ ತೋರಿಸಿಕೊಟ್ಟಿದಾನೆ  ಯುದ್ಧ ಒಂದು ಮೂರ್ಖತನದ ವಿಷಯ, ಮೋಸದ ಸಂಗತಿ ಎಂದು ತೋರಿಸಿದುದಷ್ಟೇ ಅಲ್ಲದೆ ಇನ್ನೂ ಉನ್ನತವಾದ ಸಂದೇಶ ಒಂದನ್ನು ಮಹಾಭಾರತ ನಮಗೆ ಕೊಡುತ್ತದೆ. ಮನುಷ್ಯನನ್ನು ಒಬ್ಬ ಅಮರ ಪ್ರಾಣಿಯೆಂದು ತಿಳಿಯುವುದಾದರೆ ಅವನ ಆಧ್ಯಾತ್ಮಿಕ ಇತಿಹಾಸ ಮಹಾಭಾರತ  ಅದರ ವರ್ಣನೆಯಲ್ಲಿ ಒಂದು ಐತಿಹಾಸಿಕ ಘಟನೆಯನ್ನು ಉಪಯೋಗಿಸಿದಾರೆ  ಆ ಕಾಲದ ಚಿಕ್ಕ ಜಗತ್ತಿಗೆ ಅದು ಬಹಳ ದೊಡ್ಡ ಘಟನೆಯೆ ಇದ್ದೀತು  ಇಂದಿನ ಜಗತ್ತಿಗೆ ಅಂಥ ಮಹತ್ತ್ವವದ್ದೇನೂ ಅಲ್ಲ  ಎಷ್ಟೋ ಹೊಸ ಆವಿಷ್ಕಾರಗಳಾಗಿವೆ ಈಗ  ಅದರಿಂದಾಗಿ ಇಡೀ ಜಗತ್ತೆಲ್ಲವೂ ಈಗ ಅಂಗೈನೆಲ್ಲಿಕಾಯಿ ಆಗಿದೆ  ಯಾವ ಮೂಲೆಯಲ್ಲಿ ಒಂದು ಸಂಗತಿ ನಡೆದರೂ ಅದರ ಪ್ರಭಾವ ಜಗತ್ತಿನಲ್ಲಿ ಬಹಳ ದೂರದವರೆಗೂ ಹರಡುತ್ತದೆ. ಆಗ ಹೀಗಿರಲಿಲ್ಲ  ನಮ್ಮ ಹೃದಯಗಳಲ್ಲಿ ಹಗಲೂ ಇರುಳೂ ಸತ್–ಅಸತ್ತುಗಳಿಗೆ ಸನಾತನ ಸಂಘರ್ಷಣೆ ನಡೆಯುತ್ತಿದೆ. ಅದನ್ನು ಈ ಕಥಾನಕದ ಮೂಲಕ ಒಂದು ಅಮರಕಾವ್ಯದ ರೂಪದಲ್ಲಿ ಮಹಾಭಾರತಕಾರರು ನಮ್ಮ ಮುಂದೆ ಇಟ್ಟಿದಾರೆ.  ಕಟ್ಟಕಡೆಯಲ್ಲಿ ಸತ್ಯಕ್ಕೇ ಗೆಲವು ಆದರೂ ಅಸತ್ಯ ಹೇಗೆ ಶಕ್ತಿವಂತವಾಗಿ ಅತ್ಯಂತ ವಿವೇಕಶಾಲಿಯಾದವನನ್ನೂ 'ಕಿಂಕರ್ತವ್ಯವಿಮೂಢ'ನನ್ನಾಗಿ ಮಾಡುತ್ತದೆಯೆಂಬುದನ್ನು ತೋರಿಸುತ್ತದೆ ಅದು  ಸದಾಚಾರದ ಏಕಮಾತ್ರ ಮಾರ್ಗವನ್ನೂ ನಮಗೆ ತೋರಿಸುತ್ತದೆ ಮಹಾಭಾರತ

ಭಗವದ್ಗೀತೆಯ ನಿಜವಾದ ಸಂದೇಶ ಏನೇ ಇರಲಿ, ಶಾಂತಿ-ಚಳುವಳಿಯ ನಾಯಕರಿಗೆ ಗೀತೆಯ ಉಪದೇಶವಲ್ಲ ಮಹತ್ತ್ವದ್ದು, ಬೈಬಲಿನ ಉಪದೇಶ ಮಹತ್ತ್ವದ್ದು  ಅದನ್ನೆ ಅವರು ತಮ್ಮ ಆಧ್ಯಾತ್ಮಿಕ ಮಾರ್ಗದರ್ಶಕವೆಂದು ತಿಳಿದಿದಾರೆ.  ಬೈಬಲಿಗೂ ಎಷ್ಟೋ ಅರ್ಥಮಾಡುತ್ತಾರೆ  ಸಾಧಾರಣವಾಗಿ ಕ್ರಿಸ್ತಾನ ಪಾದರಿಗಳು ಬೈಬಲಿಗೆ ಮಾಡುವ ಅರ್ಥ ಈ ನಾಯಕರಿಗೆ ಸಮ್ಮತವಲ್ಲ  ಅದನ್ನು ಶ್ರದ್ಧಾಯುಕ್ತ ಅಂತಃಕರಣದಿಂದ ಓದಿದರೆ ಯಾವ ಅರ್ಥ ಹೊಳೆಯುತ್ತದೆಯೋ ಅದು ಅವರಿಗೆ ಒಪ್ಪಿಗೆ  ಮೂಲತಃ, ಎಲ್ಲಕ್ಕಿಂತ ಮಹತ್ತ್ವಪೂರ್ಣ ವಿಷಯ ಯುದ್ಧವಿರೋಧಿಗಳ ಅಹಿಂಸೆಯ ಅಥವಾ ಪ್ರೇಮಧರ್ಮದ ಜ್ಞಾನ  ಅಹಿಂಸೆಯ ಅರ್ಥ ಬಹಳ ವ್ಯಾಪಕ, ಇಂಗ್ಲೀಷಿನ ನಾನ್-

ವಯಲೆನ್ಸ್ ಶಬ್ದ ಅದಕ್ಕೆ ಸಮರ್ಪಕವಲ್ಲ ‘ಸ್ಟೇಟ್ಸ್‌ಮನ್’ ಲೇಖನಗಳು ಯುದ್ಧವಿರೋಧಿಗಳಿಗೆ ಒಂದು ಸವಾಲಿನಂತಿವೆ ಈ ಚಳುವಳಿಯ ವಿಷಯ ನನಗೆ ಪೂರ್ಣವಾಗಿ ಗೊತ್ತಿಲ್ಲ ಯುದ್ಧವಿರೋಧಿಗಳಿಗೆ ನನ್ನ ವಿಚಾರ ವಿಶೇಷ ಮಹತ್ತ್ವದ್ದಲ್ಲದಿರಬಹುದು ಆದರೆ ನನಗೆ ಒಳಗಿನ ವಿಷಯ ಗೊತ್ತಿರುವ ಮಟ್ಟಿಗೆ ಕೆಲವರು ಅದನ್ನು ಗಮನಿಸಿಯಾರು ಅವರಲ್ಲಿ ಕೆಲವರು ನನ್ನೊಡನೆ ಪತ್ರವ್ಯವಹಾರ ಮಾಡುತ್ತಿದಾರೆ ಈಗಂತೂ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿದಾರೆ ರಿಚರ್ಡ್ ಗ್ರೆಗ್ಗರ ‘ಅಹಿಂಸೆಯ ಮಹಿಮೆ’ಯೆಂಬ ಪುಸ್ತಕ ಅವರಿಗೆ ಈಗ ಒಂದು ಪಾಠ್ಯಪುಸ್ತಕವಾಗಿದೆ. ಆ ಪುಸ್ತಕದ ಲೇಖಕರ ಮಾತಿನಂತೆ, ಆ ಪುಸ್ತಕ ನಾನು ತಿಳಿದುಕೊಂಡಂತೆ ಅಹಿಂಸೆಯ ಮಹಿಮೆಯನ್ನು ಪಾಶ್ಚಾತ್ಯ ಭಾಷೆಯಲ್ಲಿ ಪ್ರತಿಪಾದಿಸಿದೆ ಆದುದರಿಂದ ಯಾವ ತರ್ಕವನ್ನೂ ಮಾಡದೆ ಅಹಿಂಸೆಯ ಸಫಲತೆಗೆ ಕೆಲವು ನಿಯಮಗಳನ್ನೂ ಹಿಂಸೆಯ ಅಪ್ರಕಟ ಅರ್ಥವನ್ನೂ ಇಲ್ಲಿ ಬರೆದರೆ ಧೃಷ್ಟತೆಯಾಗಲಾರದು

೧. ಅಹಿಂಸೆ ಪರಮಶ್ರೇಷ್ಠ ಮಾನವಧರ್ಮ ಪಶುಬಲಕ್ಕಿಂತ ಲೆಕ್ಕ ವಿಲ್ಲದಷ್ಟು ಪಾಲು ಮಹತ್ತ್ವದ್ದು, ಉಚ್ಚತರವಾದುದು.

೨ ಪ್ರೇಮಪರಮೇಶ್ವರನಲ್ಲಿ ಸಜೀವಶ್ರದ್ಧೆಯಿಲ್ಲದ ಜನರಿಗೆ ಅದು ಏನೂ ಲಾಭ ನೀಡಲಾರದು

೩ ಮನುಷ್ಯನ ಸ್ವಾಭಿಮಾನಕ್ಕೆ ಸನ್ಮಾನಕ್ಕೆ ಅದು ರಕ್ಷಾಕವಚ ಮನುಷ್ಯನ ಚರ–ಸ್ಥಿರ ಸೊತ್ತನ್ನು ಕಾಪಾಡುವ ಭರವಸೆ ಕೊಡದು ಆದರೆ ಅದನ್ನು ಅಭ್ಯಾಸ ಮಾಡಿಕೊಂಡರೆ ಶಸ್ತ್ರಪಾಣಿಯಾದ ದಂಡಿಗಿಂತ ಹೆಚ್ಚಿನ ರೀತಿಯಲ್ಲಿ ಕಾಪಾಡಬಲ್ಲದು ಅನ್ಯಾಯದಿಂದ ಗಳಿಸಿದ ಸಂಪತ್ತನ್ನು ದುರಾ ಚಾರವನ್ನು ಕಾಪಾಡಲು ಅದು ಸ್ವಲ್ಪವೂ ನೆರವಾಗಲಾರದು.

೪ ಅಹಿಂಸೆಯನ್ನು ಅವಲಂಬಿಸಬೇಕೆನ್ನುವ ವ್ಯಕ್ತಿ ಅಥವಾ ರಾಷ್ಟ್ರ ತನ್ನ ಸರ್ವಸ್ವವನ್ನೂ (ರಾಷ್ಟ್ರದ ವ್ಯಕ್ತಿವ್ಯಕ್ತಿಯೂ) ಕಳೆದುಕೊಳ್ಳಲು ಸಿದ್ಧ ವಾಗಿರಬೇಕು ಆದುದರಿಂದ ಇತರ ದೇಶಗಳನ್ನು ಕಬಳಿಸುವ, ತನ್ನ ರಕ್ಷಣೆ ಗಾಗಿ ಪಶುಬಲವನ್ನು ಆಶ್ರಯಿಸುವ ಆಧುನಿಕ ಸಾಮ್ರಾಜ್ಯವಾದಕ್ಕೂ ಅದಕ್ಕೂ ಮೇಳಗೂಡಲೇ ಕೂಡದು

೫. ಮಕ್ಕಳು ತರುಣರು ಮುದುಕರು ಗಂಡಸರು ಹೆಂಗಸರು ಎಲ್ಲರೂ ಆಶ್ರಯಿಸಬಹುದಾದ ಶಕ್ತಿ ಅಹಿಂಸೆ ಆ ಕರುಣಾಮಯನಲ್ಲೂ ಮನುಷ್ಯ ಮಾತ್ರನಲ್ಲೂ ಸಜೀವಶ್ರದ್ಧೆಯಿದ್ದರೆ ಸಾಕು ಅಹಿಂಸೆಯನ್ನು ನಮ್ಮ ಜೀವನ ಸಿದ್ಧಾಂತವಾಗಿ ಮಾಡಿಕೊಂಡರೆ ಅದು ನಮ್ಮ ಇಡೀ ಬಾಳನ್ನು ವ್ಯಾಪಿಸಬೇಕು ಹಾಗಲ್ಲದೆ ಈಗ ಉಂಟು, ಆಗ ಇಲ್ಲ ಎಂದರೆ ಲಾಭವಿಲ್ಲ

೬ ಅಹಿಂಸೆ ಕೇವಲ ವ್ಯಕ್ತಿಗಳಿಗೆ ಮಾತ್ರ ಲಾಭದಾಯಕ, ಜನ ಸಮೂಹಕ್ಕಲ್ಲ ಎಂದು ತಿಳಿಯುವುದು ದೊಡ್ಡ ತಪ್ಪು ವ್ಯಕ್ತಿಗೆ ಎಷ್ಟುಮಟ್ಟಿಗೆ ಧರ್ಮವೋ ರಾಷ್ಟ್ರಕ್ಕೂ ಅಷ್ಟುಮಟ್ಟಿಗೆ ಅದು ಧರ್ಮ *

---

## ಗೀತೆ

ನನಗಂತೂ ಗೀತೆ ಜೀವಂತ ತಾಯಿ, ಕಾಮಧೇನು ಗೀತೆಯ ನಿತ್ಯಪಾರ ನೀರಸವೆನಿಸುತ್ತದೆ ಏಕೆಂದರೆ ಮನನವಿಲ್ಲ ನಮಗೆ ದಿನವೂ ದಾರಿ ತೋರುವ ತಾಯಿ ಎಂದರಿತು ಓದಿದರೆ ನೀರಸವೆನಿಸದು ಪ್ರತಿದಿನವೂ ಓದಿದಮೇಲೆ ಒಂದು ನಿಮಿಷ ಅದರ ಮೇಲೆ ವಿಚಾರಮಾಡಿ ದಿನವೂ ಏನಾದರೂ ಹೊಸದು ಸಿಕ್ಕೀತು ಪರಿಪೂರ್ಣನಾದ ಮನುಷ್ಯನಿಗೆ ಏನೂ ಸಿಗಲಿಕ್ಕಿಲ್ಲ ದಿನವೂ ಏನಾದರೊಂದು ದೋಷಕ್ಕೆ ಗುರಿಯಾಗುವವನನ್ನು ಮುಕ್ತಗೊಳಿಸುವ ತಾಯಿ ಗೀತೆ ಎಂದರಿತರೆ ನಿತ್ಯಪಾರದಿಂದ ಬಳಲಿಕೆ ಆಗದು

ಗೀತೆಯ ಸತತಾಭ್ಯಾಸದಿಂದ ಎಲ್ಲ ಚಿಂತೆಗಳಿಂದಲೂ ಮುಕ್ತನಾಗಿರುವುದನ್ನು ನೀನು ಕಲಿಯಬೇಕು. ನಮ್ಮೆಲ್ಲರ ಚಿಂತೆ ಮಾಡುವವನು ಇದಾನೆ, ಈಶ್ವರ ನಾವೇಕೆ ವ್ಯರ್ಥವಾಗಿ ಈ ಭಾರವನ್ನು ಹೊರಬೇಕು? ಹೊತ್ತು ತಿರುಗಬೇಕು? ನಮ್ಮ ಪಾಲಿಗೆ ಬಂದ ಕೆಲಸವನ್ನು ಮಾಡುತ್ತಿರಬೇಕು ನಾವು

---

* ೫–೯–೧೯೩೬

ಶ್ರದ್ಧೆ ಹೆಚ್ಚಿದಂತೆ ಬುದ್ಧಿಯೂ ಹೆಚ್ಚುತ್ತದೆ ಬುದ್ಧಿಯೋಗ ಈಶ್ವರನ ಅನುಗ್ರಹ. ಶ್ರದ್ಧೆ ಬೆಳೆಸುವುದು ನಮ್ಮ ಕೆಲಸ ಎಂದು ಗೀತೆ ಕಲಿಸುವಂತೆ ತೋರುತ್ತದೆ. ಇಲ್ಲಿ ಶ್ರದ್ಧೆ-ಬುದ್ಧಿಗಳ ಅರ್ಥವನ್ನು ಅರಿಯಬೇಕು ಈ ಅರಿವು ವ್ಯಾಖ್ಯೆಮಾಡಿದರೆ ಬಾರದು, ನಿಜವಾದ ನಮ್ರತೆಯನ್ನು ವಿಕಾಸಗೊಳಿಸಿದರೆ ಬರುತ್ತದೆ. ತನಗೆ ಎಲ್ಲವೂ ತಿಳಿದಿದೆ ಎಂದು ತಿಳಿದವನಿಗೆ ಏನೂ ತಿಳಿಯದು ನನಗೆ ಏನೂ ತಿಳಿಯದು ಎನ್ನುವವನಿಗೆ ಯಥಾ ಸಮಯದಲ್ಲಿ ಜ್ಞಾನ ಸಿಗುತ್ತದೆ. ತುಂಬಿದ ಕೊಡದಲ್ಲಿ ಗಂಗಾಜಲವನ್ನು ದೇವರು ಕೂಡ ತುಂಬಲಾರ. ಆದುದರಿಂದ ದಿನವೂ ಈಶ್ವರನ ಮುಂದೆ ಬರಿಗೈಯಲ್ಲಿ ನಿಲ್ಲಬೇಕು ನಮ್ಮ ಅಪರಿಗ್ರಹವ್ರತವೂ ಇದನ್ನೇ ತಿಳಿಸುತ್ತಿದೆ

ಗೀತೆ ಕಲಿಸುವ ಧರ್ಮವನ್ನು ಕಲಿ, ಅದರಂತೆ ಆಚರಿಸು

---

ಗೀತೆಯ ಮಧ್ಯಬಿಂದುವೇನು ಎಂಬುದನ್ನು ನಿಶ್ಚಯಿಸಿಕೊಳ್ಳಬೇಕು. ಆಮೇಲೆ ನಮ್ಮ ಜೀವನಕ್ಕೆ ಉಪಯೋಗಿಯಾದ ಪ್ರತಿಯೊಂದು ಶ್ಲೋಕವನ್ನೂ ಅರ್ಥಮಾಡಿಕೊಂಡು ಆಚರಿಸಬೇಕು ಇದೇ ಎಲ್ಲಕ್ಕಿಂತ ದೊಡ್ಡ ಟೀಕೆ. ಇದೇ ಗೀತೆಯ ನಿಜವಾದ ಅಭ್ಯಾಸ ಗೀತೆಯ ಮಧ್ಯಬಿಂದು ಅನಾಸಕ್ತಿ ಎಂಬುದರಲ್ಲಿ ಎಳ್ಳಷ್ಟೂ ಸಂದೇಹವಿರಲಾಗದು ಬೇರೆ ಯಾವ ಕಾರಣದಿಂದಲೂ ಗೀತೆಯನ್ನು ಬರೆದಿಲ್ಲ. ಅದರಲ್ಲಿ ನನಗೂ ಸಂಶಯವಿಲ್ಲ ನನ್ನ ಅನುಭವದಿಂದ ನಾನು ಅರಿತಿದೇನೆ. ಅನಾಸಕ್ತಿಯಿಲ್ಲದೆ ಮನುಷ್ಯ ಅಹಿಂಸೆಯನ್ನೂ ಪಾಲಿಸಲಾರ, ಸತ್ಯವನ್ನೂ ಪಾಲಿಸಲಾರ ಅನಾಸಕ್ತನಾಗುವುದು ಕಠಿನ ಇದರಲ್ಲಿ ಸಂದೇಹವಿಲ್ಲ ಆದರೆ ಅದರಲ್ಲಿ ಅಚ್ಚರಿಯೇನು ? ಸತ್ಯನಾರಾಯಣನ ದರ್ಶನ ಮಾಡಲು ಪರಿಶ್ರಮ ಆಗಲೇಬೇಕು, ಅನಾಸಕ್ತಿಯಿಲ್ಲದೆ ಆ ದರ್ಶನವೂ ಅಶಕ್ಯ.*

---

* ಮಹಾದೇವಭಾಯಿಯ ಡೈರಿ, ಭಾಗ ೨—೧೬೧, ೩೦—೧೧—೧೯೩೨

ಗೀತೆಯ ಮುಖ್ಯ ಸಿದ್ಧಾಂತಕ್ಕೆ ಅಸಂಗತವಾದ ಮಾತು ಎಲ್ಲೇ ಬಂದಿರಲಿ ನನ್ನ ಮನಸ್ಸು ಅದನ್ನೂ ಶಾಸ್ತ್ರವೆಂದು ಒಪ್ಪದು ರೂಢಿಗ್ರಸ್ತರಾದ ,ನನ್ನ ಗೆಳೆಯರಿಗೆ ನೋವಾಗದಿದ್ದರೆ ನನ್ನ ಅರ್ಥವನ್ನು ಇನ್ನೂ ಸ್ಪಷ್ಟಗೊಳಿಸುತ್ತೇನೆ. ಸದಾಚಾರದ ವಿಶ್ವಮಾನ್ಯ ಮೂಲತತ್ತ್ವಗಳಿಗೆ ಅಸಂಗತವಾದುದು ಯಾವುದನ್ನೂ ಶಾಸ್ತ್ರಪ್ರಮಾಣವೆಂದು ನಾನು ಒಪ್ಪಲಾರೆ. ಶಾಸ್ತ್ರಗಳ ಉದ್ದೇಶ ಈ ಮೂಲತತ್ತ್ವಗಳನ್ನು ಕಿತ್ತೆಸೆಯುವುದಲ್ಲ, ಅದನ್ನು ದೃಢಪಡಿಸುವುದು ಗೀತೆ ಈ ಮೂಲತತ್ತ್ವಗಳನ್ನು ಸಮರ್ಥಿಸುತ್ತದೆ, ಆದುದರಿಂದ ಗೀತೆ ನನಗೆ ಪರಿಪೂರ್ಣ ಗ್ರಂಥ ಯಾವ ಮೂಲ್ಯವೇ ಇರಲಿ, ಈ ಮೂಲತತ್ತ್ವಗಳಿಗೆ ಅಂಟಿಕೊಂಡಿರಲು ಎಂದಿಗೂ ತಪ್ಪದ ಕಾರಣವನ್ನು ತೋರಿಸುತ್ತದೆ.*

---

ಭಗವದ್ಗೀತೆಯಲ್ಲಿ ' ಶಾಸ್ತ್ರ ' ಶಬ್ದ ಬರುವುದು ಒಂದೇ ಕಡೆ ಗೀತೆ ಅಲ್ಲದೆ ಬೇರೆ ಗ್ರಂಥ ಅಥವಾ ವಿಧಿವಾಕ್ಯ ಎಂದು ನಾನು ಅದಕ್ಕೆ ಅರ್ಥಮಾಡಿಲ್ಲ. ಜೀವಂತ ಪ್ರಮಾಣಭೂತ ವ್ಯಕ್ತಿಯನ್ನು ಮೂರ್ತಿಮತ್ತಾದ ಸದಾಚಾರ ಎಂದು ಮಾಡಿದೇನೆ §

---

ಗೀತೆಯ ಮೂರನೆ ಅಧ್ಯಾಯದ ಐದನೆ ಶ್ಲೋಕ ಬಹಳೇ ಚಮತ್ಕಾರಿಕವಾಗಿದೆ ಇದರಲ್ಲಿ ಹೇಳಿದ ಸಿದ್ಧಾಂತ ಸರ್ವವ್ಯಾಪಕ ಎಂದು ಭೌತಶಾಸ್ತ್ರಜ್ಞರು ಹೇಳಿದಾರೆ ಯಾವ ಮನುಷ್ಯನೂ ಒಂದು ಗಳಿಗೆಯೂ ಕರ್ಮ ಮಾಡದೆಯೆ ಇರಲಾರ ಎಂದು ಅದರ ಅರ್ಥ ಕರ್ಮದ ಅರ್ಥ ಗತಿ ಈ ನಿಯಮ ಜಡ–ಚೇತನಕ್ಕೂ ಎಲ್ಲಕ್ಕೂ ಉಂಟು ಈ ನಿಯಮದಂತೆ ನಿಷ್ಕಾಮಭಾವದಿಂದ

---

‡ ಮ ಭಾ. ದಿನಚರಿ, ೧೭–೧೧–೧೯೩೨

§ ೧೭–೧೧–೧೯೩೨

ನಡೆದರೆ ಮನುಷ್ಯ ಇದೇ ಅವನ ಜ್ಞಾನ, ಅವನ ವೈಶಿಷ್ಟ್ಯ ಇದಕ್ಕೆ ಪೂರಕವಾಗಿ ಈಶೋಪನಿಷತ್ತಿನಲ್ಲಿ ಎರಡು ಮಂತ್ರ ಇವೆ. ಅವೂ ಇಷ್ಟೇ ಚಮತ್ಕಾರಿಕವಾಗಿವೆ *

---

ಆಶ್ರಮದ ತಂಗಿಯೊಬ್ಬಳು ಬರೆದಿದಾಳೆ—ಗೀತೆಯ ಬದಲು ಬೇರೆ ಪುಸ್ತಕ ಓದಿದರೆ ನನಗೆ ಸೊಗಸೆನಿಸುತ್ತದೆ

ನನಗೆ ಪಕೋಡ ತಿನ್ನುವುದು ರುಚಿ, ರೊಟ್ಟಿ ರುಚಿಯಲ್ಲ ಎಂಬ ಮಾತನ್ನು ಬರೆದಿದೀಯೆ ಹೀಗಾದರೆ ವೈ, ಅವನು ರೋಗಿಯೆನಿಸುತ್ತಾನೆ ನಿರೋಗಿಯ ಹೊಟ್ಟೆ ಪಕೋಡದಿಂದ ತುಂಬೀತೆ ? ರೊಟ್ಟಿಯನ್ನೇ ಅದು ಬೇಡೀತು ಹೀಗೆ ತಿಳಿ ಗೀತೆಯನ್ನು. ಒಳಗಿನ ತೆರೆ ಸರಿದರೆ ಗೀತೆ ರುಚಿಸೀತು ಗೀತೆ ರುಚಿಸದಿರುವವರೆಗೆ ಏನೋ ಕಸುಗಾಯಿ ಇದ್ದಂತೆ ಎಂದು ತಿಳಿಯಬೇಕು ಇದರಲ್ಲಿ ಅಡಿಗೆಯವನದೂ ಸ್ವಲ್ಪ ದೋಷವಿದೆ ನಾನು ಕಳಿಸಿದ ಗೀತೆ ಇನ್ನೂ ಕಸುಗಾಯಿ. ಆದುದರಿಂದ ನಿನಗೆ ಒದಗಲಿಲ್ಲ

---

ಗೀತೆಯ ಬಾಯಿಪಾಠ ಸರಳವಾದ ಸ್ಮರಣಶಕ್ತಿಯ ಕೆಲಸ ಗೀತೆಯ ಅರ್ಥವನ್ನು ತಿಳಿಯುವುದು ಬುದ್ಧಿಯ ಕೆಲಸ. ಇದು ಕಷ್ಟ. ಇದರಲ್ಲಿ ನಿನಗೆ ಸವಿಯಿಲ್ಲ ಆದರೆ ಬುದ್ಧಿಯ ಕೆಲಸದಲ್ಲಿ ಸವಿ ಸಿಗಲಾರಂಭಿಸಿದರೆ ಆಗ ಅರ್ಥವನ್ನು ಅರಿಯುವ ಬಯಕೆಯಾದೀತು ಆದುದರಿಂದ ಬುದ್ಧಿಯ ವಿಷಯಗಳನ್ನು ಸವಿಯಲಾರಂಭಿಸು

---

ಮನುಷ್ಯ ಕರ್ಮ ಮಾಡುತ್ತಿದ್ದರೇಯೆ ನಿಜವಾದ ಶಾಶ್ವತ ಚಿತ್ತಶುದ್ಧಿಯನ್ನು ಸಾಧಿಸಬಲ್ಲ ಎನಿಸುತ್ತದೆ ನನಗೆ.

---

* ೨೩–೮–೧೯೩೨

ಕರ್ಮ ಮಾಡದೆ ಯಾರಿಗೂ ಸಿದ್ಧಿಯಾಗಲಿಲ್ಲ
ಅನಾಸಕ್ತಿಯಿಲ್ಲದೆ ಮಾಡಬಹುದಾದ ಕರ್ಮವೆಲ್ಲವೂ ತ್ಯಾಜ್ಯ.

---

ಆಲಸ್ಯ ಹೇಗೆ ತ್ಯಾಜ್ಯವೋ ಹಾಗೇ ಅತಿಪರಿಶ್ರಮವೂ ತ್ಯಾಜ್ಯ. 'ಸಮತ್ವಂ ಯೋಗ ಉಚ್ಯತೇ'—ಮನಸ್ಸಿನಲ್ಲಿ ರಮಿಸುತ್ತಲೇ ಇರುತ್ತದೆ

---

'ಏನು ಮಾಡಿದರೂ ನೀನು ನನಗೆ ಅರ್ಪಿಸಿ ನನಗಾಗಿ ಮಾಡು'
'ಭಕ್ತಿ ಮಾಡಿದರೆ ಜ್ಞಾನ ಬಂದೇ ಬರುತ್ತದೆ'
'ನಿಷ್ಕಾಮನಾಗಿ ಕರ್ಮ ಮಾಡು'

---

ಪಾಪ ಮಾಡಲು ನಮ್ಮನ್ನು ಯಾರು ಪ್ರೇರಿಸುತ್ತಾರೆ ಎಂಬುದಕ್ಕೆ ಗೀತಾಮಾತೆ ಉತ್ತರ ಕೊಟ್ಟಿದಾಳೆ. ಕಾಮಕ್ರೋಧಗಳು ನಮ್ಮಿಂದ ಪಾಪ ಮಾಡಿಸುತ್ತವೆ. ನಿಮ್ಮ ಹಿಂದಿನ ನೆನಪಿನಿಂದ ಎಲ್ಲರೂ ಇದನ್ನು ಪರೀಕ್ಷಿಸಬಹುದು.

---

ಚಿ. ಧೀರು,

ನಿನ್ನ ಪತ್ರ ಸಿಕ್ಕಿತು ಹೊಸ ವರ್ಷ ನಿನಗೆ ಫಲ ಕೊಡಲಿ. ನೀನು ಇನ್ನೂ ಒಳ್ಳೆಯ ಸೇವಕನಾಗು ಗೀತೆಯನ್ನು ಬಾಯಿಪಾಠ ಮಾಡಿದೆ. ಈಗ ಅದನ್ನು ಹೃದಯಗತಮಾಡು ಹಾಗೆ ಮಾಡಲು ಅದರ ಅರ್ಥ ತಿಳಿಯಬೇಕು 'ಅನಾಸಕ್ತಿಯೋಗ'ದ ಪ್ರಸ್ತಾವನೆಯನ್ನು ಹತ್ತಿಪ್ಪತ್ತು ಸಲ ಓದು ಆಮೇಲೆ ಅರ್ಥವನ್ನು ತಿಳಿಯುವ ಪ್ರಯತ್ನ ಮಾಡು ಅದನ್ನೂ ತಿಳಿಯಲು ಸಂಸ್ಕೃತವನ್ನು ಅಭ್ಯಾಸಮಾಡು ಹೇಗೋ ಮಾಡಿ ಮುಗಿಸು ಹೊಸ ವರ್ಷಕ್ಕೆ ಇದೇ ನಿನಗೆ ವ್ರತವಾಗಲಿ.

೨೪ ಏಪ್ರಿಲ್, ೧೯೪೧ ಬಾಪೂನ ಆಶೀರ್ವಾದ

---

ನಾವು ಕಾಯಿಲೆ ಬೀಳುತ್ತೇವಲ್ಲ, ಅದಕ್ಕೆ ಆಹಾರದೋಷ ಕಾರಣವಂತೂ ಸರಿಯೆ, ನಮ್ಮ ಮೆದುಳು ಸರಿಯಾಗಿ ಕೆಲಸ ಮಾಡದುದೂ ಕಾರಣವೇ. ಗೀತಾಕಾರ ಇದನ್ನೂ ಸ್ಪಷ್ಟವಾಗಿ ನೋಡಿದ, ಸಂಸ್ಕಾರವೇ ಇದಕ್ಕೆ ರಾಮಬಾಣ ಔಷಧವೆಂದು ಸ್ಪಷ್ಟ ಭಾಷೆಯಲ್ಲಿ ಹೇಳಿದ ಆದುದರಿಂದ ಯಾವಾಗಲಾದರೂ ಯಾವುದಾದರೂ ವಿಷಯ ನಿನ್ನ ಮೆದುಳಿಗೆ ತೊಂದರೆ ಕೊಟ್ಟರೆ ಆಗ ಗೀತೆಯ ಮುಖ್ಯ ಉಪದೇಶದ ಬಗ್ಗೆ ಧ್ಯಾನಮಾಡಿ ನಿನ್ನ ಭಾರವನ್ನು ಇಳಿಸಿ ಎಸೆಯಬೇಕು

---

‘ ಉಪವಾಸಮಾಡದೆ ಪ್ರಾರ್ಥನೆ ಸಾಧ್ಯವಲ್ಲ ’ ಎಂಬ ಮಾತು ಪೂರ್ಣವಾಗಿಯೂ ನಿಜ. ಉಪವಾಸಕ್ಕೆ ವ್ಯಾಪಕ ಅರ್ಥವನ್ನು ಮಾಡಬೇಕು ಶರೀರದ ಉಪವಾಸದ ಜೊತೆಗೆ ಇಂದ್ರಿಯಗಳಿಗೂ ಉಪವಾಸವಾಗಬೇಕು ದೇಹ ಏನು ದಂಡಿಸಬೇಕು, ಕರಣ ಏನು ಖಂಡಿಸಬೇಕು. ಗೀತೆಯಲ್ಲಿ ಹೇಳಿದ ‘ ಅಲ್ಪ ಆಹಾರ ’ವೂ ಉಪವಾಸವೇ ಭೋಜನನಿಗ್ರಹಮಾಡಲು ಹೇಳಿ ಗೀತೆ, ಅಲ್ಪಾಹಾರ ಮಾಡು ಎನ್ನುತ್ತದೆ ಅಲ್ಪಾಹಾರವೆಂದರೆ ಸದಾ ನಡೆಯುವ ಉಪವಾಸ ಅಲ್ಪ ಎಂದರೆ ಶರೀರಕ್ಕೆ ಎಷ್ಟು ಬೇಕೋ, ಯಾವ ಸೇವೆಮಾಡಲು ಅದು ಹುಟ್ಟಿದೆಯೋ ಆ ಸೇವೆಮಾಡಲು ಬೇಕಾಗುವಷ್ಟು ಮಾತ್ರ ಔಷಧವನ್ನು ರುಚಿಗಾಗಿ ತೆಗೆದುಕೊಳ್ಳರು, ಶರೀರದ ಆರೋಗ್ಯಕ್ಕಾಗಿ ಗೊತ್ತಾದ ಸಮಯದಲ್ಲಿ ತೂಕಕ್ಕೆ ಸರಿಯಾಗಿ ಸೇವಿಸುತ್ತಾರೆ. ಆಹಾರವನ್ನು ಹಾಗೇ ತೆಗೆದುಕೊಳ್ಳಬೇಕು ಅಳತೆಗೆ, ತೂಕಕ್ಕೆ ಸರಿಯಾಗಿ ಎಂದರೆ ಅಲ್ಪತೆ ಚೆನ್ನಾಗಿ ಅರ್ಥವಾಗುತ್ತದೆ ಪೂರ್ಣಭೋಜನ ಮಾಡುವುದು ದೇವರಿಗೂ ಮನುಷ್ಯರಿಗೂ ಮಾಡಿದ ದ್ರೋಹ ನಾವು ಪೂರ್ಣಭೋಜನ ಮಾಡಿ ನೆರೆಹೊರೆಯವರಿಗೆ ಅವರ ಪಾಲು ಸಿಗದಂತೆ ಮಾಡುತ್ತೇವೆ ಅದರಿಂದ ದ್ರೋಹ ಭಗವಂತನ ಅರ್ಥವ್ಯವಸ್ಥೆಯಲ್ಲಿ ಔಷಧದಂತೆ ಮಾತ್ರ ಪ್ರತಿದಿನದ ಊಟಕ್ಕೆ ವ್ಯವಸ್ಥೆ ಇದೆ ಎಲ್ಲರಿಗೂ ಆದರೆ ನಾವೆಲ್ಲರೂ ಪೂರಾ ಊಟಮಾಡುವವರೇ ಔಷಧದ ಪ್ರಮಾಣವೆಷ್ಟು ಎಂಬುದನ್ನು ಅಂತಃಪ್ರವೃತ್ತಿಯಿಂದ ತಿಳಿದುಕೊಳ್ಳುವುದು ಭಗೀರಥಕಾರ್ಯ ತಾಯಿತಂದೆಗಳಿಂದ ನಮಗೆ ಸಿಗುವ ಶಿಕ್ಷಣ ತಿಂಡಿ

ಪ್ರೋತತನದ್ದು ಹೀಗೆ ಮೈಯುಂಡಮೇಲೆ ನಮಗೆ ತಿಳಿಯುತ್ತದೆ—ಊಟದ ಉಪಯೋಗ ರುಚಿಯನ್ನು ಸವಿಯಲಲ್ಲ, ಮೈಯನ್ನು ನಮ್ಮ ದಾಸನಂತೆ ಇಟ್ಟು ಕೊಳ್ಳಲು ಆ ಗಳಿಗೆಯಿಂದ ಆನಂದಕ್ಕಾಗಿ ಊಟಮಾಡುವ ಪೈತೃಕ ಹಾಗೂ ಸ್ವಾರ್ಜಿತ ಸ್ವಭಾವಕ್ಕೆ ವಿರುದ್ಧ ಹೋರಾಟ ಪ್ರಾರಂಭವಾಗುತ್ತದೆ ಆದುದ ರಿಂದ ಆಗೊಮ್ಮೆ ಈಗೊಮ್ಮೆ ಪೂರ್ಣ ಉಪವಾಸ ಆಂಶಿಕ ಉಪವಾಸ ಮಾಡು ವುದು ಅಗತ್ಯವಾಗುತ್ತದೆ ಆಂಶಿಕ ಉಪವಾಸವೆಂದರೆ ಅಲ್ಪಾಹಾರ ಅಥವಾ ಗೀತೆಗನುಸಾರ ಅಳೆದು ತೂಗಿದ ಊಟ ಹೀಗೆ 'ಉಪವಾಸದ ಹೊರತು ಪ್ರಾರ್ಥನೆ ಸಲ್ಲದು' ಎಂಬ ಮಾತು ವೈಜ್ಞಾನಿಕವೂ ಹೌದು ಇದರ ಸತ್ಯ ವನ್ನು ಪ್ರಯೋಗ-ಅನುಭವಗಳ ಮೂಲಕ ಪರೀಕ್ಷಿಸಬಹುದು

———

ಗೀತಾಮಾತೆಯ ಸಂದೇಶವನ್ನು ಹೃದಯದಲ್ಲಿ ಧಾರಣೆ ಮಾಡುತ್ತೇನೆ ಆಕೆ ವಿಲಕ್ಷಣ ಮಾತೆ ಗೀತೆ ಎಂದು ಹಾಡು ಈ ಶಬ್ದ ಉಪನಿಷತ್ತಿನ ಜೊತೆಗೆ ವಿಶೇಷವಾಗಿ ಉಪಯೋಗವಾಗುತ್ತದೆ ಅದೂ ಸ್ತ್ರೀಲಿಂಗ ಕಾಮಧೇನುವಿನಂತೆ ಗೀತೆಯು ಸಂಪೂರ್ಣ ಇಚ್ಛೆಗಳನ್ನು ಪೂರ್ಣಗೊಳಿಸು ತ್ತದೆ. ಅಂತೇ ಅದು ತಾಯಿ ನಮ್ಮ ಆಧ್ಯಾತ್ಮಿಕಜೀವನದಲ್ಲಿ ದೃಢಗೊಳಿಸಲು ಬೇಕಾದ ಹಾಲಿಗಾಗಿ, ಕರುಗಳಂತೆ ನಾವೂ ಬೇಡಿದರೆ ಈ ಅಮರಮಾತೆ ಯಥೇಷ್ಟವಾಗಿ ನೀಡಿಯಾಳು ಲಕ್ಷಾಂತರ ವತ್ಸಗಳಿಗೆ ತನ್ನ ಅಜಸ್ರಸ್ತನ ಗಳಿಂದ ಹಾಲು ಕೊಡಬಲ್ಲ ಕ್ಷಮತೆಯಿದೆ ಅದಕ್ಕೆ.

———

ಗೀತಾಧರ್ಮದ ಅನುಯಾಯಿ ಸಲಕರಣೆಗಳಿಲ್ಲದೆಯೆ ಪ್ರಸನ್ನತೆಯಿಂದ ತನ್ನ ಕೆಲಸ ನಡೆಸಲು ಕಲಿಯುತ್ತಾನೆ ಗೀತೆಯ ಭಾಷೆಯಲ್ಲಿ ಇವನು ಸ್ಥಿತ ಪ್ರಜ್ಞ ಯಾಕೆಂದರೆ ಗೀತೆಯಲ್ಲಿ ಹೇಳಿದಂತೆ ಇವನಿಗೆ ಸುಖ-ದುಃಖಗಳು ಸಮಾನ. ಸ್ಥಿತಪ್ರಜ್ಞನ ಅವಸ್ಥೆ ಸುಖ-ದುಃಖಕ್ಕೆ ಮೀರಿದ್ದು ಗೀತೆಯ ಭಕ್ತನಿಗೆ ಸುಖವೂ ಇಲ್ಲ, ದುಃಖವೂ ಇಲ್ಲ ಇಂಥ ಅವಸ್ಥೆ ಬಂದಮೇಲೆ ಪೀಡೆ, ಆನಂದ, ಗೆಲವು, ಸೋಲು, ಚ್ಯುತಿ, ಪ್ರಾಪ್ತಿ—ಯಾವುದರ ಅನು ಭೂತಿಯೂ ಇಲ್ಲ

———

# ಪ್ರಸ್ತಾವನೆ

## ೧

ಸ್ವಾಮಿ ಆನಂದ ಮೊದಲಾದ ಗೆಳೆಯರ ಪ್ರೇಮಕ್ಕೆ ಕಟ್ಟುಬಿದ್ದು ನಾನು ಸತ್ಯದ ಪ್ರಯೋಗಕ್ಕಾಗಿ ಆತ್ಮಕಥೆಯನ್ನು ಏಕೆ ಬರೆಯಲಾರಂಭಿಸಿದೆನೋ ಅದೇ ಶ್ರೀಮದ್ಭಗವದ್ಗೀತೆಯ ಅನುವಾದಕ್ಕೂ ಕಾರಣ 'ನೀವು ಒಂದು ಬಾರಿ ಗೀತೆಯ ಅನುವಾದಮಾಡಿ ಅದರ ಬಗ್ಗೆ ನಿಮ್ಮ ಟೀಕೆ–ಟಿಪ್ಪಣಿ ಬರೆದು ಇಟ್ಟರೆ, ನಾವು ಒಂದು ಸಲ ಅದನ್ನು ಓದಿದರೆ ಗೀತೆಗೆ ನೀವು ಹೇಳುವ ಅರ್ಥ ನಮಗೆ ತಿಳಿಯಬಹುದು ಇಲ್ಲಿಂದ–ಅಲ್ಲಿಂದ ಕೆಲವು ಶ್ಲೋಕ ಆರಿಸಿ, ಅವುಗಳಲ್ಲಿ ಅಹಿಂಸಾದಿಗಳನ್ನು ಪ್ರತಿಪಾದಿಸುವುದು ನನಗೆ ಸರಿತೋರದು' ಎಂದು ಅಸಹಕಾರದ ಸಮಯದಲ್ಲಿ ಸ್ವಾಮಿ ಆನಂದರು ನನಗೆ ಹೇಳಿದರು ಅವರ ಆ ವಾದ ನನಗೆ ಸತ್ಯವೆನಿಸಿತು. ಅವಕಾಶ ದೊರೆತರೆ ಈ ಕೆಲಸವನ್ನು ಮಾಡುತ್ತೇನೆ ಎಂದೆ ನಾನು ಅನಂತರ ಸೆರೆಮನೆಗೆ ಹೋದೆ ಅಲ್ಲಿ ಆಳವಾಗಿ ಗೀತೆಯ ಅಧ್ಯಯನಮಾಡಲು ಅವಕಾಶವಾಯಿತು ಲೋಕಮಾನ್ಯ ತಿಲಕರ ಜ್ಞಾನಭಂಡಾರವನ್ನು ಓದಿದೆ ಮೊದಲೇ ಅವರು ನನಗೆ ಮರಾಠಿ, ಹಿಂದಿ ಮತ್ತು ಗುಜರಾತಿ ಅನುವಾದಗಳನ್ನು ಪ್ರೇಮಪೂರ್ವಕ ಕಳಿಸಿ, ಮರಾಠಿ ಓದಲಾಗದಿದ್ದರೆ, ಗುಜರಾತಿ ಗ್ರಂಥವನ್ನಾದರೂ ನಾನು ಓದಬಹುದೆಂದು ಸೂಚಿಸಿದ್ದರು. ಸೆರೆಮನೆಯ ಹೊರಗಡೆ ಅದನ್ನು ಓದಲಾಗಲಿಲ್ಲ ಸೆರೆಮನೆಯಲ್ಲಿ ಗುಜರಾತಿ ಅನುವಾದವನ್ನು ಓದಿದೆ ಅದನ್ನು ಓದಿದನಂತರ ಗೀತೆಯ ಸಂಬಂಧವಾಗಿ ಹೆಚ್ಚು ಓದಬೇಕೆನಿಸಿತು ಅದರಂತೆ ಗೀತೆಯ ಬಗ್ಗೆ ಅನೇಕ ಗ್ರಂಥಗಳನ್ನು ತಿರುವಿಹಾಕಿದೆ.

ಸನ್ ೧೮೮೮–೮೯ರಲ್ಲಿ ಎಡ್‌ವಿನ್ ಆರ್ನಾಲ್ಡರ ಇಂಗ್ಲೀಷ್ ಪದ್ಯಾನುವಾದದ ಮೂಲಕ ನನಗೆ ಮೊಟ್ಟಮೊದಲು ಗೀತೆಯ ಪರಿಚಯವಾಯಿತು. ಅದನ್ನು ಓದಿದಮೇಲೆ ಗೀತೆಯ ಗುಜರಾತಿ ಭಾಷಾಂತರವನ್ನು ಓದುವ ಇಚ್ಛೆ ಬಲವಾಯಿತು. ಕೈಗೆ ಸಿಕ್ಕ ಅನುವಾದಗಳನ್ನೆಲ್ಲ ಓದಿದೆ. ಆದರೆ ಇಷ್ಟುಮಾತ್ರಕ್ಕೆ ಜನತೆಯ ಎದುರಿಗೆ ನನ್ನ ಅನುವಾದ ಹಿಡಿದು ನಿಲ್ಲಲು ನನಗೆ ಸ್ವಲ್ಪವೂ

ಅಧಿಕಾರವಿಲ್ಲ—ಅಷ್ಟೇ ಅಲ್ಲ, ನನ್ನ ಸಂಸ್ಕೃತಜ್ಞಾನವೂ ಅಲ್ಪ ಗುಜರಾತಿ ಸಾಹಿತ್ಯದ ಜ್ಞಾನವೂ ಇಲ್ಲ ಹಾಗಾದರೆ ಗೀತೆಯನ್ನು ಅನುವಾದಿಸುವ ಧಾಷ್ಟ್ಯರ್ವನ್ನು ನಾನೇಕೆ ಮಾಡಿದೆ?

ಗೀತೆಯನ್ನು ನಾನು ಯಾವ ರೀತಿ ತಿಳಿದಿದೇನೋ, ಅದೇ ರೀತಿ ಅದನ್ನು ಆಚರಿಸಲು ನಾನೂ ನನ್ನ ಸಂಗಾತಿಗಳು ಕೆಲವರೂ ಪ್ರಯತ್ನಿಸುತ್ತಿದೇವೆ ನಮಗೆ ಗೀತೆ ಒಂದು ಆಧ್ಯಾತ್ಮಿಕ ನಿದಾನಗ್ರಂಥ ಗೀತೆಗನುಸಾರವಾಗಿ ನಡೆಯುವುದರಲ್ಲಿ ಪ್ರತಿದಿನವೂ ನಮಗೆ ನಿಷ್ಫಲತೆಯೇ ಆದರೆ ಪ್ರಯತ್ನಶೀಲ ರಾಗಿದ್ದಾಗಲೇ ಈ ನಿಷ್ಫಲತೆ ಈ ನಿಷ್ಫಲತೆಯಲ್ಲಿ ಸಫಲತೆಯ ಅರುಣೋದಯದ ಕಿರಣ ನಮಗೆ ಕಾಣಬರುತ್ತದೆ ಈ ಚಿಕ್ಕ ಗುಂಪು ಯಾವ ಅರ್ಥವನ್ನು ಆಚರಣೆಗೆ ತರಲು ಯತ್ನಿಸುತ್ತಿದೆಯೋ ಆ ಅರ್ಥ ಈ ಅನುವಾದದಲ್ಲಿದೆ

ಅದಲ್ಲದೆ ಯಾರು ಹೆಚ್ಚು ಓದುಬರಹವನ್ನರಿಯದೆ, ಮೂಲ ಸಂಸ್ಕೃತದ ಗೀತೆಯನ್ನರಿಯಲು ಸಮಯವೋ ಇಚ್ಛೆಯೋ ಇಲ್ಲದವರಾಗಿದ್ದರೂ, ಗೀತಾ ರೂಪದ ಆಧಾರ ಆವಶ್ಯಕವೋ ಅಂತಹ ಸ್ತ್ರೀ, ವೈಶ್ಯ, ಶೂದ್ರಾದಿಗಳಿಗಾಗಿ ಈ ಅನುವಾದ ಮಾಡಲಾಗಿದೆ. ನನಗೆ ಗುಜರಾತಿ ಭಾಷೆಯ ಜ್ಞಾನವೂ ಅಲ್ಪವೇ ಆದರೂ ನನ್ನ ಬಳಿ ಇರುವ ಮೂಲಧನವನ್ನು ಗುಜರಾತಿಗಳಿಗೆ ಅರ್ಪಿಸಬೇಕೆಂಬುದು ಯಾವಾಗಲೂ ನನ್ನ ಆಸೆ ಅವಾಚ್ಯ–ಅಶ್ಲೀಲ ಸಾಹಿತ್ಯ ಪ್ರವಾಹ ವೇಗವಾಗಿ ಹರಿಯುತ್ತಿರುವ ಈ ಕಾಲದಲ್ಲಿ, ಹಿಂದೂ ಧರ್ಮದಲ್ಲಿ ಅದ್ವಿತೀಯವೆಂದೆನಿಸಿದ ಈ ಗ್ರಂಥದ ಸರಳ ಅನುವಾದ ಗುಜರಾತಿ ಜನತೆಗೆ ದೊರೆಯಬೇಕು. ಅದರ ಮೂಲಕ ಅವರು ಆ ಸಾಹಿತ್ಯಪ್ರವಾಹವನ್ನು ಎದುರಿಸುವ ಶಕ್ತಿ ಹೊಂದಬೇಕೆಂದು ನನಗೆ ಆಸೆ

ಗುಜರಾತಿಯ ಇತರ ಅನುವಾದಗಳ ಅವಹೇಳನೆ ಈ ಅಭಿಲಾಷೆಯ ಉದ್ದೇಶ್ಯವಲ್ಲ ಆ ಅನುವಾದಗಳಿಗೂ ತಕ್ಕ ಸ್ಥಾನವಿದೆ ಆ ಅನುವಾದಕರಿಗೆ ಆಚಾರದ, ಅನುಭವದ ಅಧಿಕಾರ ನಾನು ತಿಳಿದಂತೆ ಇಲ್ಲ ಈ ಅನುವಾದಕ್ಕೆ ೩೮ ವರುಷದ ಆಚರಣೆಯ, ಪ್ರಯತ್ನದ ಆಧಾರವಿದೆ ಆದುದರಿಂದ ಧರ್ಮವನ್ನು ಆಚರಿಸಲು ಇಚ್ಛಿಸುವ ಪ್ರತಿಯೊಬ್ಬ ಗುಜರಾತಿ ಬಂಧುಭಗಿನಿಯೂ ಇದನ್ನು ಓದಿ, ಮನನಮಾಡಿ, ಇದರಿಂದ ಶಕ್ತಿಪಡೆಯುವಂತಾಗಲೆಂದು ನಾನು ಆಶಿಸುತ್ತೇನೆ.

ಈ ಅನುವಾದದಲ್ಲಿ ನನ್ನ ಸಂಗಾತಿಗಳು ಸಹಾಯಮಾಡಿದ್ದಾರೆ ಏಕೆಂದರೆ ನನ್ನ ಸಂಸ್ಕೃತಜ್ಞಾನ ಅಲ್ಪ, ಶಬ್ದಾರ್ಥಗಳ ವಿಚಾರದಲ್ಲಿ ನನಗೆ ಸಂಪೂರ್ಣ ವಿಶ್ವಾಸವಿರಲಿಲ್ಲ, ಈ ದೃಷ್ಟಿಯಿಂದ ಈ ಅನುವಾದವನ್ನು ವಿನೋಬಾ, ಕಾಕಾ ಕಾಲೇಲಕರ, ಮಹಾದೇವ ದೇಸಾಯಿ, ಕಿಶೋರಲಾಲ ಮಶರೂವಾಲ ಇವರು ನೋಡಿದ್ದಾರೆ

೨

ಇನ್ನು ಗೀತೆಯ ಅರ್ಥ

೧೮೮೮-೮೯ರಲ್ಲಿ ನನಗೆ ಮೊಟ್ಟಮೊದಲು ಗೀತೆಯ ದರ್ಶನವಾದಾಗಲೇ ಗೀತೆ ಐತಿಹಾಸಿಕ ಗ್ರಂಥವಲ್ಲ, ಇದರಲ್ಲಿನ ಭೌತಿಕಯುದ್ಧ ಒಂದು ನಿಮಿತ್ತ, ಪ್ರತಿಯೊಬ್ಬ ಮನುಷ್ಯನ ಹೃದಯದಲ್ಲಿ ನಿರಂತರವೂ ನಡೆಯುತ್ತಿರುವ ದ್ವಂದ್ವ ಯುದ್ಧದ ವರ್ಣನೆ ಇದು, ಹೃದಯಗತ ಯುದ್ಧವನ್ನು ಮನೋರಂಜಕವಾಗಿ ಮಾಡಲು ಬಂದಿದೆ ಮಾನವಯೋಧರ ಕಲ್ಪನೆ ಎನಿಸಿತು ಧರ್ಮದ ಬಗ್ಗೆ, ಗೀತೆಯ ಬಗ್ಗೆ ಹೆಚ್ಚು ಹೆಚ್ಚು ವಿಚಾರಮಾಡಿದಂತೆಲ್ಲ ಈ ಪ್ರಥಮ ಸ್ಫೂರ್ತಿ ಮತ್ತಷ್ಟು ದೃಢವಾಯಿತು ಮಹಾಭಾರತವನ್ನು ಓದಿದ ಮೇಲಂತೂ ಈ ವಿಚಾರ ಮತ್ತಷ್ಟು ಪುಷ್ಟಿಗೊಂಡಿತು ಈಗಿನ ಅರ್ಥದಂತೆ ಮಹಾಭಾರತ ಒಂದು ಇತಿಹಾಸವೆಂದು ನಾನು ಭಾವಿಸಲಾರೆ ಇದಕ್ಕೆ ಪ್ರಬಲ ಪ್ರಮಾಣಗಳು ಆದಿಪರ್ವದಲ್ಲಿಯೇ ಇವೆ. ಪಾತ್ರಗಳ ಮಾನುಷ-ಅಮಾನುಷ ಉತ್ಪತ್ತಿಯ ವರ್ಣನೆ ಮಾಡಿ, ವ್ಯಾಸಭಗವಾನರು ರಾಜ-ಪ್ರಜೆಗಳ ಇತಿಹಾಸವನ್ನು ನಿರ್ಮೂಲಗೊಳಿಸಿದ್ದಾರೆ ಮಹಾಭಾರತದಲ್ಲಿ ವರ್ಣಿಸಿದ ಪಾತ್ರಗಳು ಮೂಲತಃ ಐತಿಹಾಸಿಕವಾಗಿರಬಹುದು. ಆದರೆ ವ್ಯಾಸಭಗವಾನರು ಧರ್ಮದ ದರ್ಶನ ಮಾಡಿಸಲೆಂದು ಮಹಾಭಾರತದಲ್ಲಿ ಆ ಪಾತ್ರಗಳನ್ನು ಉಪಯೋಗಿಸಿದ್ದಾರೆ.

ಮಹಾಭಾರತ ಕರ್ತೃ ಭೌತಿಕಯುದ್ಧ ಆವಶ್ಯಕವೆಂದಲ್ಲ, ಅದು ನಿರರ್ಥಕ ವೆಂದೇ ಸಿದ್ಧಪಡಿಸಿದ್ದಾನೆ ಗೆದ್ದವನನ್ನು ಅಳಿಸಿದ್ದಾನೆ, ಪಶ್ಚಾತ್ತಾಪಪಡಿಸಿದ್ದಾನೆ, ಅವನಿಗೆ ದುಃಖವಲ್ಲದೆ ಮತ್ತೇನೂ ದೊರೆಯದಂತೆ ಮಾಡಿದ್ದಾನೆ.

ಈ ಮಹಾಗ್ರಂಥದಲ್ಲಿ ಗೀತೆಯ ಸ್ಥಾನ ಮುಕುಟಮಣಿಯಂತೆ ಸರ್ವೋಚ್ಚ. ಗೀತೆಯ ಎರಡನೆಯ ಅಧ್ಯಾಯ ಭೌತಿಕಯುದ್ಧದ ವ್ಯವಹಾರ

ವನ್ನು ತಿಳಿಸುವುದಕ್ಕೆ ಬದಲು ಸ್ಥಿತಪ್ರಜ್ಞನ ಲಕ್ಷಣಗಳನ್ನು ಬೋಧಿಸುತ್ತದೆ ಸ್ಥಿತಪ್ರಜ್ಞನ ಲಕ್ಷಣಗಳಿಂದಲೇ ಅವನಿಗೂ ಐಹಿಕಯುದ್ಧಕ್ಕೂ ಯಾವ ಸಂಬಂಧವೂ ಇರಲಾರದೆಂಬುದು ಕಂಡುಬರುತ್ತದೆ ಇನ್ನು ಸಾಮಾನ್ಯ ಕೌಟುಂಬಿಕ ಕಲಹಗಳ ಔಚಿತ್ಯ–ಅನೌಚಿತ್ಯಗಳ ನಿರ್ಣಯಮಾಡಲು ಗೀತೆ ಯಂಥ ಗ್ರಂಥನಿರ್ಮಾಣ ಅಸಂಭವ

ಗೀತೆಯ ಕೃಷ್ಣ ಮೂರ್ತಿಮಂತ ಶುದ್ಧ ಸಂಪೂರ್ಣ ಜ್ಞಾನ ಆದರೆ ಕಾಲ್ಪನಿಕ ಎಂದರೆ ಕೃಷ್ಣ ಎಂಬ ಅವತಾರಪುರುಷ ಇರಲಿಲ್ಲ ಎಂದಲ್ಲ ಸಂಪೂರ್ಣ ಕೃಷ್ಣ ಮಾತ್ರ ಕಾಲ್ಪನಿಕ ಸಂಪೂರ್ಣಾವತಾರದ ಆರೋಪಣೆ ಆಮೇಲಿನದು.

ಅವತಾರ ಎಂದರೆ ಶರೀರಧಾರಿಯಾದ ಪುರುಷವಿಶೇಷ ಎಂದು ಅರ್ಥ. ಜೀವಿಜೀವಿಯೂ ಪರಮಾತ್ಮನ ಅವತಾರವೇ ಆದರೂ ಲೌಕಿಕ ಭಾಷೆಯಲ್ಲಿ ಎಲ್ಲರನ್ನೂ ನಾವು ಅವತಾರಿಗಳೆನ್ನುವುದಿಲ್ಲ ಯಾರು ತನ್ನ ಕಾಲದಲ್ಲಿ ಇತರರಿ ಗಿಂತ ಶ್ರೇಷ್ಠ ಧಾರ್ಮಿಕನೋ ಅವನನ್ನು ಮುಂದಿನ ಪೀಳಿಗೆ ಅವತಾರಪುರುಷ ನೆಂದು ಪೂಜಿಸುತ್ತದೆ ಇದರಲ್ಲಿ ನನಗೆ ಯಾವ ದೋಷವೂ ಕಾಣಿಸದು ಇದರಿಂದ ಈಶ್ವರನ ಮಹತ್ವಕ್ಕೂ ಹಾನಿ ತಟ್ಟದು, ಸತ್ಯಕ್ಕೂ ಆಘಾತವಾಗದು. 'ಆದಮ್ (ಪ್ರಥಮ ಮನುಷ್ಯ) ದೇವರಲ್ಲ ಆದರೆ ದೇವರ ಮಹಿಮೆಯಿಂದ ಅವನು ಬೇರೆಯಲ್ಲ' ತನ್ನ ಯುಗಕ್ಕಿಂತಲೂ ಸರ್ವಾಧಿಕ ಧರ್ಮಜಾಗೃತಿ ಯಾರಲ್ಲಿ ಇದೆಯೋ ಅವನೇ ವಿಶೇಷಾವತಾರ ಈ ವಿಚಾರಸರಣಿಯಿಂದ ಕೃಷ್ಣರೂಪದ ಸಂಪೂರ್ಣಾವತಾರ ಇಂದು ಹಿಂದೂ ಧರ್ಮದ ಅವತಾರ ಸಾಮ್ರಾಟ್ !

ಈ ದೃಶ್ಯ ಮನುಷ್ಯನ ಅಂತಿಮ ಸದಭಿಲಾಷೆಯನ್ನು ಸೂಚಿಸುತ್ತದೆ ಈಶ್ವರರೂಪ ಹೊಂದದೆ ಮನುಷ್ಯನ ಮನಸ್ಸಿಗೆ ಹಿತವಿಲ್ಲ, ಶಾಂತಿಯೂ ಇಲ್ಲ ಈಶ್ವರರೂಪ ಹೊಂದುವ ಪ್ರಯತ್ನವೇ ನಿಜವಾದ ಏಕಮಾತ್ರ ಪುರುಷಾರ್ಥ ಇದೇ ಆತ್ಮದರ್ಶನ ಈ ಆತ್ಮದರ್ಶನವೇ ಎಲ್ಲ ಧರ್ಮಗ್ರಂಥಗಳ ವಸ್ತು ಗೀತೆಯಲ್ಲಿಯೂ ಅಷ್ಟೇ ಆದರೆ ಗೀತೆಯ ಕರ್ತ ಈ ವಿಷಯದ ಪ್ರತಿಪಾದನೆ ಗಾಗಿ ಗೀತೆಯನ್ನು ರಚಿಸಲಿಲ್ಲ. ಆತ್ಮಾರ್ಥಿಗೆ ಆತ್ಮದರ್ಶನಕ್ಕೆ ಒಂದು ಅದ್ವಿ ತೀಯ ಉಪಾಯವನ್ನು ತೋರುವುದೇ ಗೀತೆಯ ಆಶಯ. ಹಿಂದೂ ಧರ್ಮ

ಗ್ರಂಥಗಳಲ್ಲಿ ಅಲ್ಲಿ–ಇಲ್ಲಿ ಚೆಲ್ಲಿರುವ ವಸ್ತುವನ್ನು ಗೀತೆ ಅನೇಕ ರೂಪದಲ್ಲಿ, ಅನೇಕ ಶಬ್ದಗಳಲ್ಲಿ, ಪುನರುಕ್ತಿದೋಷವನ್ನು ಸ್ವೀಕರಿಸಿಯೂ ಕೂಡ, ವಿವರವಾಗಿ ಸ್ಥಾಪಿಸಿದೆ

ಆ ಅದ್ವಿತೀಯ ಉಪಾಯ ‘ ಕರ್ಮಫಲತ್ಯಾಗ.’

ಈ ಮಧ್ಯಬಿಂದುವಿನ ನಾಲ್ಕು ಕಡೆಗಳಲ್ಲಿಯೂ ಗೀತೆಯ ಪುಷ್ಪಹಾರ ಪೋಣಿಸಲ್ಪಟ್ಟಿದೆ ಭಕ್ತಿ, ಜ್ಞಾನ ಮೊದಲಾದುವು ಅದರ ಅಕ್ಕಪಕ್ಕದ ತಾರಾಮಂಡಲ ದೇಹವಿದ್ದಲ್ಲಿ ಕರ್ಮವಿದ್ದೇ ಇದೆ ಅದರಿಂದ ಯಾರೂ ಮುಕ್ತರಾಗಲಾರರು ಹೀಗಿದ್ದರೂ ದೇಹವನ್ನು ಪ್ರಭುವಿನ ಮಂದಿರ–ನಿವಾಸಸ್ಥಾನವೆಂದು ತಿಳಿದು ನಡೆದರೆ ಮೋಕ್ಷ ದೊರೆಯುತ್ತದೆಂದು ಎಲ್ಲ ಧರ್ಮಗಳೂ ಪ್ರತಿಪಾದಿಸುತ್ತವೆ ಆದರೆ ಕರ್ಮಮಾತ್ರದಲ್ಲಿ ಏನಾದರೂ ದೋಷವಿದ್ದೇ ಇರುತ್ತದೆ. ಮುಕ್ತಿಯಾದರೋ ನಿರ್ದೋಷವಾದುದು. ಹಾಗಾದರೆ ಕರ್ಮಸಂಬಂಧದಿಂದ ಎಂದರೆ ದೋಷಸ್ಪರ್ಶದಿಂದ ಬಿಡಿಸಿಕೊಳ್ಳುವುದು ಹೇಗೆ ? ಗೀತೆ ನಿಶ್ಚಯಾತ್ಮಕ ಶಬ್ದಗಳಿಂದ ಇದಕ್ಕೆ ಹೀಗೆ ಉತ್ತರ ಕೊಟ್ಟಿದೆ .

‘ ನಿಷ್ಕಾಮ ಕರ್ಮದಿಂದ, ಯಜ್ಞಾರ್ಥವಾಗಿ ಕರ್ಮಮಾಡಿ, ಕರ್ಮಫಲವನ್ನು ತ್ಯಜಿಸಿ, ಸರ್ವ ಕರ್ಮಗಳನ್ನೂ ಕೃಷ್ಣಾರ್ಪಣ ಮಾಡಿ, ಮನ, ವಚನ, ಕಾಯಗಳನ್ನು ಈಶ್ವರಾರ್ಪಣೆ ಮಾಡಿ ’

ಕರ್ಮಫಲತ್ಯಾಗ, ಎಂದು ಬಾಯಿಂದ ಹೇಳಿದಮಾತ್ರಕ್ಕೆ ನಿಷ್ಕಾಮತೆ ಆಗಲಿಲ್ಲ. ಅದು ಕೇವಲ ಬುದ್ಧಿಯ ಕೆಲಸವಲ್ಲ ಹೃದಯಮಥನದಿಂದಲೇ ಇದು ಉತ್ಪತ್ತಿಯಾಗುತ್ತದೆ ಈ ತ್ಯಾಗಶಕ್ತಿಯನ್ನು ಹುಟ್ಟಿಸಲು ಜ್ಞಾನ ಬೇಕು ಒಂದು ಬಗೆಯ ಜ್ಞಾನ ಪಂಡಿತರಲ್ಲಿ ಇದ್ದೇ ಇರುತ್ತದೆ ವೇದಾದಿ ಗ್ರಂಥಗಳನ್ನು ಅವರು ಕಂಠಪಾಠ ಮಾಡಿರುತ್ತಾರೆ. ಆದರೆ ಅವರಲ್ಲಿ ಹೆಚ್ಚು ಜನ ಭೋಗಾದಿಗಳಲ್ಲಿ ಮುಳುಗಿರುತ್ತಾರೆ ಈ ಭಯದಿಂದಲೇ ಜ್ಞಾನಾತಿರೇಕ ಶುಷ್ಕಪಾಂಡಿತ್ಯವಾಗಿ ಪರಿಣಮಿಸದಂತೆ ಗೀತಾಕಾರ ಜ್ಞಾನಕ್ಕೆ ಭಕ್ತಿಯನ್ನು ಜೋಡಿಸಿ ಅದಕ್ಕೆ ಪ್ರಥಮ ಸ್ಥಾನವನ್ನು ಕೊಟ್ಟಿದಾನೆ ಭಕ್ತಿವಿಹೀನ ಜ್ಞಾನ ಹಾನಿಕರ. ಆದುದರಿಂದಲೇ ‘ ಭಕ್ತಿ ಮಾಡು , ಜ್ಞಾನ ಲಭಿಸಿಯೇ ಲಭಿಸುತ್ತದೆ ’ ಎಂದು ಹೇಳಲಾಗಿದೆ ಆದರೆ ಭಕ್ತಿ ಬುದ್ಧಿಯ ಸಾಮಗ್ರಿ ಆ ಕಾರಣದಿಂದಲೆ ಗೀತಾಕಾರ ಸ್ಥಿತಪ್ರಜ್ಞನ ಲಕ್ಷಣಗಳನ್ನೇ ಭಕ್ತನಿಗೂ ಅನ್ವಯಿಸಿದಾನೆ.

ಒಟ್ಟಿನಲ್ಲಿ ಗೀತೆಯ ಭಕ್ತಿ ಯಾವ ಮಿಥ್ಯಾವಸ್ತುವೂ ಅಲ್ಲ, ಅಂಧ ಶ್ರದ್ಧೆಯೂ ಅಲ್ಲ ಗೀತೆಯಲ್ಲಿ ವಿವರಿಸಿರುವ ಉಪಚಾರಗಳಿಗೆ ಬಾಹ್ಯಕ್ರಿಯೆಯ ಸಂಬಂಧ ಹೆಚ್ಚಾಗಿಲ್ಲ ಜಪಮಾಲೆ, ನಾಮ, ಅರ್ಘ್ಯಾದಿ ಸಾಧನಗಳನ್ನು ಭಕ್ತ ಉಪಯೋಗಿಸಬಹುದು ಅವು ಭಕ್ತಿಯ ಲಕ್ಷಣವಲ್ಲ. ಯಾರು ಯಾರನ್ನೂ ದ್ವೇಷಿಸದೆ ಕರುಣೆಯ ಭಂಡಾರವೇ ಆಗಿದಾನೋ, ಮಮತಾರಹಿತನೋ, ನಿರಹಂಕಾರಿಯೋ, ಯಾರಿಗೆ ಸುಖದುಃಖಗಳೂ ಶೀತೋಷ್ಣಗಳೂ ಸಮಾನವೋ, ಯಾರು ಕ್ಷಮಾಶೀಲ, ಸದಾಸಂತುಷ್ಟ, ದೃಢಸಂಕಲ್ಪ ಆಗಿ, ತನ್ನ ಮನಸ್ಸು-ಬುದ್ಧಿಗಳನ್ನು ಈಶ್ವರಾರ್ಪಣ ಮಾಡಿದಾನೆಯೋ, ಯಾರಿಂದ ಜನರಿಗೆ ಕಷ್ಟವಾಗದೋ, ಯಾರು ಇತರರಿಗೆ ಭಯಪಡನೋ, ಯಾರು ಹರ್ಷ, ಶೋಕ, ಭಯ ಇತ್ಯಾದಿಗಳಿಂದ ಮುಕ್ತನಾಗಿ, ಪವಿತ್ರನಾಗಿ ಇರುತ್ತಾನೆಯೋ, ಕಾರ್ಯದಕ್ಷನಾಗಿದ್ದರೂ ಯಾರು ತಟಸ್ಥನೋ, ಯಾರು ಶುಭಾಶುಭಗಳನ್ನು ತ್ಯಜಿಸಿ ಶತ್ರು-ಮಿತ್ರರಲ್ಲಿ ಸಮಭಾವವನ್ನಿಡುತ್ತಾನೆಯೋ, ಯಾರಿಗೆ ಮಾನಾಪಮಾನಗಳು ಸಮಾನವೋ, ಯಾರು ಸ್ತುತಿಯಿಂದ ಉಬ್ಬದೆ, ನಿಂದೆಯಿಂದ ಕುಗ್ಗದೆ ಇರುತ್ತಾನೋ, ಯಾರು ಮೌನಧಾರಿಯೋ, ಏಕಾಂತ ಯಾರಿಗೆ ಪ್ರಿಯವೋ, ಯಾರು ಸ್ಥಿರಬುದ್ಧಿಯುಳ್ಳವನೋ—ಅವನೇ ಭಕ್ತ. ಈ ಬಗೆಯ ಭಕ್ತಿ ವಿಷಯಾಸಕ್ತ ಸ್ತ್ರೀಪುರುಷರಲ್ಲಿ ಕಂಡುಬರುವುದಿಲ್ಲ

ಜ್ಞಾನಾರ್ಜನೆ ಮಾಡುವುದೇ ಅಥವಾ ಭಕ್ತನಾಗುವುದೇ ಆತ್ಮದರ್ಶನ ಎಂದು ಮೇಲಿನ ವಾಕ್ಯಗಳಿಂದ ಕಂಡುಬರುತ್ತದೆ ಆತ್ಮದರ್ಶನ ಬೇರೆಯಲ್ಲ ಒಂದು ರೂಪಾಯಿ ಕೊಟ್ಟು ವಿಷವನ್ನಾದರೂ ಕೊಳ್ಳಬಹುದು, ಅಮೃತವನ್ನಾದರೂ ಕೊಳ್ಳಬಹುದು. ಹಾಗೆಯೇ ಜ್ಞಾನ ಅಥವಾ ಭಕ್ತಿಯಿಂದ ಬಂಧನ-ಮೋಕ್ಷ ಎರಡನ್ನೂ ಪಡೆಯಲಾಗುವುದಿಲ್ಲ ಇಲ್ಲಿ ಸಾಧನ-ಸಾಧ್ಯಗಳು ಬೇರೆ ಬೇರೆಯಾಗಿದ್ದರೂ ಹೆಚ್ಚುಕಡಮೆ ಅವೆರಡೂ ಒಂದೇ ವಸ್ತುವೇ ಸಾಧನೆಯ ಪರಾಕಾಷ್ಠೆಯೇ ಮೋಕ್ಷ ಗೀತೆಯಲ್ಲಿ ಹೇಳಿರುವ ಮೋಕ್ಷದ ಅರ್ಥ ಪರಮಶಾಂತಿ

ಆದರೆ ಇಂಥ ಜ್ಞಾನ, ಭಕ್ತಿಗಳನ್ನು ಕರ್ಮಫಲತ್ಯಾಗವೆಂಬ ಒರೆಗಲ್ಲಿಗೆ ಹಚ್ಚಿ ನೋಡಬೇಕು ಲೌಕಿಕ ದೃಷ್ಟಿಯಿಂದ ಶುಷ್ಕಪಂಡಿತನೂ ಜ್ಞಾನಿ ಎನಿಸಿಕೊಳ್ಳುತ್ತಾನೆ ಅವನು ಯಾವ ಕೆಲಸವನ್ನೂ ಮಾಡನು ನೀರಿನ

ಪಾತ್ರೆಯನ್ನೆತ್ತುವುದೂ ಅವನಿಗೆ ಕರ್ಮಬಂಧನವೆನ್ನಿಸಬಹುದು. ಎಲ್ಲಿ ಇಂಥ ಯಜ್ಞಶೂನ್ಯ ಮನುಷ್ಯ ಜ್ಞಾನಿಯೆನಿಸಿಕೊಳ್ಳುತ್ತಾನೋ, ಅಲ್ಲಿ ಪಾತ್ರೆಯನ್ನು ಎತ್ತುವ ಅಲ್ಪವಾದ ಲೌಕಿಕ ಕ್ರಿಯೆಗಾದರೂ ಸ್ಥಾನ ದೊರೆತೀತು ಹೇಗೆ ?

ಯಾರು ಜಪಮಾಲೆ ಹಿಡಿದು ಜಪಮಾಡುತ್ತಾನೋ, ಸೇವಾಕರ್ಮಗಳಿಂದ ಯಾರ ಜಪಕ್ಕೆ ಬಾಧೆಯುಂಟಾಗುತ್ತದೋ, ಅಂಥ ಬಾಹ್ಯಾಚಾರಿ ಲೌಕಿಕ ಕಲ್ಪನೆಯಲ್ಲಿ ಭಕ್ತ ಇಂಥ ಭಕ್ತ ಅನ್ನಪಾನಾದಿ ಭೋಗಗಳನ್ನು ಉಪಭೋಗಿಸುವಾಗ ಮಾತ್ರ ತನ್ನ ಜಪಮಾಲೆಯನ್ನು ಕೆಳಗಿಡುತ್ತಾನೆ. ಆದರೆ ಹಿಟ್ಟು ಬೀಸಲಿಕ್ಕೆ ಅಥವಾ ರೋಗಿಯ ಶುಶ್ರೂಷೆ ಮಾಡಲಿಕ್ಕೆ ಎಂದಿಗೂ ಜಪಮಾಲೆಯನ್ನು ಕೆಳಗಿಡ

ಈ ಎರಡು ಬಗೆಯ (ಯಜ್ಞಶೂನ್ಯ ಜ್ಞಾನಿ–ಲೌಕಿಕಭಕ್ತ) ಮನುಷ್ಯರಿಗೆ ಗೀತೆ ಸ್ಪಷ್ಟವಾಗಿ ಹೇಳುತ್ತದೆ 'ಕರ್ಮದ ವಿನಾ ಯಾರಿಗೂ ಸಿದ್ಧಿ ಪ್ರಾಪ್ತವಾಗಿಲ್ಲ ಜನಕಾದಿಗಳು ಕೂಡ ಕರ್ಮದ ಮೂಲಕವೇ ಜ್ಞಾನಿಗಳಾದರು ನಾನು ಕೂಡ ಸೋಮಾರಿಯಾಗಿ ಕೆಲಸ ಮಾಡದಿದ್ದರೆ ಈ ಲೋಕಗಳೇ ನಾಶವಾಗುತ್ತವೆ' ಹೀಗಿರುವಾಗ ಸಾಮಾನ್ಯ ಜನರ ವಿಚಾರದಲ್ಲಿ ಪ್ರತ್ಯೇಕವಾಗಿ ಹೇಳುವುದೇನಿದೆ ?

ಕರ್ಮ ಒಂದು ಕಡೆ ಬಂಧನ, ಇದು ನಿರ್ವಿವಾದ. ಮತ್ತೊಂದು ಕಡೆ ಇಚ್ಛೆಯಿಂದಲೋ ಅನಿಚ್ಛೆಯಿಂದಲೋ ದೇಹಿ ಕರ್ಮಮಾಡುತ್ತಲೆ ಇರುತ್ತಾನೆ. ಶಾರೀರಕ, ಮಾನಸಿಕ ಎಲ್ಲಾ ಕ್ರಿಯೆಯೂ ಕರ್ಮವೇ. ಹಾಗಾದರೆ, ಕರ್ಮ ಮಾಡುತ್ತಿದ್ದರೂ ಮನುಷ್ಯ ಬಂಧನಮುಕ್ತನಾಗುವುದು ಹೇಗೆ ? ಈ ಸಮಸ್ಯೆಯ ಉತ್ತರವನ್ನು ಗೀತೆಯಲ್ಲಿ ಸ್ಪಷ್ಟವಾಗಿ ತಿಳಿಸಿದಂತೆ ಮತ್ತಾವ ಧರ್ಮಗ್ರಂಥದಲ್ಲಿಯೂ ಅಷ್ಟು ಸ್ಪಷ್ಟವಾಗಿ ವರ್ಣಿಸಿಲ್ಲ **'ಫಲಾಸಕ್ತಿ ಬಿಟ್ಟು ಕರ್ಮ ಮಾಡು', 'ನಿರಾಶನಾಗಿ ಕರ್ಮಮಾಡು', 'ನಿಷ್ಕಾಮನಾಗಿ ಕರ್ಮ ಮಾಡು'** ಎಂದು ಗೀತೆ ಹೇಳುತ್ತದೆ ಎಂದೆಂದಿಗೂ ಮರೆಯಬಾರದಂಥ ಗೀತೆಯ ಧ್ವನಿ ಇದು ಕರ್ಮವನ್ನು ಬಿಟ್ಟವನು ಪತಿತನಾಗುತ್ತಾನೆ. ಕರ್ಮನಿರತನಾಗಿ ಅದರ ಫಲದಾಸೆ ಬಿಟ್ಟವನು ಉನ್ನತಿ ಐದುತ್ತಾನೆ

ಇಲ್ಲಿ, ಫಲತ್ಯಾಗ ಮಾಡುವವನಿಗೆ ತ್ಯಾಗದ ಫಲ ಲಭಿಸದೆಂದು ಅರ್ಥ ಮಾಡಬಾರದು ಗೀತೆಯಲ್ಲಿ ಇಂಥ ಅರ್ಥಕ್ಕೆ ಅವಕಾಶವೇ ಇಲ್ಲ. ಫಲತ್ಯಾಗ

ಎಂಬಲ್ಲಿ ಫಲದ ಎಂದರೆ ಆಸಕ್ತಿಯ ಅಭಾವವೆಂದು ಅರ್ಥ ಫಲತ್ಯಾಗಿಗೆ ಸಾವಿರಪಟ್ಟು ಹೆಚ್ಚು ಫಲವೇ ಲಭಿಸುತ್ತದೆ ಗೀತೆಯ ಫಲತ್ಯಾಗವಾದರೋ ಅಖಂಡಶ್ರದ್ಧೆಯ ಒರೆಗಲ್ಲು ಯಾವ ಮನುಷ್ಯ ಪರಿಣಾಮವನ್ನು ಕುರಿತು ಚಿಂತಿಸುತ್ತಾನೋ ಅವನು ಅಧಿಕವಾಗಿ ಕರ್ಮ–ಕರ್ತವ್ಯಭ್ರಷ್ಟನಾಗುತ್ತಾನೆ, ಅಧೀರನಾಗುತ್ತಾನೆ, ಕೊನೆಗೆ ಕ್ರೋಧವಶನಾಗುತ್ತಾನೆ, ಅಕಾರ್ಯ ಮಾಡ ಲಾರಂಭಿಸುತ್ತಾನೆ. ಒಂದು ಕರ್ಮದಿಂದ ಇನ್ನೊಂದು, ಇನ್ನೊಂದರಿಂದ ಮತ್ತೊಂದು—ಹೀಗೆ ಮಾಡಮಾಡುತ್ತ ದಾರಿ ತಪ್ಪಿ ಮೋಸಹೋಗುತ್ತಾನೆ. ಪರಿಣಾಮವನ್ನು ಕುರಿತು ಚಿಂತಿಸುವವನ ಅವಸ್ಥೆ ವಿಷಯಾಂಧನ ಸ್ಥಿತಿಯಂತೆ. ಕೊನೆಗೆ ಅವನು ವಿಷಯಾಸಕ್ತನಂತೆ ಸಾರಾಸಾರ, ನೀತಿ–ಅನೀತಿಗಳ ವಿವೇಕ ವನ್ನು ತೊರೆದು ಫಲಪ್ರಾಪ್ತಿಗಾಗಿ ತಾನು ಉಪಯೋಗಿಸುವ ಸಾಧನವೇ ಧರ್ಮ ಎಂದು ಭಾವಿಸುತ್ತಾನೆ

ಫಲಾಸಕ್ತಿಯ ಈ ಕಹಿಯಾದ ಪರಿಣಾಮಗಳಿಂದ ಗೀತಾಕಾರ ಅನಾಸಕ್ತಿಯ, ಕರ್ಮಫಲತ್ಯಾಗದ ಸಿದ್ಧಾಂತವನ್ನು ರೂಪುಗೊಳಿಸಿ ಅದನ್ನು ಅತ್ಯಾಕರ್ಷಕ ಭಾಷೆಯಲ್ಲಿ ಜಗತ್ತಿನೆದುರಿಗೆ ಇಟ್ಟಿದಾನೆ. ಸಾಮಾನ್ಯವಾಗಿ ಜನರಿಗೆ ಧರ್ಮ–ಅರ್ಥಗಳು ಪರಸ್ಪರ ವಿರುದ್ಧ ವಸ್ತುಗಳು. 'ವ್ಯಾಪಾರಾದಿ ಲೌಕಿಕ ವ್ಯವಹಾರದಲ್ಲಿ ಧರ್ಮವನ್ನು ಕಾಪಾಡಿಕೊಳ್ಳಲಾಗುವುದಿಲ್ಲ, ಅಲ್ಲಿ ಧರ್ಮಕ್ಕೆ ಸ್ಥಾನವೇ ಇಲ್ಲ, ಧರ್ಮ ಕೇವಲ ಮೋಕ್ಷಕ್ಕಾಗಿ, ಧರ್ಮದ ಸ್ಥಾನದಲ್ಲಿ ಧರ್ಮ, ಅರ್ಥದ ಸ್ಥಾನದಲ್ಲಿ ಅರ್ಥ ಶೋಭಿಸುತ್ತವೆ' ಎಂಬ ಭಾವನೆ. ಗೀತಾಕಾರ ಈ ಭ್ರಮೆಯನ್ನು ನಿವಾರಿಸಿದಾನೆಂದು ನನ್ನ ಅಭಿಪ್ರಾಯ ಮೋಕ್ಷಕ್ಕೂ ವ್ಯವಹಾರಕ್ಕೂ ಯಾವ ಭೇದವನ್ನೂ ಆತ ತೋರಿಸಿಲ್ಲ ಅದಕ್ಕೆ ಬದಲು ಧರ್ಮವನ್ನೆ ವ್ಯವಹಾರದಲ್ಲಿ ಸೇರಿಸಿದಾನೆ ವ್ಯವಹಾರದಲ್ಲಿ ಉಪ ಯೋಗಕ್ಕೆ ಬಾರದ ಧರ್ಮ ಧರ್ಮವೇ ಅಲ್ಲ ಎಂದು ಗೀತೆಯ ಅಭಿಪ್ರಾಯ, ಹೀಗೆ ನಾನು ತಿಳಿದಿದೇನೆ ಆದ್ದರಿಂದ ಗೀತೆಯ ಅಭಿಪ್ರಾಯಾನುಸಾರ, ಆಸಕ್ತಿಯಿಲ್ಲದೆ ಯಾವ ಕರ್ಮಗಳನ್ನು ಮಾಡಲು ಶಕ್ಯವಿಲ್ಲವೊ ಅವೆಲ್ಲವೂ ತ್ಯಾಜ್ಯ ಕರ್ಮ ಈ ಬಗೆಯ ಸುವರ್ಣ ನಿಯಮ ಮನುಷ್ಯನನ್ನು ಅನೇಕ ಧರ್ಮಸಂಕಟಗಳಿಂದ ಪಾರುಮಾಡುತ್ತದೆ ಈ ಅಭಿಪ್ರಾಯದಂತೆ ಕೊಲೆ, ಅಸತ್ಯ, ವ್ಯಭಿಚಾರ ಮುಂತಾದ ಕರ್ಮ ಸಹಜವಾಗಿಯೆ ತ್ಯಾಜ್ಯವಾಗುತ್ತವೆ.

ಫಲತ್ಯಾಗದಿಂದ ಮನುಷ್ಯನ ಜೀವನಕ್ರಮ ಸರಳವಾಗುತ್ತದೆ ಸರಳತೆಯಿಂದ ಶಾಂತಿ ಹುಟ್ಟುತ್ತದೆ ಫಲತ್ಯಾಗವೆಂದರೆ ಪರಿಣಾಮದ ಉಪೇಕ್ಷೆಯೆಂದಲ್ಲ ಅರ್ಥ ಪರಿಣಾಮ, ಸಾಧನವಿಚಾರ, ಅದರ ಜ್ಞಾನ—ಅತ್ಯಂತ ಆವಶ್ಯಕ. ಇಷ್ಟನ್ನು ಮಾಡಿದನಂತರ ಯಾವ ಮನುಷ್ಯ ಪರಿಣಾಮವನ್ನು ಇಚ್ಛಿಸದೆ, ಚಿಂತಿಸದೆ, ಸಾಧನೆಯಲ್ಲಿ ಮಗ್ನನೋ ಅವನೇ ಫಲತ್ಯಾಗಿ.

ಈ ವಿಚಾರಶ್ರೇಣಿಯನ್ನು ಅನುಸರಿಸುತ್ತಿರುವ ನನಗೆ, ಗೀತೆಯ ಬೋಧನೆಯನ್ನು ಆಚರಣೆಯಲ್ಲಿ ತರಲಿಚ್ಛಿಸುವವರು ಸತ್ಯ, ಅಹಿಂಸೆಗಳನ್ನು ಸಹಜವಾಗಿ ಪಾಲಿಸಬೇಕಾಗುತ್ತದೆಂದು ಕಂಡುಬಂದಿದೆ. ಫಲಾಸಕ್ತಿಯಿಲ್ಲದಾಗ ಮನುಷ್ಯನ ಮನಸ್ಸು ಸುಳ್ಳು ಹೇಳಲು ಒಪ್ಪದು, ಹಿಂಸೆಮಾಡಲೂ ಒಪ್ಪದು ಯಾವ ಹಿಂಸಾಪೂರ್ಣ ಅಥವಾ ಅಸತ್ಯದ ಕೆಲಸವನ್ನಾದರೂ ನೋಡಿ. ಅದರ ಮೂಲದಲ್ಲಿ ಪರಿಣಾಮದ ಇಚ್ಛೆಯಿರುತ್ತದೆ. ಗೀತೆಯ ಕಾಲಕ್ಕೆ ಮುಂಚಿನಿಂದಲೂ ಅಹಿಂಸೆ ಪರಮಧರ್ಮವೆಂದು ಪರಿಗಣಿತವಾಗಿತ್ತು ಆದರೆ ಗೀತೆಗೆ ಅನಾಸಕ್ತಿಯನ್ನು ಪ್ರತಿಪಾದಿಸಬೇಕಾಗಿತ್ತು. ಎರಡನೆಯ ಅಧ್ಯಾಯದಲ್ಲಿಯೆ ಈ ವಿಷಯ ಸ್ಪಷ್ಟವಾಗುತ್ತದೆ.

ಗೀತೆಗೆ ಅಹಿಂಸೆ ಮಾನ್ಯವಾಗಿದ್ದರೆ, ಅಥವಾ ಅನಾಸಕ್ತಿಯಲ್ಲಿ ಅಹಿಂಸೆ ಸಹಜವಾಗಿಯೆ ಸಮಾವೇಶವಾಗಿದ್ದರೆ, ಗೀತಾಕಾರ ಉದಾಹರಣೆಗಾದರೂ ಭೌತಿಕ ಯುದ್ಧವನ್ನೇಕೆ ಉಪಯೋಗಿಸಿದ ? ಗೀತಾಯುಗದಲ್ಲಿ ಅಹಿಂಸಾಧರ್ಮ ಮಾನ್ಯವಾಗಿದ್ದರೂ, ಭೌತಿಕ ಯುದ್ಧ ಸರ್ವಸಾಮಾನ್ಯವಾಗಿತ್ತು ಗೀತಾಕಾರ ಇಂತಹ ಯುದ್ಧದ ಉದಾಹರಣೆಯನ್ನು ಕೊಡಲು ಸಂಕೋಚಪಡಲಿಲ್ಲ, ಪಡುವ ಸಂಭವವೂ ಇರಲಿಲ್ಲ

ಫಲತ್ಯಾಗದ ಮಹತ್ವದ ತೂಕವನ್ನು ನಿರ್ಣಯಿಸುವಾಗ ಗೀತಾಕಾರನ ಮನಸ್ಸಿನಲ್ಲಿ ಯಾವ ವಿಚಾರವಿತ್ತು ? ಅವನ ಅಹಿಂಸೆಯ ಮೇರೆ ಎಲ್ಲಿಯವರೆಗೆ ಇತ್ತು ಎಂಬ ಈ ವಿಚಾರಗಳನ್ನು ಚರ್ಚಿಸುವ ಆವಶ್ಯಕತೆ ನಮಗಿಲ್ಲ ಕವಿ ಜಗತ್ತಿನೆದುರಿಗೆ ಮಹತ್ತ್ವಪೂರ್ಣವಾದ ಸಿದ್ಧಾಂತವನ್ನಿಡುತ್ತಾನೆ. ಹಾಗಿಟ್ಟ ಮಾತ್ರಕ್ಕೇ ಅವನು ತನ್ನ ಸಿದ್ಧಾಂತದ ಮಹತ್ವವನ್ನು ಚೆನ್ನಾಗಿ ಅರಿತಿದಾನೆ ಎಂದಾಗಲಿ, ಹಾಗೆ ತಿಳಿದುಕೊಂಡಮೇಲೆಯೇ ಅದೆಲ್ಲವನ್ನೂ ಭಾಷಾಬದ್ಧವಾಗಿ ಮಾಡುತ್ತಾನೆಂದಾಗಲಿ ತಿಳಿಯಕೂಡದು ಅದರಲ್ಲಿ ಕಾವ್ಯ, ಕವಿಯ ಮಹಿಮೆ

ಇದೆ. ಕವಿಯ ಅರ್ಥಕ್ಕೆ ಕೊನೆಯೇ ಇಲ್ಲ ಮನುಷ್ಯನಂತೆ ಮಹಾವಾಕ್ಯಗಳ ಅರ್ಥವೂ ವಿಕಾಸಹೊಂದುತ್ತಿರುತ್ತದೆ ಭಾಷೆಗಳ ಇತಿಹಾಸವನ್ನು ಪರಿಶೋಧಿಸಿದರೆ ಅನೇಕ ಮಹಚ್ಛಬ್ದಗಳ ಅರ್ಥ ನಿತ್ಯವೂ ನವೀನವಾಗುತ್ತಿರುವುದು ಕಂಡುಬರುತ್ತದೆ ಗೀತೆಯ ಅರ್ಥವೂ ಹಾಗೆಯೆ ಸ್ವಯಂ ಗೀತಾಕಾರನೇ ಮಹಾರೂಢ ಶಬ್ದಗಳ ಅರ್ಥವನ್ನು ವಿಸ್ತರಿಸಿದಾನೆ ಗೀತೆಯನ್ನು ಮೇಲೆ ಮೇಲೆ ಅವಲೋಕಿಸಿ ನೋಡಿದರೂ ಇದು ತಿಳಿಯುತ್ತದೆ. ಗೀತಾಯುಗಕ್ಕೆ ಮುಂಚೆ ಪ್ರಾಯಶಃ ಯಜ್ಞದಲ್ಲಿ ಪಶುಹಿಂಸೆ ಮಾನ್ಯವೆನಿಸಿರಬಹುದು ಆದರೆ ಗೀತೆಯ ಯಜ್ಞದಲ್ಲಿ ಅದರ ಗಂಧವೇ ಇಲ್ಲ ಅದರಲ್ಲಿ ಜಪಯಜ್ಞವೇ ಯಜ್ಞರಾಜ. ಯಜ್ಞವೆಂದರೆ ಪರೋಪಕಾರಕ್ಕಾಗಿ ತನ್ನ ಸ್ವಂತ ಶರೀರವನ್ನು ಸವೆಯಿಸುವುದು ಎಂಬ ಅರ್ಥ ಮೂರನೆಯ ಅಧ್ಯಾಯದಿಂದ ತಿಳಿದುಬರುತ್ತದೆ ಮೂರನೆಯ–ನಾಲ್ಕನೆಯ ಅಧ್ಯಾಯಗಳೆರಡನ್ನೂ ಜೋಡಿಸಿ ಬೇರೆ ವ್ಯಾಖ್ಯೆ ಮಾಡಬಹುದು ಆದರೆ ಪಶುಹಿಂಸೆಯ ಮಾತು ಹೊರಡದು ಗೀತೆಯ ಸಂನ್ಯಾಸದ ಅರ್ಥವೂ ಹೀಗೇ. ಗೀತೆಯ ಸಂನ್ಯಾಸಕ್ಕೆ ಕರ್ಮಮಾತ್ರದ ತ್ಯಾಗ ಒಪ್ಪಿಗೆಯಿಲ್ಲ ಗೀತೆಯ ಸಂನ್ಯಾಸಿ ಅತಿಕರ್ಮಿಯಾಗಿದ್ದರೂ ಕೂಡ ಅತಿ-ಅಕರ್ಮಿ ಈ ವಿಧವಾಗಿ ಗೀತಾಕಾರ ಮಹಾಶಬ್ದಗಳ ವ್ಯಾಪಕ ಅರ್ಥವನ್ನು ಸೂಚಿಸಿ, ನಮ್ಮ ಭಾಷೆಗೂ ವ್ಯಾಪಕಾರ್ಥ ಮಾಡಲು ನಮಗೆ ಕಲಿಸಿದಾನೆ ಗೀತಾಕಾರನ ಭಾಷೆಯಿಂದ ಸಂಪೂರ್ಣ ಕರ್ಮಫಲತ್ಯಾಗಿ ಭೌತಿಕ ಯುದ್ಧದಲ್ಲಿ ಭಾಗಿಯಾಗಬಹುದೆಂದು ಗೊತ್ತಿದ್ದರೂ, ಗೀತೋಪದೇಶಗಳನ್ನು ಚೆನ್ನಾಗಿ ಆಚರಣೆಯಲ್ಲಿ ತರಬೇಕೆಂದು ೪೦ ವರುಷಗಳಿಂದ ಸತತವಾಗಿ ಪ್ರಯತ್ನಿಸುತ್ತಿರುವ ನನಗೆ ಸತ್ಯ, ಅಹಿಂಸೆಗಳನ್ನು ಸಂಪೂರ್ಣವಾಗಿ ಪಾಲಿಸಿದ ಹೊರತು ಸಂಪೂರ್ಣ ಕರ್ಮಫಲತ್ಯಾಗ ಅಸಂಭವವೆಂದು ನಮ್ರತಾಪೂರ್ವಕ ಕಂಡುಬಂದಿದೆ.

ಗೀತೆ ಸೂತ್ರಗ್ರಂಥವಲ್ಲ ಗೀತೆ ಒಂದು ಮಹಾ ಧರ್ಮಕಾವ್ಯ ಅದರ ಒಳಗೆ ನೀವು ಎಷ್ಟು ಆಳವಾಗಿ ಪ್ರವೇಶಿಸುತ್ತೀರೋ ಅಷ್ಟೇ ನವೀನ, ಸುಂದರ ಅರ್ಥ ನಿಮಗೆ ದೊರೆಯುತ್ತದೆ ಗೀತೆ ಜನಸಮಾಜಕ್ಕಾಗಿ ಇದೆ ಅದರಲ್ಲಿ ಒಂದೇ ಮಾತನ್ನು ಹಲವು ರೂಪದಲ್ಲಿ ವರ್ಣಿಸಲಾಗಿದೆ ಆ ಕಾರಣದಿಂದ ಗೀತೆಯಲ್ಲಿ ಬಳಸಿದ ಮಹಾಶಬ್ದಗಳ ಅರ್ಥ ಪ್ರತಿಯೊಂದು ಯುಗದಲ್ಲಿಯೂ ವ್ಯತ್ಯಾಸಹೊಂದುತ್ತ ವಿಸ್ತೃತವಾಗುತ್ತ ಹೋದೀತು ಗೀತೆಯ ಮೂಲಮಂತ್ರ

ಎಂದಿಗೂ ಮಾರ್ಪಾಟಾಗಲಾರದು ಯಾವ ರೀತಿಯಲ್ಲಿ ಈ ಮಂತ್ರ ಸಿದ್ಧಿಸುತ್ತದೋ ಆ ರೀತಿಯಲ್ಲಿ ಜಿಜ್ಞಾಸು ಅದಕ್ಕೆ ಬೇಕಾದ ಅರ್ಥವನ್ನು ಮಾಡಬಹುದು.

ಗೀತೆ ವಿಧಿನಿಷೇಧಗಳನ್ನು ಸೂಚಿಸದು ಒಬ್ಬನಿಗೆ ವಿಹಿತವಾದುದು ಮತ್ತೊಬ್ಬನಿಗೆ ಅಹಿತವಾಗಬಹುದು ಒಂದು ಕಾಲದಲ್ಲಿ ಒಂದು ದೇಶದಲ್ಲಿ ಮಾಡಲು ಯೋಗ್ಯವಾದ—ವಿಹಿತವಾದ—ಕಾರ್ಯ ಮತ್ತೊಂದು ಕಾಲದಲ್ಲಿ, ಮತ್ತೊಂದು ದೇಶದಲ್ಲಿ ನಿಷಿದ್ಧವೆಂದು ತೋರಬಹುದು. ನಿಷಿದ್ಧವಾದುದು ಕೇವಲ ಫಲಾಸಕ್ತಿ, ವಿಹಿತವಾದುದು ಅನಾಸಕ್ತಿ.

ಗೀತೆಯಲ್ಲಿ ಜ್ಞಾನಮಹಿಮೆ ಸುರಕ್ಷಿತವಾಗಿದೆ. ಆದರೂ ಗೀತೆ ಬುದ್ಧಿಗಮ್ಯವಲ್ಲ, ಹೃದಯಗಮ್ಯ. ಆದುದರಿಂದಲೆ ಅದು ಅಶ್ರದ್ಧಾಳುಗಳಿಗಲ್ಲ ಗೀತಾಕಾರನೇ ಈ ರೀತಿಯಾಗಿ ಹೇಳಿದಾನೆ :

'ಯಾರು ತಪಸ್ವಿಯಲ್ಲವೊ, ಭಕ್ತನಲ್ಲವೊ, ಯಾರಿಗೆ ಇದನ್ನು ಕೇಳುವ ಇಚ್ಛೆಯಿಲ್ಲವೊ, ಯಾರು ನನ್ನನ್ನು ದ್ವೇಷಿಸುತ್ತಾನೋ ಅಂಥವನಿಗೆ ನೀನು ಇದನ್ನು (ಜ್ಞಾನವನ್ನು) ಎಂದಿಗೂ ಹೇಳಬೇಡ' (೧೮–೬೭)

'ಆದರೆ ಯಾರು ಈ ಪರಮ ಗುಪ್ತ ಜ್ಞಾನವನ್ನು ನನ್ನ ಭಕ್ತರಿಗೆ ಉಪದೇಶಿಸುವನೋ ಅವನು ನನ್ನಲ್ಲಿ ಉತ್ತಮ ಭಕ್ತಿಗೈದು ನಿಸ್ಸಂದೇಹವಾಗಿ ನನ್ನನ್ನು ಹೊಂದುತ್ತಾನೆ' (೧೮–೬೮)

'ಹಾಗೆಯೆ ದ್ವೇಷರಹಿತನಾಗಿ ಶ್ರದ್ಧಾಪೂರ್ವಕವಾಗಿ ಇದನ್ನು ಕೇವಲ ಶ್ರವಣಮಾಡುವವನೂ ಕೂಡ ಮುಕ್ತನಾಗಿ, ಪುಣ್ಯವಂತರ ನಿವಾಸಸ್ಥಾನವಾದ ಶುಭ (ಉತ್ತಮ) ಲೋಕವನ್ನು ಪಡೆಯುತ್ತಾನೆ.' (೧೮–೭೧)

ಕೌಸಾನೀ (ಹಿಮಾಲಯ)
೨೪—೬—೧೯೨೯

ಮೋಹನದಾಸ ಕರಮಚಂದ ಗಾಂಧೀ

---

# ಅಧ್ಯಾಯ ೧

## ಅರ್ಜುನವಿಷಾದಯೋಗ

**[ಜಿಜ್ಞಾಸೆಯಿಲ್ಲದೆ ಜ್ಞಾನವಾಗದು. ದುಃಖವಿಲ್ಲದೆ ಸುಖವಾಗದು. ಧರ್ಮಸಂಕಟ-ಹೃದಯಮಂಥನ ಜಿಜ್ಞಾಸುಗಳಿಗೆ ಒಂದು ಸಲ ಆಗಿಯೇ ಆಗುತ್ತದೆ.]**

**ಧೃತರಾಷ್ಟ್ರ ಹೇಳಿದ :**

ಸಂಜಯ, ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಯುದ್ಧ ಮಾಡಲೆಂದು ಪಾಂಡುಪುತ್ರರೂ ನನ್ನ ಮಕ್ಕಳೂ ಒಂದೆಡೆ ಸೇರಿ ಏನು ಮಾಡಿದರು? ಹೇಳು ॥ ೧ ॥

ಟಿಪ್ಪಣಿ—ಶರೀರವೇ ಧರ್ಮಕ್ಷೇತ್ರ, ಏಕೆಂದರೆ ಇದು ಮೋಕ್ಷಕ್ಕೆ ದ್ವಾರವಾಗ ಬಲ್ಲದು ಪಾಪದಿಂದ ಇದರ ಉತ್ಪತ್ತಿ, ಇದು ಪಾಪಭಾಜನ ಆದುದರಿಂದ ಇದು ಕುರುಕ್ಷೇತ್ರ.

ಕೌರವರು ಎಂದರೆ ಆಸುರೀವೃತ್ತಿಗಳು ಪಾಂಡುಪುತ್ರರು ದೈವೀವೃತ್ತಿಗಳು. ಪ್ರತಿಯೊಂದು ಶರೀರದಲ್ಲಿಯೂ ಒಳ್ಳೆಯ ವೃತ್ತಿ, ಕೆಟ್ಟ ವೃತ್ತಿಗಳಿಗೆ ಕಲಹ ನಡೆಯುತ್ತಿರುವುದನ್ನು ಅನುಭವಿಸದವರು ಯಾರು?

---

## ಪ್ರಥಮೋಽಧ್ಯಾಯಃ

---

**ಧೃತರಾಷ್ಟ್ರ ಉವಾಚ**

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ ।**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥ ೧ ॥**

**ಸಂಜಯ ಹೇಳಿದ :**

ಆ ಸಮಯದಲ್ಲಿ ಅಣಿಯಾಗಿ ನಿಂತಿದ್ದ ಪಾಂಡವರ ಸೇನೆಯನ್ನು ನೋಡಿ ದುರ್ಯೋಧನ ದ್ರೋಣಾಚಾರ್ಯರ ಸಮೀಪಕ್ಕೆ ಹೋಗಿ ಹೇಳಿದ || ೨ ||

ಆಚಾರ್ಯ! ನಿಮ್ಮ ಬುದ್ಧಿವಂತ ಶಿಷ್ಯ, ದ್ರುಪದಪುತ್ರ ಧೃಷ್ಟದ್ಯುಮ್ನ ಸಜ್ಜುಗೊಳಿಸಿದ ಪಾಂಡವರ ಈ ದೊಡ್ಡ ಸೈನ್ಯವನ್ನು ನೋಡಿ || ೩ ||

ಇದರಲ್ಲಿ ಭೀಮಾರ್ಜುನರಂತೆಯೆ ಯುದ್ಧರಂಗದಲ್ಲಿ ಶೂರ ವೀರರೂ ಧನುರ್ಧಾರಿಗಳೂ ಆದ ಯುಯುಧಾನ (ಸಾತ್ಯಕಿ), ವಿರಾಟರಾಜ, ಮಹಾರಥಿಯಾದ ದ್ರುಪದರಾಜ, || ೪ ||

ಧೃಷ್ಟಕೇತು, ಚೇಕಿತಾನ, ಶೂರ ವೀರ ಕಾಶೀರಾಜ, ಪುರುಜಿತ್, ಕುಂತೀಭೋಜ, ಮನುಷ್ಯರಲ್ಲಿ ಶ್ರೇಷ್ಠನೆನಿಸಿದ ಶೈಬ್ಯ, || ೫ ||

ಪರಾಕ್ರಮಿಯೆನಿಸಿದ ಯುಧಾಮನ್ಯು, ಬಲಿಷ್ಠನಾದ ಉತ್ತಮೌಜ, ಸುಭದ್ರಾಪುತ್ರ (ಅಭಿಮನ್ಯು), ದ್ರೌಪದಿಯ ಪುತ್ರರು, ಮಹಾರಥಿಗಳು || ೬ ||

---

**ಸಂಜಯ ಉವಾಚ**

**ದೃಷ್ಟ್ವಾತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ || ೨ ||**

**ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಮ್ ।**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ || ೩ ||**

**ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾಯುಧಿ ।**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ || ೪ ||**

**ಧೃಷ್ಟಕೇತುಶ್ಚೇಕಿತಾನಃ ಕಾಶೀರಾಜಶ್ಚ ವೀರ್ಯವಾನ್ ।**
**ಪುರುಜಿತ್ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ || ೫ ||**

**ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ || ೬ ||**

ಬ್ರಾಹ್ಮಣಶ್ರೇಷ್ಠ, ಈಗ ನಮ್ಮ ಸೈನ್ಯದ ಮುಖ್ಯ ಯೋಧರನ್ನೂ ನೀವು ಅರಿಯಬೇಕು ನಿಮ್ಮ ನೆನಪಿಗಾಗಿ ನಾನು ನಮ್ಮ ಸೇನಾನಾಯಕರ ಹೆಸರನ್ನು ಹೇಳುತ್ತೇನೆ || ೭ ||

ತಾವು, ಭೀಷ್ಮರು, ಕರ್ಣ, ಯುದ್ಧದಲ್ಲಿ ಜಯಶಾಲಿ ಕೃಪಾಚಾರ್ಯರು, ಅಶ್ವತ್ಥಾಮ, ವಿಕರ್ಣ, ಸೋಮದತ್ತನ ಮಗ ಭೂರಿಶ್ರವ ರಾಜ, || ೮ ||

ನನಗೋಸ್ಕರ ಪ್ರಾಣದಾಸೆ ಬಿಟ್ಟವರು, ನಾನಾವಿಧ ಶಸ್ತ್ರಾಸ್ತ್ರಗಳಿಂದ ಯುದ್ಧಮಾಡುವವರು, ಇನ್ನೂ ಬೇರೆ ವೀರರಿದಾರೆ ಅವರೆಲ್ಲರೂ ಯುದ್ಧ ಕುಶಲರು. || ೯ ||

ಭೀಷ್ಮರಿಂದ ರಕ್ಷಿತವಾದ ನಮ್ಮ ಸೇನೆಯ ಬಲ ಅಪೂರ್ಣ, ಭೀಮನಿಂದ ರಕ್ಷಿತವಾದ ಪಾಂಡವಸೇನಾಬಲ ಪೂರ್ಣ, || ೧೦ ||

ಆದುದರಿಂದ ನೀವೆಲ್ಲರೂ ನಿಮ್ಮ ನಿಮ್ಮ ಸ್ಥಳಗಳಿಂದ ಭೀಷ್ಮಪಿತಾಮಹ ರನ್ನು ಎಲ್ಲ ವಿಧದಿಂದಲೂ ಕಾಪಾಡಬೇಕು || ೧೧ ||

---

**ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।**
**ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ || ೭ ||**

**ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।**
**ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವಚ || ೮ ||**

**ಅನ್ಯೇ ಚ ಬಹವಶ್ಶೂರಾ ಮದರ್ಥೇ ತ್ಯಕ್ತಜೀವಿತಾಃ ।**
**ನಾನಾಶಸ್ತ್ರಪ್ರಹರಣಾಸ್ಸರ್ವೇ ಯುದ್ಧವಿಶಾರದಾಃ || ೯ ||**

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।**
**ಪರ್ಯಾಪ್ತಂತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಂ || ೧೦ ||**

**ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।**
**ಭೀಷ್ಮಮೇವಾಭಿರಕ್ಷಂತು ಭವಂತಸ್ಸರ್ವ ಏವ ಹಿ || ೧೧ ||**

ಹೀಗೆ ದುರ್ಯೋಧನನೆಂದ ಆಗ ಅವನನ್ನು ಸಂತೋಷಗೊಳಿಸುತ್ತ ಕುರುವೃದ್ಧ, ಪ್ರತಾಪಿ ಆದ ಪಿತಾಮಹ ಭೀಷ್ಮ ಗಟ್ಟಿಯಾಗಿ ಸಿಂಹನಾದಮಾಡಿ ಶಂಖವನ್ನೂದಿದ. || ೧೨ ||

ಅದರೊಂದಿಗೆ ಶಂಖ, ನಗಾರಿ, ಡೋಲು, ಮೃದಂಗ, ರಣಭೇರಿ ಮೊದಲಾದ ವಾದ್ಯಗಳು ಒಂದೇ ಸಲ ಮೊಳಗಿದುವು ಆ ನಾದ ಭಯಂಕರವಾಗಿತ್ತು || ೧೩ ||

ಇಷ್ಟರಲ್ಲಿ ಬಿಳಿಯ ಕುದುರೆ ಕಟ್ಟಿದ ದೊಡ್ಡ ರಥದಲ್ಲಿ ಕುಳಿತ ಶ್ರೀಕೃಷ್ಣ-ಅರ್ಜುನರು ದಿವ್ಯಶಂಖಗಳನ್ನೂದಿದರು || ೧೪ ||

ಶ್ರೀಕೃಷ್ಣ ಪಾಂಚಜನ್ಯವನ್ನೂದಿದ ಧನಂಜಯ (ಅರ್ಜುನ) ದೇವದತ್ತವನ್ನೂ, ಭಯಾನಕ ಕರ್ಮಶಾಲಿ ಭೀಮ ಪೌಂಡ್ರವೆಂಬ ಮಹಾಶಂಖವನ್ನೂ ಊದಿದರು || ೧೫ ||

ಕುಂತೀಪುತ್ರ ಯುಧಿಷ್ಠಿರರಾಜ ಅನಂತವಿಜಯ ಶಂಖವನ್ನೂದಿದ ನಕುಲ ಸುಘೋಷವನ್ನೂ, ಸಹದೇವ ಮಣಿಪುಷ್ಪಕವನ್ನೂ ಊದಿದರು ||೧೬||

---

**ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ |**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ || ೧೨ ||**

**ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ |**
**ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ || ೧೩ ||**

**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ |**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ || ೧೪ ||**

**ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ |**
**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ || ೧೫ ||**

**ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ |**
**ನಕುಲಸ್ಸಹದೇವಶ್ಚ ಸುಘೋಷಮಣಿಪುಷ್ಪಕೌ || ೧೬ ||**

ಮಹಾಧನುರ್ಧರ ಕಾಶೀರಾಜ, ಮಹಾರಥಿ ಶಿಖಂಡಿ, ಧೃಷ್ಟದ್ಯುಮ್ನ, ವಿರಾಟರಾಜ, ಅಜೇಯನಾದ ಸಾತ್ಯಕಿ, || ೧೭ ||

ದ್ರುಪದರಾಜ, ದ್ರೌಪದಿಯ ಪುತ್ರರು, ಸುಭದ್ರಾಪುತ್ರ, ಮಹಾಬಾಹು ಆದ ಅಭಿಮನ್ಯು, ಎಲ್ಲರೂ—ತಮ್ಮ ತಮ್ಮ ಶಂಖಗಳನ್ನೂದಿದರು. || ೧೮ ||

ಭೂಮಿ–ಆಕಾಶಗಳನ್ನು ನಡುಗಿಸಿದ ಆ ಭಯಂಕರ ನಾದ ಕೌರವರ ಹೃದಯವನ್ನು ಭೇದಿಸಿತು. || ೧೯ ||

ಅರಸ! ಕಪಿಧ್ವಜದ ಅರ್ಜುನ ಸುಸಜ್ಜಿತರಾದ ಕೌರವರನ್ನು ನೋಡಿ, ಶಸ್ತ್ರಪ್ರಯೋಗವಾಡುವ ಮುನ್ನ ಬಿಲ್ಲನ್ನೇರಿಸಿ, ಹೃಷೀಕೇಶನೊಡನೆ ಹೀಗೆಂದ: ಅಚ್ಯುತ, ನನ್ನ ರಥವನ್ನು ಎರಡೂ ಸೈನ್ಯಗಳ ಮಧ್ಯೆ ನಿಲ್ಲಿಸು. || ೨೦–೨೧ ||

---

ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।
ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ || ೧೭ ||

ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।
ಸೌಭದ್ರಶ್ಚ ಮಹಾಬಾಹುಶ್ಶಂಖಾನ್ ದಧ್ಮುಃ ಪೃಥಕ್‌ಪೃಥಕ್ ||೧೮||

ಸಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।
ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ || ೧೯ ||

ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।
ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ || ೨೦ ||

ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।

ಅರ್ಜುನ ಉವಾಚ

ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ||೨೧||

ಈ ರಣೋದ್ಯೋಗದಲ್ಲಿ ನಾನು ಯಾರೊಡನೆ ಯುದ್ಧಮಾಡಬೇಕೋ, ಯುದ್ಧಮಾಡುವ ಇಚ್ಛೆಯಿಂದ ಯಾರು ಯಾರು ನಿಂತಿದಾರೋ ನೋಡುತ್ತೇನೆ || ೨೨ ||

ದುರ್ಬುದ್ಧಿಯ ದುರ್ಯೋಧನನಿಗೆ ಪ್ರಿಯವನ್ನು ಎಸಗಲು ಯೋಧರು ಯಾರು ಇಲ್ಲಿ ನೇರಿದಾರೋ ನೋಡೋಣ || ೨೩ ||

**ಸಂಜಯ :**

ದೊರೆಯೆ, ಶ್ರೀಕೃಷ್ಣನಿಗೆ ಅರ್ಜುನ ಹೀಗೆ ಹೇಳಿದಾಗ, ಅವನು ಭೀಷ್ಮದ್ರೋಣರ ಮುಂದೆ, ಸರ್ವರಾಜರ ಸಮಕ್ಷಮ ದಿವ್ಯರಥವನ್ನು ನಿಲ್ಲಿಸಿ— 'ಪಾರ್ಥ, ಇಲ್ಲಿ ನೇರಿರುವ ಕೌರವರನ್ನು ನೋಡು' ಎಂದ || ೨೪–೨೫ ||

ಆಗ ಅರ್ಜುನ ಎರಡೂ ಸೈನ್ಯದಲ್ಲಿ ತನ್ನ ಗುರುಜನ, ಪಿತಾಮಹ, ಆಚಾರ್ಯ, ಮಾತುಲ, ಮಾವಂದಿರು, ಸೋದರರು, ಮಕ್ಕಳು, ಮೊಮ್ಮಕ್ಕಳು, ಗೆಳೆಯರು ಇವರನ್ನು ನೋಡಿದ ಹೀಗೆ ನಿಂತ ಬಂಧುಗಳೆಲ್ಲರನ್ನೂ ನೋಡಿ ಖೇದಗೊಂಡು ದೀನನಾದ ಕುಂತೀಪುತ್ರ ಈ ರೀತಿ ಹೇಳತೊಡಗಿದ ||೨೬–೨೮||

---

**ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ |**
**ಕೈರ್ಮಯಾ ಸಹಯೋದ್ಧವ್ಯಮಸ್ಮಿನ್ ರಣಸಮುದ್ಯಮೇ || ೨೨ ||**

**ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇತ್ರ ಸಮಾಗತಾಃ |**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ || ೨೩ ||**

**ಸಂಜಯ ಉವಾಚ**

**ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ |**
**ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಂ ||೨೪||**

**ಭೀಷ್ಮದ್ರೋಣಪ್ರಮುಖತಸ್ಸರ್ವೇಷಾಂ ಚ ಮಹೀಕ್ಷಿತಾಮ್ |**
**ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ || ೨೫ ||**

**ಅರ್ಜುನ :**

ಕೃಷ್ಣ, ಯುದ್ಧಮಾಡಲು ಉತ್ಸುಕರಾಗಿ ಇಲ್ಲಿ ನಿಂತಿರುವ ಈ ಸ್ವಜನರನ್ನು, ಗೆಳೆಯರನ್ನು ನೋಡಿ ನನ್ನ ಅವಯವಗಳು ಸಡಿಲವಾಗುತ್ತಿವೆ ಮುಖ ಬಾಡುತ್ತಿದೆ ಮೈಯಲ್ಲಿ ನಡುಕ, ರೋಮಾಂಚ ಹುಟ್ಟುತ್ತಿದೆ ಕೈಯಿಂದ ಗಾಂಡೀವಧನುಸ್ಸು ಜಾರುತ್ತಿದೆ ಚರ್ಮ ಬಹಳ ತಪಿಸುತ್ತಿದೆ ನಾನು ನಿಲ್ಲಲಾರೆ ನನ್ನ ತಲೆ ತಿರುಗುತ್ತಿದೆ || ೨೯–೩೦ ||

ಇದಲ್ಲದೆ ಕೇಶವ, ನನಗೆ ದುರ್ನಿಮಿತ್ತಗಳು ಕಾಣುತ್ತಿವೆ. ಯುದ್ಧದಲ್ಲಿ ಸ್ವಜನರನ್ನು ಕೊಲ್ಲುವುದರಿಂದ ಯಾವ ಶ್ರೇಯಸ್ಸೂ ಇಲ್ಲ || ೩೧ ||

---

**ತತ್ರಾಪಶ್ಯತ್ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್ ।**
**ಆಚಾರ್ಯಾನ್ ಮಾತುಲಾನ್ ಭ್ರಾತೄನ್ ಪುತ್ರಾನ್ ಪೌತ್ರಾನ್ ಸಖೀಂಸ್ತಥಾ || ೨೬ ||**

**ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ ।**
**ತಾನ್ ಸಮೀಕ್ಷ್ಯ ಸ ಕೌಂತೇಯಸ್ಸರ್ವಾನ್ ಬಂಧೂನವಸ್ಥಿತಾನ್ || ೨೭ ||**

**ಕೃಪಯಾ ಪರಯಾಽಽವಿಷ್ಟೋ ವಿಷೀದನ್ನಿದಮಬ್ರವೀತ್ ।**

**ಅರ್ಜುನ ಉವಾಚ**

**ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಂ || ೨೮ ||**

**ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ।**
**ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ || ೨೯ ||**

**ಗಾಂಡೀವಂ ಸ್ರಂಸತೇ ಹಸ್ತಾತ್ ತ್ವಕ್ಚೈವ ಪರಿದಹ್ಯತೇ ।**
**ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ || ೩೦ ||**

**ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ।**
**ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ || ೩೧ ||**

ಅವರನ್ನು ಕೊಂದು ನಾನು ಗೆಲುವು ಪಡೆಯಲಾಶಿಸುವುದಿಲ್ಲ ನನಗೆ ರಾಜ್ಯವೂ ಬೇಡ, ಸುಖವೂ ಬೇಡ ರಾಜ್ಯ, ಭೋಗ, ಜೀವಿತ ಯಾವುದರಿಂದ ನನಗೇನು ಪ್ರಯೋಜನ ? || ೩೨ ||

ಯಾರಿಗೋಸ್ಕರ ರಾಜ್ಯ, ಭೋಗ, ಸುಖ ಬೇಕೋ ಆ ಆಚಾರ್ಯರು, ತಂದೆಗಳು, ಮಕ್ಕಳು, ತಾತಂದಿರು, ಮಾವಂದಿರು, ಶ್ವಶುರರು, ಮೊಮ್ಮಕ್ಕಳು, ಮೈದುನರು ಮೊದಲಾದ ಸಂಬಂಧಿಗಳು ಜೀವದ, ಧನದ ಆಸೆ ತೊರೆದು ಯುದ್ಧಕ್ಕಾಗಿ ನಿಂತಿದಾರೆ. || ೩೩–೩೪ ||

ಅವರು ನನ್ನನ್ನು ಕೊಂದರೂ ಚಿಂತೆಯಿಲ್ಲ, ಮಧುಸೂದನ. ನನಗೆ ಮೂರು ಲೋಕಗಳ ಸಾಮ್ರಾಜ್ಯ ಲಭಿಸಿದರೂ ನಾನು ಅವರನ್ನು ಕೊಲ್ಲಲು ಬಯಸೆ ಹೀಗಿರುವಾಗ ಒಂದು ತುಂಡು ಭೂಮಿಗಾಗಿ ಏಕೆ ಕೊಲ್ಲಲಿ ? ||೩೫||

ಜನಾರ್ದನ, ಧೃತರಾಷ್ಟ್ರನ ಮಕ್ಕಳನ್ನು ಕೊಂದು ನನಗಾಗುವ ಆನಂದ ಯಾವುದು ? ಈ ಆತತಾಯಿಗಳನ್ನು ಕೊಂದರೂ ನಮಗೆ ಪಾಪವೇ || ೩೬ ||

---

**ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ।**
**ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ||೩೨||**

**ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಸ್ಸುಖಾನಿ ಚ ।**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ || ೩೩ ||**

**ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ।**
**ಮಾತುಲಾಶ್ಶ್ವಶುರಾಃ ಪೌತ್ರಾಃ ಶ್ಯಾಲಾಸ್ಸಂಬಂಧಿನಸ್ತಥಾ || ೩೪ ||**

**ಏತಾನ್ ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ ।**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ || ೩೫ ||**

**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಸ್ಸ್ಯಾಜ್ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ || ೩೬ ||**

ಆದುದರಿಂದ, ಮಾಧವ, ನನ್ನ ಬಂಧುಗಳಾದ ಧೃತರಾಷ್ಟ್ರಪುತ್ರರನ್ನು ಕೊಲ್ಲುವುದು ನಮಗೆ ಉಚಿತವಲ್ಲ ಸ್ವಜನರನ್ನು ಕೊಂದು ನಮಗೆ ಬರುವ ಸುಖವೇನು ? || ೩೭ ||

ಲೋಭದಿಂದ ಮಲಿನಚಿತ್ತರಾದವರಿಗೆ ಕುಲಕ್ಷಯದಿಂದಾಗುವ ದೋಷವಾಗಲಿ, ಮಿತ್ರದ್ರೋಹದಿಂದಾಗುವ ಪಾತಕವಾಗಲಿ ಕಾಣಿಸದು ಆದರೆ ಜನಾರ್ದನ, ಕುಲಕ್ಷಯದ ಅನರ್ಥವನ್ನು ತಿಳಿದ ನಾವು ಈ ಪಾಪಕ್ಕೆ ಗುರಿಯಾಗಬಾರದೆಂದು ತಿಳಿಯುವುದಿಲ್ಲವೇಕೆ ? || ೩೮–೩೯ ||

ಕುಲನಾಶದಿಂದ ಸನಾತನ ಕುಲಧರ್ಮಗಳು ನಾಶವಾಗುತ್ತವೆ. ಧರ್ಮನಾಶವಾದರೆ ಅಧರ್ಮವು ಸಕಲ ಕುಲಗಳನ್ನೂ ಮುಳುಗಿಸುತ್ತದೆ || ೪೦ ||

ಕೃಷ್ಣ, ಅಧರ್ಮ ಹೆಚ್ಚಾದರೆ ಕುಲಸ್ತ್ರೀಯರು ಕೆಡುತ್ತಾರೆ. ಅವರು ಕೆಟ್ಟರೆ ವರ್ಣಸಂಕರವಾಗುತ್ತದೆ. || ೪೧ ||

---

**ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ ಸ್ವಬಾಂಧವಾನ್ |**
**ಸ್ವಜನಂ ಹಿ ಕಥಂ ಹತ್ವಾ ಸುಖಿನಸ್ಸ್ಯಾಮ ಮಾಧವ || ೩೭ ||**

**ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ |**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ || ೩೮ ||**

**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ |**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ || ೩೯ ||**

**ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಸ್ಸನಾತನಾಃ |**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ || ೪೦ ||**

**ಅಧರ್ಮಾಭಿಭವಾತ್ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ |**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ || ೪೧ ||**

ಇಂತಹ ಸಾಂಕರ್ಯದಿಂದ ಕುಲನಾಶಕರಿಗೂ ಅವರ ಕುಲಗಳಿಗೂ ನರಕವಾಸ ಅವರ ಪಿಂಡೋದಕ ಕ್ರಿಯೆಗಳಿಲ್ಲದೆ ಅವರ ಪಿತೃಗಳಿಗೆ ಅಧೋಗತಿಯುಂಟಾಗುತ್ತದೆ. || ೪೨ ||

ಕುಲಘಾತಕರ ಈ ವರ್ಣಸಂಕರಕಾರಕ ದೋಷಗಳಿಂದ ಸನಾತನ ಜಾತಿಧರ್ಮಗಳೂ ಕುಲಧರ್ಮಗಳೂ ನಾಶಹೊಂದುತ್ತವೆ || ೪೩ ||

ಜನಾರ್ದನ, ಕುಲಧರ್ಮ ನಾಶವಾದ ಮನುಷ್ಯ ಅವಶ್ಯವಾಗಿ ನರಕದಲ್ಲಿ ವಾಸಿಸಬೇಕೆಂದು ನಾವು ಕೇಳಿದೇವೆ || ೪೪ ||

ರಾಜ್ಯಸುಖದ ಲೋಭದಿಂದ ಸ್ವಜನರ ಹತ್ಯೆಮಾಡಲು ತೊಡಗಿ ನಾವು ಮಹಾಪಾಪಕೃತ್ಯ ಮಾಡಲು ಸನ್ನದ್ಧರಾಗಿದೇವೆ ಎಷ್ಟು ದುಃಖಕರ ವಿಚಾರ ಇದು ! || ೪೫ ||

ಶಸ್ತ್ರಹೀನನಾದ, ಪ್ರತೀಕಾರಮಾಡದ ನನ್ನನ್ನು ಶಸ್ತ್ರಧಾರಿಗಳಾದ ಧೃತರಾಷ್ಟ್ರಪುತ್ರರು ಯುದ್ಧದಲ್ಲಿ ಸಂಹಾರಮಾಡಲಿ. ಆ ಸಾವು ನನಗೆ ಅತ್ಯಂತ ಕಲ್ಯಾಣಕರವಾದೀತು. || ೪೬ ||

---

**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತಂತಿ ಪಿತರೋಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ || ೪೨ ||**

**ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।**
**ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ || ೪೩ ||**

**ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ || ೪೪ ||**

**ಅಹೋಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್ ।**
**ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ || ೪೫ ||**

**ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ || ೪೬ ||**

**ಸಂಜಯ :**

ಹೀಗೆ ಹೇಳಿ ರಣರಂಗದಲ್ಲಿ ಶೋಕದಿಂದ ವ್ಯಾಕುಲಚಿತ್ತನಾದ ಅರ್ಜುನ ಬಿಲ್ಲುಬಾಣಗಳನ್ನು ಬಿಟ್ಟುಕೊಟ್ಟು, ರಥದ ಹಿಂಭಾಗದಲ್ಲಿ ಕುಳಿತುಬಿಟ್ಟ || ೪೭ ||

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ಅರ್ಜುನವಿಷಾದಯೋಗ ಎಂಬ ಮೊದಲನೆಯ ಅಧ್ಯಾಯ

---

---

**ಸಂಜಯ ಉವಾಚ**

**ಏವಮುಕ್ತ್ವಾಽರ್ಜುನಸ್ಸಂಖ್ಯೇ ರಥೋಪಸ್ಥ ಉಪಾವಿಶತ್ ।**
**ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ || ೪೭ ||**

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ಅರ್ಜುನವಿಷಾದಯೋಗೋ ನಾಮ ಪ್ರಥಮೋಽಧ್ಯಾಯಃ ||**

---

## ಅಧ್ಯಾಯ ೨

### ಸಾಂಖ್ಯಯೋಗ

[ಮೋಹವಶನಾಗಿ ಮನುಷ್ಯ ಅಧರ್ಮವನ್ನೇ ಧರ್ಮವೆಂದು ಭಾವಿಸುತ್ತಾನೆ. ಮೋಹವಶನಾದ್ದರಿಂದ ಅರ್ಜುನ ತನ್ನದು, ಪರರದು ಎಂಬ ಭೇದ ಮಾಡಿದ. ಈ ಭೇದ ಸುಳ್ಳು, ಮಿಥ್ಯೆ ಎಂದು ತೋರಿಸಲು ಶ್ರೀಕೃಷ್ಣ ದೇಹ–ಆತ್ಮಗಳ ಭಿನ್ನತೆಯನ್ನು ತಿಳಿಸುತ್ತಾನೆ. ದೇಹ ಅನಿತ್ಯ, ಪೃಥಕ್; ಆತ್ಮ ನಿತ್ಯ, ಏಕ—ಎಂಬುದನ್ನು ವಿವರಿಸುತ್ತಾನೆ. ಮನುಷ್ಯನಿಗೆ ಕೇವಲ ಪುರುಷಾರ್ಥಕ್ಕೆ ಮಾತ್ರ ಅಧಿಕಾರ, ಪರಿಣಾಮಕ್ಕಲ್ಲ. ಆದುದರಿಂದ ಅವನು ತನ್ನ ಕರ್ತವ್ಯವನ್ನು ನಿಶ್ಚಯಿಸಿಕೊಂಡು ನಿಶ್ಚಿಂತೆಯಿಂದ ಅದರಲ್ಲಿ ತೊಡಗಿರಬೇಕು. ಇಂಥ ಪರಾಯಣತೆಯಿಂದ ಅವನು ಮೋಕ್ಷವನ್ನು ಹೊಂದಬಲ್ಲ.]

**ಸಂಜಯ ಹೇಳುತ್ತಾನೆ :**

ಇಂತು ಕರುಣಾವಶ, ದೀನ ಆದ, ಕಂಬನಿ ತುಂಬಿದ, ವ್ಯಾಕುಲನೇತ್ರದ, ದುಃಖಿ ಅರ್ಜುನನಿಗೆ ಮಧುಸೂದನ ಹೀಗೆ ಹೇಳಿದ. ॥ ೧ ॥

---

## ಅಥ ದ್ವಿತೀಯೋಽಧ್ಯಾಯಃ

### ಸಂಜಯ ಉವಾಚ

**ತಂ ತಥಾ ಕೃಪಯಾಽಽವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।**
**ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ ॥ ೧ ॥**

**ಶ್ರೀಕೃಷ್ಣ**

ಅರ್ಜುನ, ಶ್ರೇಷ್ಠಪುರುಷರಿಗೆ ಅನುಚಿತವಾದ, ಸ್ವರ್ಗದಿಂದ ವಿಮುಖವಾದ, ಅಪಕೀರ್ತಿ ತರುವ ಈ ಮೋಹ ಇಂಥ ವಿಷಮ ಸಮಯದಲ್ಲಿ ಹೇಗೆ ಹುಟ್ಟಿತು ? ॥ ೨ ॥

ಪಾರ್ಥ, ಷಂಡನಾಗಬೇಡ ಅದು ನಿನಗೆ ಶೋಭಿಸದು ಹೃದಯದ ಪಾಮರ ನಿರ್ಬಲತೆಯನ್ನು ತ್ಯಜಿಸಿ, ಪರಂತಪ, ಏಳು ॥ ೩ ॥

**ಅರ್ಜುನ :**

ಮಧುಸೂದನ ! ಭೀಷ್ಮ-ದ್ರೋಣರನ್ನು ರಣಭೂಮಿಯಲ್ಲಿ ಬಾಣಗಳಿಂದ ನಾನು ಹೇಗೆ ಹೊಡೆಯಲಿ ? ॥ ೪ ॥

ಮಹಾನುಭಾವರಾದ ಗುರುಜನರನ್ನು ಸಂಹಾರ ಮಾಡುವುದಕ್ಕಿಂತ ಭಿಕ್ಷಾನ್ನ ತಿನ್ನುವುದು ಹೆಚ್ಚು ಶ್ರೇಯಸ್ಕರ ಏಕೆಂದರೆ, ಗುರುಜನರನ್ನು ಕೊಂದು ಅವರ ರಕ್ತದಿಂದ ತೊಯ್ದ ಅರ್ಥ, ಕಾಮಗಳ ಭೋಗವನ್ನೆ ಭೋಗಿಸ ಬೇಕಾಗುತ್ತದೆ ॥ ೫ ॥

---

**ಶ್ರೀ ಭಗವಾನುವಾಚ**

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥ ೨ ॥**

**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥ ೩ ॥**

**ಅರ್ಜುನ ಉವಾಚ**

**ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥ ೪ ॥**

**ಗುರೂನಹತ್ವಾ ಹಿ ಮಹಾನುಭಾವಾನ್**
**ಶ್ರೇಯೋ ಭೋಕ್ತುಂ ಭೈಕ್ಷಮಪೀಹ ಲೋಕೇ ।**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ**
**ಭುಂಜೀಯ ಭೋಗಾನ್ ರುಧಿರಪ್ರದಿಗ್ಧಾನ್ ॥ ೫ ॥**

ನಾವು ಅವರನ್ನು ಗೆಲ್ಲಬೇಕೋ, ಅವರು ನಮ್ಮನ್ನು ಗೆಲ್ಲಬೇಕೋ, ಎರಡರಲ್ಲಿ ಯಾವುದು ಒಳ್ಳೆಯದೋ ನಾನರಿಯೆ. ಯಾರನ್ನು ಕೊಂದು ನಾನು ಬದುಕಲು ಇಚ್ಛಿಸೆನೋ ಆ ಧೃತರಾಷ್ಟ್ರನ ಪುತ್ರರೇ ಇಲ್ಲಿ ಎದುರಿಗೆ ನಿಂತಿದಾರೆ || ೬ ||

ಹೇಡಿತನದಿಂದ ನನ್ನ (ಸ್ವಾಭಾವಿಕ) ವೃತ್ತಿ ಅಳಿದಿದೆ. ಕರ್ತವ್ಯವಿಚಾರ ದಲ್ಲಿ ನಾನು ಮೂಢನಾಗಿದೇನೆ ಆದುದರಿಂದ ನನಗೆ ಯಾವುದು ಹಿತವೋ ನಿಶ್ಚಯಿಸಿ ಹೇಳು , ನಿನ್ನನ್ನು ಪ್ರಾರ್ಥಿಸುತ್ತೇನೆ ನಾನು ನಿನ್ನ ಶಿಷ್ಯ, ನಿನಗೆ ಶರಣಾಗತ, ನನಗೆ ದಾರಿ ತೋರು || ೭ ||

ಈ ಲೋಕದಲ್ಲಿ ಧನಧಾನ್ಯಸಂಪನ್ನವಾದ ನಿಷ್ಕಂಟಕ ರಾಜ್ಯ ಸಿಗಲಿ, ಇಂದ್ರಾಸನ ಸಿಗಲಿ, ಇಂದ್ರಿಯಗಳನ್ನು ಶೋಷಿಸುವ ನನ್ನ ಈ ದುಃಖವನ್ನು ನಿವಾರಿಸುವ ಉಪಾಯವೇ ಅದರಲ್ಲಿ ನನಗೆ ಕಾಣುತ್ತಿಲ್ಲ. || ೮ ||

---

ನ ಚೈತದ್ವಿದ್ಮಃ ಕತರನ್ನೋ ಗರೀಯೋ
ಯದ್ವಾ ಜಯೇಮ ಯದಿ ವಾ ನೋ ಜಯೇಯುಃ |
ಯಾನೇವ ಹತ್ವಾ ನ ಜಿಜೀವಿಷಾಮ-
ಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ || ೬ ||

ಕಾರ್ಪಣ್ಯದೋಷೋಪಹತಸ್ವಭಾವಃ
ಪೃಚ್ಛಾಮಿ ತ್ವಾಂ ಧರ್ಮಸಂಮೂಢಚೇತಾಃ |
ಯಚ್ಛ್ರೇಯಸ್ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ
ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ || ೭ ||

ನ ಹಿ ಪ್ರಪಶ್ಯಾಮಿ ಮಮಾಪನುದ್ಯಾ-
ದ್ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಮ್ |
ಅವಾಪ್ಯ ಭೂಮಾವಸಪತ್ನಮೃದ್ಧಂ
ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ || ೮ ||

**ಸಂಜಯ :**

ರಾಜ, ಗುಡಾಕೇಶ ಅರ್ಜುನ ಹೃಷೀಕೇಶ ಶ್ರೀಕೃಷ್ಣನಿಗೆ ಹೀಗೆ ಹೇಳಿ, 'ಯುದ್ಧಮಾಡೆ' ಎಂದು ಸುಮ್ಮನಾದ ॥ ೯ ॥

ಆಗ ಎರಡು ಸೈನ್ಯಗಳ ಮಧ್ಯೆ ಉದಾಸೀನನಾಗಿ ಕುಳಿತ ಅರ್ಜುನ ನೊಡನೆ ಮುಗುಳುನಗೆ ನಗುತ್ತ ಹೃಷೀಕೇಶ ಹೀಗೆಂದ ॥ ೧೦ ॥

**ಶ್ರೀಕೃಷ್ಣ :**

ಶೋಕಿಸಲು ಯೋಗ್ಯವಲ್ಲದುದಕ್ಕಾಗಿ ನೀನು ಶೋಕಿಸುತ್ತೀ ಪಾಂಡಿತ್ಯದ ಮಾತು ಆಡುತ್ತಿದ್ದೀ ಆದರೆ ಪಂಡಿತರು ಸತ್ತವರ ಅಥವಾ ಬದುಕಿರುವವರ ವಿಚಾರವಾಗಿ ಶೋಕಿಸರು. ॥ ೧೧ ॥

ಏಕೆಂದರೆ ನಿಜವಾಗಿ ನೋಡಿದರೆ, ನಾನೂ ನೀನೂ ಈ ರಾಜರೂ ಹಿಂದೆ ಯಾವಾಗಲೂ ಇರದೆ ಇದ್ದುದಿಲ್ಲ, ಮುಂದೆಯೂ ಇರದೆ ಹೋಗುವುದಿಲ್ಲ ॥೧೨॥

---

**ಸಂಜಯ ಉವಾಚ**

**ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ ।**
**ನಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವಹ ॥ ೯ ॥**

**ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।**
**ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥ ೧೦ ॥**

**ಶ್ರೀ ಭಗವಾನುವಾಚ**

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥ ೧೧ ॥**

**ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಸ್ಸರ್ವೇ ವಯಮತಃಪರಮ್ ॥ ೧೨ ॥**

ದೇಹಧಾರಿಯ ದೇಹಕ್ಕೆ ಕೌಮಾರ, ಯೌವನ, ಮುಪ್ಪು ಹೇಗೆ ಬರುತ್ತವೆಯೋ ಹಾಗೆಯೆ ಬೇರೆ ದೇಹವೂ ಬರುತ್ತದೆ ಅದರ ಬಗ್ಗೆ ಜ್ಞಾನಿಗಳಿಗೆ ಮೋಹವುಂಟಾಗದು || ೧೩ ||

ಕುಂತೀಪುತ್ರ, ಇಂದ್ರಿಯಗಳ ಸಂಬಂಧದಿಂದ ಶೀತೋಷ್ಣ, ಸುಖದುಃಖ ಉಂಟಾಗುತ್ತದೆ ಅವು ಅನಿತ್ಯ ಬರುತ್ತವೆ, ಹೋಗುತ್ತವೆ ಅವನ್ನು ನೀನು ಸಹನಮಾಡಿಕೊ || ೧೪ ||

ಪುರುಷಶ್ರೇಷ್ಠ, ಸುಖದುಃಖಗಳಲ್ಲಿ ಸಮವಾಗಿರುವ ಜ್ಞಾನಿಯಾದ ಪುರುಷನಿಗೆ ಈ ವಿಷಯ ವ್ಯಾಕುಲವನ್ನುಂಟುಮಾಡದು. ಅವನು ಮೋಕ್ಷಕ್ಕೆ ಯೋಗ್ಯನಾಗುತ್ತಾನೆ || ೧೫ ||

ಇಲ್ಲದ್ದು (ಅಸತ್) ಇರಲಾರದು, ಇರುವುದು (ಸತ್) ನಾಶವಾಗದು ಜ್ಞಾನಿಗಳು ಇವೆರಡರ ನಿರ್ಣಯ ಬಲ್ಲರು || ೧೬ ||

ಯಾವುದರಿಂದ ಜಗತ್ತು ವ್ಯಾಪ್ತವಾಗಿದೆಯೊ ಅದು ಅವಿನಾಶಿ, ತಿಳಿದುಕೊ. ಆ ಅವ್ಯಯ(ತತ್ತ್ವ)ವನ್ನು ನಾಶಮಾಡುವ ಸಾಮರ್ಥ್ಯ ಯಾರಲ್ಲಿಯೂ ಇಲ್ಲ || ೧೭ ||

---

**ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ |**
**ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ || ೧೩ ||**

**ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ |**
**ಆಗಮಾಪಾಯಿನೋಽನಿತ್ಯಾಸ್ತಾಂ ತಿತಿಕ್ಷಸ್ವ ಭಾರತ || ೧೪ ||**

**ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ |**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ || ೧೫ ||**

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ |**
**ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ || ೧೬ ||**

**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ |**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ || ೧೭ ||**

ದೇಹಿ ನಿತ್ಯ, ಅಪರಿಮಿತ, ಅವಿನಾಶಿ ಅವನ ಈ ದೇಹವೊ ನಾಶವಂತ, ಅನಿತ್ಯ ಎಂದು ಹೇಳಿದಾರೆ ಆದುದರಿಂದ, ಭಾರತ, ನೀನು ಯುದ್ಧಮಾಡು. || ೧೮ ||

ಇದನ್ನು ಕೊಲ್ಲುತ್ತೇನೆಂದು ತಿಳಿದವನೂ ಇದು ಹತವಾಯಿತೆಂದು ತಿಳಿದವನೂ—ಇಬ್ಬರೂ ಏನನ್ನೂ ಅರಿಯದವರು ಈ ಆತ್ಮವನ್ನು ಯಾರೂ ಸಂಹರಿಸಲಾರರು, ಇದನ್ನು ಸಂಹರಿಸಲು ಆಗುವುದೂ ಇಲ್ಲ || ೧೯ ||

ಇದಕ್ಕೆ ಹುಟ್ಟೊ ಇಲ್ಲ, ಸಾವೂ ಇಲ್ಲ ಹಿಂದೆ ಇತ್ತು, ಮುಂದೆ ಇರುವುದಿಲ್ಲ ಎಂತಲೂ ಇಲ್ಲ ಆದುದರಿಂದ ಇದು ಹುಟ್ಟಿಲ್ಲದುದು, ನಿತ್ಯ, ಶಾಶ್ವತ, ಪುರಾತನ ಶರೀರ ನಾಶವಾದರೂ ಇದು ನಾಶವಾಗದು || ೨೦ ||

ಪಾರ್ಥ! ಆತ್ಮ ಅವಿನಾಶಿ, ನಿತ್ಯ, ಅಜನ್ಮ, ಅವ್ಯಯ ಎಂದು ತಿಳಿದವನು ಯಾರನ್ನು ಕೊಂದಾನು, ಹೇಗೆ ಕೊಂದಾನು? ಯಾರಿಂದ ಕೊಲೆ ಆದಾನು, ಹೇಗೆ ಕೊಲೆಯಾದಾನು? || ೨೧ ||

---

**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ |**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ || ೧೮ ||**

**ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್ |**
**ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ || ೧೯ ||**

**ನ ಜಾಯತೇ ಮ್ರಿಯತೇ ವಾ ಕದಾಚಿ-**
**ನ್ನಾಯಂ ಭೂತ್ವಾ ಭವಿತಾವಾ ನ ಭೂಯಃ |**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ || ೨೦ ||**

**ವೇದಾಽವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ |**
**ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಮ್ || ೨೧ ||**

ಮನುಷ್ಯ ಹಳೇ ಬಟ್ಟೆ ಬಿಟ್ಟು ಹೊಸ ಬಟ್ಟೆ ಧರಿಸುವಂತೆ ದೇಹಧಾರಿ ಕೂಡ ಜೀರ್ಣ–ಶೀರ್ಣ ದೇಹವನ್ನು ಬಿಟ್ಟು ಬೇರೆ ಹೊಸ ದೇಹವನ್ನು ಪಡೆಯುತ್ತಾನೆ. || ೨೨ ||

ಈ ಆತ್ಮನನ್ನು ಶಸ್ತ್ರ ಕತ್ತರಿಸದು, ಬೆಂಕಿ ಸುಡದು. ನೀರು ತೋಯಿಸಲಾರದು, ಗಾಳಿ ಒಣಗಿಸಲಾರದು. || ೨೩ ||

ಕತ್ತರಿಸಲಾಗದ, ಸುಡಲಾಗದ, ತೋಯಿಸಲಾಗದ, ಒಣಗಿಸಲಾಗದ ಆತ್ಮ ನಿತ್ಯ, ಸರ್ವಗತ, ಸ್ಥಿರ, ಅಚಲ, ಸನಾತನ || ೨೪ ||

ಆ ಆತ್ಮ ಇಂದ್ರಿಯಗಳಿಗೂ ಮನಸ್ಸಿಗೂ ತಿಳಿಯಲಾರದುದು, ವಿಕಾರ ರಹಿತ. ಆದುದರಿಂದ ಇದನ್ನು ತಿಳಿದೂ ನೀನು ಶೋಕಿಸುವುದು ಉಚಿತವಲ್ಲ. || ೨೫ ||

ಅಥವಾ ಆತ್ಮ ನಿತ್ಯವೂ ಹುಟ್ಟುತ್ತದೆ, ಸಾಯುತ್ತದೆ ಎಂದು ತಿಳಿದಿದ್ದೂ ನೀನು ಶೋಕಿಸುವುದು ಉಚಿತವಲ್ಲ || ೨೬ ||

---

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾನಿ**
**ಅನ್ಯಾನಿ ಸಂಯಾತಿ ನವಾನಿ ದೇಹೀ || ೨೨ ||**

**ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ || ೨೩ ||**

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।**
**ನಿತ್ಯಸ್ಸರ್ವಗತಸ್ಸ್ಥಾಣುರಚಲೋಽಯಂ ಸನಾತನಃ || ೨೪ ||**

**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ ।**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ || ೨೫ ||**

**ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ।**
**ತಥಾಽಪಿ ತ್ವಂ ಮಹಾಬಾಹೋ ನೈವಂ ಶೋಚಿತುಮರ್ಹಸಿ || ೨೬ ||**

ಹುಟ್ಟಿದವನಿಗೆ ಸಾವೂ, ಸತ್ತವನಿಗೆ ಹುಟ್ಟೂ ಅನಿವಾರ್ಯ ಈ ಅನಿವಾರ್ಯವಾದುದನ್ನು ಕುರಿತು ಶೋಕಿಸುವುದು ಉಚಿತವಲ್ಲ || ೨೭ ||

ಭಾರತ, ಭೂತಮಾತ್ರದ ಹುಟ್ಟಿನ ಪೂರ್ವದ, ಸತ್ತಮೇಲಿನ ಸ್ಥಿತಿ ಕಾಣದು , ಅದು ಅವ್ಯಕ್ತ. ಮಧ್ಯದ ಸ್ಥಿತಿ ಮಾತ್ರ ವ್ಯಕ್ತ ಇದರಲ್ಲಿ ಚಿಂತೆಗೇನು ಕಾರಣ ? || ೨೮ ||

ಟಿಪ್ಪಣಿ—ಭೂತ ಎಂದರೆ ಸ್ಥಾವರ_ಜಂಗಮ ಸೃಷ್ಟಿ.

ಕೆಲವರು ಆತ್ಮವನ್ನು ಅದ್ಭುತ ವಸ್ತುವೆಂದು ನೋಡುತ್ತಾರೆ, ಕೆಲವರು ಆಶ್ಚರ್ಯಕರವಾಗಿ ವರ್ಣಿಸುತ್ತಾರೆ, ಕೆಲವರು ಆ ಆಶ್ಚರ್ಯಕರ ವರ್ಣನೆ ಕೇಳುತ್ತಾರೆ ಇಷ್ಟಾದರೂ ಆತ್ಮವನ್ನು ಯಾರೂ ಅರಿಯರು || ೨೯ ||

ಭಾರತ, ಎಲ್ಲರ ದೇಹದಲ್ಲಿಯೂ ಇರುವ ಈ ದೇಹಧಾರಿ ಆತ್ಮ ಸರ್ವದಾ ಅವಧ್ಯ ಆದುದರಿಂದ ನೀನು ಭೂತಮಾತ್ರದ ಬಗ್ಗೆ ಶೋಕಿಸುವುದು ಯೋಗ್ಯವಲ್ಲ. || ೩೦ ||

---

**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ || ೨೭ ||**

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ || ೨೮ ||**

**ಆಶ್ಚರ್ಯವತ್ಪಶ್ಯತಿ ಕಶ್ಚಿದೇನ-**
**ಮಾಶ್ಚರ್ಯವದ್ವದತಿ ತಥೈವ ಚಾನ್ಯಃ ।**
**ಆಶ್ಚರ್ಯವಚ್ಚೈನಮನ್ಯಃ ಶೃಣೋತಿ**
**ಶ್ರುತ್ವಾಽಪ್ಯೇನಂ ವೇದ ನ ಚೈವ ಕಶ್ಚಿತ್ || ೨೯ ||**

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ || ೩೦ ||**

ಟಿಪ್ಪಣಿ—ಇಲ್ಲಿಯವರೆಗೆ ಶ್ರೀಕೃಷ್ಣ ಬುದ್ಧಿಪ್ರಯೋಗದ ಮೂಲಕ ಆತ್ಮದ ನಿತ್ಯತೆ, ದೇಹದ ಅನಿತ್ಯತೆಗಳನ್ನು ತೋರಿಸಿದ ಏಕೆಂದರೆ, ಯಾವ ಸ್ಥಿತಿಯಲ್ಲಾದರೂ ದೇಹವನ್ನು ನಾಶಗೊಳಿಸುವುದು ಉಚಿತವೆಂದರೆ, ಆಗ ಸ್ವಜನ–ಪರಜನವೆಂಬ ಭೇದವೆಣಿಸಿ, ಕೌರವರು ಒಡಹುಟ್ಟಿದವರು, ಅವರನ್ನು ಹೇಗೆ ಕೊಲ್ಲಲಿ ಎಂಬುದು ಮೋಹಜನ್ಯ ವಿಚಾರ ಈಗ ಅರ್ಜುನನಿಗೆ ಕ್ಷತ್ರಿಯ ಧರ್ಮವನ್ನು ಹೇಳುತ್ತಾನೆ

ಸ್ವಧರ್ಮವನ್ನರಿತ ನೀನು ಹಿಂದೆ ಮುಂದೆ ನೋಡುವುದು ಸರಿಯಲ್ಲ ಏಕೆಂದರೆ ಕ್ಷತ್ರಿಯನಿಗೆ ಧರ್ಮಯುದ್ಧಕ್ಕಿಂತಲೂ ಹೆಚ್ಚು ಶ್ರೇಯಸ್ಕರವಾದುದು ಮತ್ತೊಂದಿಲ್ಲ || ೩೧ ||

ಪಾರ್ಥ! ತಾನಾಗಿಯೇ ಒದಗಿದೆ ಈ ಯುದ್ಧ. ಸ್ವರ್ಗದ ಬಾಗಿಲನ್ನೇ ತೆರೆವ ಯುದ್ಧ ಬರುವುದು ಭಾಗ್ಯಶಾಲಿ ಕ್ಷತ್ರಿಯರ ಪಾಲಿಗೆ ಮಾತ್ರವೇ || ೩೨ ||

ಧರ್ಮಪ್ರಾಪ್ತವಾದ ಈ ಯುದ್ಧವನ್ನು ನೀನು ಮಾಡದಿದ್ದರೆ ಸ್ವಧರ್ಮ, ಕೀರ್ತಿಗಳನ್ನು ನಾಶಮಾಡಿಕೊಂಡು, ಪಾಪಭಾಗಿಯಾಗುತ್ತೀಯೆ || ೩೩ ||

ಜನರೆಲ್ಲರೂ ಯಾವಾಗಲೂ ನಿನ್ನನ್ನು ನಿಂದಿಸುತ್ತಾರೆ ಸಂಭಾವಿತನಿಗೆ ಅಪಕೀರ್ತಿ ಮರಣಕ್ಕಿಂತ ಹೆಚ್ಚು ಕೆಟ್ಟದು || ೩೪ ||

---

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ || ೩೧ ||**

**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್ || ೩೨ ||**

**ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**
**ತತಸ್ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ || ೩೩ ||**

**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಮ್ ।**
**ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ || ೩೪ ||**

ಯಾವ ಮಹಾರಥಿಗಳು ನಿನ್ನನ್ನು ಈಗ ಮನ್ನಿಸುತ್ತಿದಾರೋ ಅವರೇ ನಿನ್ನನ್ನು, ನೀನು ರಣದಿಂದ ಹೆದರಿ ಓಡಿಹೋದೆ, ತುಚ್ಛ ಎಂದಾರು || ೩೫ ||

ನಿನ್ನ ಶತ್ರುಗಳು ನಿನ್ನ ಬಲವನ್ನು ನಿಂದಿಸುವಾಗ ಆಡಬಾರದ ಮಾತನ್ನೆಲ್ಲ ಆಡಿಯಾರು ಇದಕ್ಕಿಂತಲೂ ಹೆಚ್ಚು ದುಃಖದಾಯಕವೇನಿದೆ? || ೩೬ ||

ಹತನಾದರೆ ಸ್ವರ್ಗ, ಗೆದ್ದರೆ ಪೃಥ್ವಿಯ ಉಪಭೋಗ ಆದುದರಿಂದ ಕೌಂತೇಯ, ಯುದ್ಧ ಮಾಡಲು ನಿಶ್ಚಯಿಸಿ ನಿಲ್ಲು || ೩೭ ||

ಟಿಪ್ಪಣಿ—ಹೀಗೆ ಭಗವಂತ ಆತ್ಮದ ನಿತ್ಯತೆ, ದೇಹದ ಅನಿತ್ಯತೆಗಳನ್ನು ತೋರಿಸಿದ. ಆಮೇಲೆ ಸಹಜಪ್ರಾಪ್ತವಾದ ಯುದ್ಧ ಮಾಡುವುದರಲ್ಲಿ ಕ್ಷತ್ರಿಯರಿಗೆ ಧರ್ಮಬಾಧೆಯಿಲ್ಲ ಎಂಬುದನ್ನೂ ತೋರಿಸಿದ ಹೀಗೆ ೩೧ನೆ ಶ್ಲೋಕದಿಂದ ಭಗವಂತ ಪರಮಾರ್ಥದೊಂದಿಗೆ ಉಪಯುಕ್ತತೆಯನ್ನೂ ಜೋಡಿಸಿದಾನೆ ಇಷ್ಟು ಹೇಳಿ ಭಗವಂತ ಮುಂದೆ ಒಂದು ಶ್ಲೋಕದಲ್ಲಿ ಗೀತೆಯ ಮುಖ್ಯ ಉಪದೇಶವನ್ನು ತುಂಬಿದಾನೆ.

ಸುಖ–ದುಃಖ, ಲಾಭ–ಹಾನಿ, ಜಯ–ಅಪಜಯಗಳನ್ನು ಸಮಾನವಾಗಿ ಭಾವಿಸಿ ಯುದ್ಧ ಮಾಡಲು ಸಿದ್ಧನಾಗು ಹಾಗೆ ಮಾಡುವುದರಿಂದ ನಿನಗೆ ಪಾಪ ತಗಲದು || ೩೮ ||

---

**ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್**
**|| ೩೫ ||**

**ಅವಾಚ್ಯವಾದಾಂಶ್ಚ ಬಹೂನ್ ವದಿಷ್ಯಂತಿ ತವಾಹಿತಾಃ ।**
**ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ || ೩೬ ||**

**ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ ।**
**ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ || ೩೭ ||**

**ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ || ೩೮ ||**

ನಾನು ನಿನಗೆ (ತರ್ಕವಾದ) ಸಾಂಖ್ಯಸಿದ್ಧಾಂತಕ್ಕೆ ಅನುಸಾರವಾಗಿ ನಿನ್ನ ಕರ್ತವ್ಯವನ್ನು ತಿಳಿಸಿದೆ ಇನ್ನು ಯೋಗವಾದಾನುಸಾರವಾಗಿ ತಿಳಿಸುತ್ತೇನೆ, ಕೇಳು. ಇದರ ಆಶ್ರಯ ಪಡೆದರೆ ನೀನು ಕರ್ಮಬಂಧನಗಳನ್ನು ಹರಿದೊಗೆಯ ಬಲ್ಲೆ || ೩೯ ||

ಇದರಲ್ಲಿ ಆರಂಭಕ್ಕೆ ನಾಶವಿಲ್ಲ, ವಿಪರೀತ ಪರಿಣಾಮವೂ ಆಗುವುದಿಲ್ಲ ಈ ಧರ್ಮವನ್ನು ಸ್ವಲ್ಪಮಟ್ಟಿಗೆ ಆಚರಿಸಿದರೂ ಕೂಡ ಮಹಾಭಯದಿಂದ ಕಾಪಾಡುತ್ತದೆ || ೪೦ ||

ಕುರುನಂದನ, ಯೋಗವಾದಿಗಳ ನಿಶ್ಚಯಾತ್ಮಕ ಬುದ್ಧಿ ಏಕರೂಪ ವಾಗಿರುತ್ತದೆ ಅನಿಶ್ಚಯವಂತರ ಬುದ್ಧಿಗಳಿಗೆ ಬಹುಶಾಖೆಗಳು ಅವಕ್ಕೆ ಕೊನೆಯಿಲ್ಲ || ೪೧ ||

ಟಿಪ್ಪಣಿ—ಬುದ್ಧಿ ಒಂದು ತೆರನಾಗಿರದೆ, ಅನೇಕ ರೂಪ ತಾಳಿದಾಗ ಅದು ಬುದ್ಧಿ ಆಗದೆ ವಾಸನೆಯ ರೂಪ ತಳೆಯುತ್ತದೆ ಆದುದರಿಂದ ಬುದ್ಧಿಗಳು ಎಂದರೆ ವಾಸನೆಗಳು ಎಂದರ್ಥ

ಅಜ್ಞಾನಿಗಳಾದ ಪಂಡಿತರೂ, 'ಇದರ ವಿನಾ ಮತ್ತೇನೂ ಇಲ್ಲ' ಎನ್ನು ವವರೂ, ಕಾಮಾತ್ಮರೂ, ಸ್ವರ್ಗವೇ ಶ್ರೇಷ್ಠವೆಂದು ಭಾವಿಸುವವರೂ, ಜನನ–

---

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು |**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ**
**ಪ್ರಹಾಸ್ಯಸಿ || ೩೯ ||**

**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ |**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ || ೪೦ ||**

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ |**
**ಬಹುಶಾಖಾಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ || ೪೧ ||**

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ |**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ || ೪೨ ||**

ಮರಣ ರೂಪ ಕರ್ಮಫಲ ಕೊಡುವ ಭೋಗೈಶ್ವರ್ಯಗಳನ್ನು ಹೊಂದಲು ಮಾಡುವ ಕರ್ಮಗಳ ವರ್ಣನೆಯಿಂದ ತುಂಬಿದ ಮಾತುಗಳನ್ನು ಹರಟುತ್ತಾರೆ, ಭೋಗ–ಐಶ್ವರ್ಯಗಳಲ್ಲಿ ಆಸಕ್ತರಾದವರ ಬುದ್ಧಿ ನಷ್ಟವಾಗುತ್ತದೆ. ಅವರ ಬುದ್ಧಿ ನಿಶ್ಚಲವಾಗಲೂ ಆರದು, ಸಮಾಧಿಯಲ್ಲಿ ಸ್ಥಿರವಾಗಲೂ ಆರದು
|| ೪೨–೪೪ ||

ಟಿಪ್ಪಣಿ—ಮೇಲಿನ ಮೂರು ಶ್ಲೋಕಗಳಲ್ಲಿ ಯೋಗವಾದದ ವಿರುದ್ಧವಾಗಿ ಕರ್ಮಕಾಂಡ ಅಥವಾ ವೇದವಾದದ ವರ್ಣನೆ ಬಂದಿದೆ ಕರ್ಮಕಾಂಡ ಅಥವಾ ವೇದವಾದ ಎಂದರೆ ಫಲ ಪಡೆಯಲು ಮಾಡುವ ಅಸಂಖ್ಯ ಕ್ರಿಯೆ. ಈ ಕ್ರಿಯೆಗಳೇ ಬೇರೆ ವೇದರಹಸ್ಯ, ವೇದಾಂತವೇ ಬೇರೆ ಇವು ಅಲ್ಪ ಫಲ ಕೊಡುವಂಥವು. ಆದುದರಿಂದ ನಿರರ್ಥಕ

ಅರ್ಜುನ ! ವೇದವಿಷಯಗಳಾದ ತ್ರಿಗುಣಗಳಿಂದ ನೀನು ಅಲಿಪ್ತನಾಗಿರು ಸುಖದುಃಖಾದಿ ದ್ವಂದ್ವಗಳಿಂದ ಮುಕ್ತನಾಗು, ನಿತ್ಯ–ಸತ್ಯವಸ್ತುವಿನಲ್ಲಿ ಸ್ಥಿರನಾಗಿರು. ಯಾವುದೇ ವಸ್ತುವನ್ನು ಪಡೆವ, ಇಟ್ಟುಕೊಳ್ಳುವ, ಜಂಜಾಟದಿಂದ ದೂರವಿರು ಆತ್ಮಪರಾಯಣನಾಗು || ೪೫ ||

ಬಾವಿಯಿಂದಾಗುವ ಕೆಲಸವೆಲ್ಲವೂ, ಎಲ್ಲ ಬಗೆಯಲ್ಲೂ, ಸರೋವರದಿಂದಲೂ ಆಗುತ್ತದೆ, ಅದೇ ರೀತಿ ವೇದಗಳಲ್ಲಿರುವುದೆಲ್ಲ ಜ್ಞಾನಿಯಾದ ಬ್ರಹ್ಮಪರಾಯಣನಿಗೆ ಆತ್ಮಾನುಭವದಿಂದ ದೊರೆಯುತ್ತದೆ || ೪೬ ||

---

**ಕಾಮಾತ್ಮಾನಸ್ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ ।**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ || ೪೩ ||**

**ಭೋಗೈಶ್ವರ್ಯಪ್ರಸಕ್ತಾನಾಂ ತಯಾಽಪಹೃತಚೇತಸಾಮ್ ।**
**ವ್ಯವಸಾಯಾತ್ಮಿಕಾ ಬುದ್ಧಿಸ್ಸಮಾಧೌ ನ ವಿಧೀಯತೇ || ೪೪ ||**

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ||೪೫||**

**ಯಾವಾನರ್ಥ ಉದಪಾನೇ ಸರ್ವತಸ್ಸಂಪ್ಲುತೋದಕೇ ।**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ || ೪೬ ||**

**ಕರ್ಮ ಮಾಡುವುದಕ್ಕೆ ಮಾತ್ರ ನಿನಗೆ ಅಧಿಕಾರ.** ಅದರಿಂದ ಹುಟ್ಟುವ ಅನೇಕ ಫಲಗಳ ಅಧಿಕಾರವೆಂದಿಗೂ ಇಲ್ಲ ಕರ್ಮಫಲ ನಿನ್ನ ಉದ್ದೇಶ್ಯವಾಗದಿರಲಿ. ಕರ್ಮ ಮಾಡದಿರುವ ಆಗ್ರಹವೂ ನಿನಗೆ ಬೇಡ || ೪೭ ||

ಧನಂಜಯ, ಆಸಕ್ತಿಯನ್ನು ಬಿಟ್ಟು, ಯೋಗಸ್ಥನಾಗಿ ಎಂದರೆ ಸಫಲತೆ– ನಿಷ್ಫಲತೆಗಳಲ್ಲಿ ಸಮಾನ ಭಾವವನ್ನಿಟ್ಟು ಕರ್ಮ ಮಾಡು. ಸಮತ್ವವೇ ಯೋಗ || ೪೮ ||

ಧನಂಜಯ, ಸಮತ್ವಬುದ್ಧಿಗೆ ಹೋಲಿಸಿದರೆ ಬರೀ ಕರ್ಮ ಬಹು ತುಚ್ಛ ನೀನು ಸಮತ್ವಬುದ್ಧಿಯನ್ನು ಆಶ್ರಯಿಸು ಫಲಹೇತುವುಳ್ಳವನು ದಯೆಗೆ ಪಾತ್ರ || ೪೯ ||

ಬುದ್ಧಿಯುಕ್ತನನ್ನು ಎಂದರೆ ಸಮತ್ವಭಾವದ ಪುರುಷನನ್ನು ಇಲ್ಲಿ ಪಾಪ ಪುಣ್ಯಗಳು ಸ್ಪರ್ಶಿಸಲಾರವು ಆದುದರಿಂದ ನೀನು ಸಮತ್ವಕ್ಕಾಗಿ ಯತ್ನಿಸು. ಸಮತ್ವ(ಯೋಗ)ವೇ ಕಾರ್ಯಕುಶಲತೆ. || ೫೦ ||

---

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾ ಚ ನ ।**
**ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ**
**|| ೪೭ ||**

**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ**
**|| ೪೮ ||**

**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ || ೪೯ ||**

**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।**
**ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್**
**|| ೫೦ ||**

ಏಕೆಂದರೆ, ಸಮತ್ವ ಬುದ್ಧಿಯುಳ್ಳವರು ಕರ್ಮದಿಂದ ಹುಟ್ಟುವ ಫಲಗಳನ್ನು ತ್ಯಾಗಮಾಡಿ ಜನ್ಮಬಂಧನದಿಂದ ಮುಕ್ತರಾಗಿ, ನಿಷ್ಕಲಂಕ ಗತಿಯನ್ನು—ಮೋಕ್ಷವನ್ನು—ಹೊಂದುತ್ತಾರೆ ॥ ೫೧ ॥

ಯಾವಾಗ ನಿನ್ನ ಬುದ್ಧಿ ಮೋಹರೂಪ ದೋಷದಿಂದ ಪಾರಾಗುವುದೋ ಆಗ ನೀನು ಹಿಂದೆ ಕೇಳಿದಂಥ ಮುಂದೆ ಕೇಳುವಂಥ ವಿಷಯಗಳಲ್ಲಿ ಉದಾಸೀನತೆ ಬರುತ್ತದೆ. ॥ ೫೨ ॥

ಅನೇಕ ಬಗೆಯ ಸಿದ್ಧಾಂತಗಳನ್ನು ಕೇಳಿ ನಿನ್ನ ಬುದ್ಧಿ ವ್ಯಗ್ರವಾಗಿದೆ. ಅದು ಸಮಾಧಿಯಲ್ಲಿ ಸ್ಥಿರವಾದಾಗ ನಿನಗೆ ಸಮತೆ ಬರುತ್ತದೆ. ॥ ೫೩ ॥

**ಅರ್ಜುನ :**

ಕೇಶವ! ಸ್ಥಿತಪ್ರಜ್ಞ, ಅಥವಾ ಸಮಾಧಿಸ್ಥನ ಲಕ್ಷಣಗಳೇನು? ಸ್ಥಿತಪ್ರಜ್ಞನ ನಡೆನುಡಿ ಹೇಗಿರುತ್ತವೆ? ॥ ೫೪ ॥

**ಶ್ರೀ ಭಗವಂತ :**

ಪಾರ್ಥ, ಮನಸ್ಸಿನಲ್ಲಿ ಹುಟ್ಟುವ ಎಲ್ಲ ಕಾಮಗಳನ್ನೂ ಮನುಷ್ಯ ಯಾವಾಗ ಬಿಡುತ್ತಾನೋ, ಆತ್ಮದ ಮೂಲಕ ಆತ್ಮದಲ್ಲಿಯೇ ತೃಪ್ತಿಹೊಂದುತ್ತಾನೋ ಆಗ ಸ್ಥಿತಪ್ರಜ್ಞನೆನಿಸಿಕೊಳ್ಳುತ್ತಾನೆ ॥ ೫೫ ॥

---

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥ ೫೧ ॥**

**ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥ ೫೨ ॥**

**ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥ ೫೩ ॥**

**ಅರ್ಜುನ ಉವಾಚ**

**ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ॥ ೫೪ ॥**

ಟಿಪ್ಪಣಿ—ಆತ್ಮದ ಮೂಲಕ ಆತ್ಮದಲ್ಲಿಯೆ ತೃಪ್ತಿ ಹೊಂದುವುದು ಎಂದರೆ ಆತ್ಮದ ಆನಂದವನ್ನು ಒಳಗೇ ಅರಸುವುದು ಸುಖ–ದುಃಖ ಕೊಡುವ ಹೊರಗಣ ವಸ್ತುಗಳಲ್ಲಿ ಆನಂದವನ್ನು ಹುಡುಕಬಾರದು. ಆನಂದ ಬೇರೆ, ಸುಖ ಬೇರೆ ಇದನ್ನರಿಯಬೇಕು. ನನಗೆ ಧನ ಸಿಕ್ಕಿದರೆ ಅದರಲ್ಲಿ ಸುಖ ಎಂಬ ಭಾವನೆ ಮೋಹ. ಭಿಕಾರಿಯಾದರೂ, ಹಸಿವಿನಿಂದ ಸಂಕಟಪಟ್ಟರೂ ಚಿಂತೆಯಿಲ್ಲ, ನಾನು ಕಳ್ಳತನ ಮಾಡೆ, ಮತ್ತಾವುದಾದರೂ ಪ್ರಲೋಭನದಲ್ಲಿ ಬೀಳೆ ಎಂಬುದರಲ್ಲಿ ಆನಂದವಿದೆ ಅದುವೆ ಆತ್ಮಸಂತೋಷ.

ಯಾರು ದುಃಖದಿಂದ ದುಃಖಿಯಾಗನೋ, ಸುಖವನ್ನು ಬಯಸನೋ, ಯಾರು ರಾಗ ಭಯ ಕ್ರೋಧರಹಿತನೋ ಅವನು ಸ್ಥಿರಬುದ್ಧಿಯ ಮುನಿ ಎನ್ನುತ್ತಾರೆ || ೫೬ ||

ಸರ್ವತ್ರ ರಾಗರಹಿತನಾಗಿ, ಯಾವ ಪುರುಷ ಶುಭಾಶುಭಗಳು ಬಂದಾಗ ಸಂತೋಷಗೊಳ್ಳನೋ, ಶೋಕಮಾಡನೋ ಅವನದು ಸ್ಥಿರಬುದ್ಧಿ || ೫೭ ||

ಆಮೆ ನಾಲ್ಕೂ ಕಡೆಗಳಿಂದಲೂ ತನ್ನ ಅಂಗಗಳನ್ನು ಒಳಗೆಳೆದುಕೊಳ್ಳುವಂತೆ ಪುರುಷ ತನ್ನ ಇಂದ್ರಿಯಗಳನ್ನು ಇಂದ್ರಿಯವಿಷಯಗಳಿಗೆ ಸಿಗದಂತೆ ಬಿಗಿಹಿಡಿದಾಗ ಅವನ ಬುದ್ಧಿ ಸ್ಥಿರವಾದುದು ಎನ್ನುತ್ತಾರೆ. || ೫೮ ||

---

### ಶ್ರೀ ಭಗವಾನುವಾಚ

**ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ |**
**ಆತ್ಮನ್ಯೇವಾತ್ಮನಾ ತುಷ್ಟಸ್ಸ್ಥಿತಪ್ರಜ್ಞಸ್ತದೋಚ್ಯತೇ || ೫೫ ||**

**ದುಃಖೇಷ್ವನುದ್ವಿಗ್ನಮನಾಸ್ಸುಖೇಷು ವಿಗತಸ್ಪೃಹಃ |**
**ವೀತರಾಗಭಯಕ್ರೋಧಸ್ಥಿತಧೀರ್ಮುನಿರುಚ್ಯತೇ || ೫೬ ||**

**ಯಸ್ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಮ್ |**
**ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ || ೫೭ ||**

**ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ |**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ || ೫೮ ||**

ದೇಹಧಾರಿ ನಿರಾಹಾರಿಯಾಗಿದ್ದರೆ ಅವನ ವಿಷಯಗಳು ಮಂದವಾಗುತ್ತವೆ. ಆದರೆ ರಾಗ ಹೋಗದು. ಈಶ್ವರನ ಸಾಕ್ಷಾತ್ಕಾರವಾದಾಗಲೆ ರಾಗ ನಿರ್ಮೂಲವಾಗುವುದು || ೫೯ ||

ಟಿಪ್ಪಣಿ—ಈ ಶ್ಲೋಕ ಉಪವಾಸಾದಿಗಳನ್ನು ನಿಷೇಧಿಸದು ಅದರ ಮಿತಿಯನ್ನು ಸೂಚಿಸುತ್ತದೆ ವಿಷಯಗಳನ್ನು ಶಾಂತಗೊಳಿಸಲಿಕ್ಕೆ ಉಪವಾಸಾದಿಗಳು ಅವಶ್ಯಕ. ಆದರೆ ಅದರ ಮೂಲದ ಅಥವಾ ಅದರಲ್ಲಿರುವ ರಾಗ-ರುಚಿಯ ನಾಶ ಈಶ್ವರದರ್ಶನ ಆದನಂತರವೇ ಈಶ್ವರಸಾಕ್ಷಾತ್ಕಾರದ ರುಚಿ ಲಭಿಸಿದಾಗ ಪುರುಷ ಬೇರೆ ರುಚಿಗಳನ್ನು ಮರೆಯುತ್ತಾನೆ.

ಕುಂತೀಪುತ್ರ, ಎಷ್ಟೇ ಚತುರನಾದರೂ ಪ್ರಯತ್ನಶೀಲನಾಗಿದ್ದರೂ ಕೂಡ, ಇಂದ್ರಿಯಗಳು ಪ್ರಮಥನಶೀಲವಾದುದರಿಂದ ಮನಸ್ಸನ್ನು ಬಲವಾಗಿ ಸೆಳೆದು ಬಿಡುತ್ತವೆ. || ೬೦ ||

ಈ ಇಂದ್ರಿಯಗಳನ್ನೆಲ್ಲ ಸ್ವಾಧೀನದಲ್ಲಿಟ್ಟುಕೊಂಡು ಯೋಗಿ ನನ್ನಲ್ಲಿ ತನ್ಮಯನಾಗಿರಬೇಕು. ಏಕೆಂದರೆ, ಯಾರ ಇಂದ್ರಿಯಗಳು ಸ್ಥಿರವೋ ಅವನ ಬುದ್ಧಿಯೂ ಸ್ಥಿರ || ೬೧ ||

ಟಿಪ್ಪಣಿ—ಎಂದರೆ ಭಕ್ತಿಯಿಲ್ಲದೆ—ಈಶ್ವರನ ಸಹಾಯವಿಲ್ಲದೆ—ಪುರುಷಪ್ರಯತ್ನ ಮಿಥ್ಯೆ.

---

ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।
ರಸವರ್ಜ್ಯಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ || ೫೯ ||

ಯತತೋಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।
ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ || ೬೦ ||

ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।
ವಶೇಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ || ೬೧ ||

ವಿಷಯಗಳ ಚಿಂತನಮಾಡುವ ಪುರುಷನಿಗೆ ಅವುಗಳಲ್ಲಿ ಆಸಕ್ತಿ ಹುಟ್ಟು ತ್ತದೆ ಆಸಕ್ತಿಯಿಂದ ಕಾಮ, ಕಾಮದಿಂದ ಕ್ರೋಧ ಹುಟ್ಟುತ್ತವೆ ‖ ೬೨ ‖

ಟಿಪ್ಪಣಿ—ಕಾಮವುಳ್ಳವನಿಗೆ ಕ್ರೋಧ ಅನಿವಾರ್ಯ. ಏಕೆಂದರೆ ಕಾಮಕ್ಕೆ ಎಂದಿಗೂ ತೃಪ್ತಿಯೇ ಇಲ್ಲ

ಕ್ರೋಧದಿಂದ ಮೂಢತ್ವವುಂಟಾಗುತ್ತದೆ, ಮೂಢತ್ವದಿಂದ ಸ್ಮೃತಿ ವಿಭ್ರಮ ಸ್ಮೃತಿವಿಭ್ರಮದಿಂದ ಜ್ಞಾನ(ಬುದ್ಧಿ)ನಾಶ ಜ್ಞಾನ ನಷ್ಟವಾದವನು ಸತ್ತಂತೆಯೆ ಸರಿ. ‖ ೬೩ ‖

ಆದರೆ ಯಾರ ಮನಸ್ಸು ತನ್ನ ಸ್ವಾಧೀನದಲ್ಲಿರುತ್ತದೋ, ಯಾರ ಇಂದ್ರಿಯಗಳು ರಾಗದ್ವೇಷವಿಲ್ಲದೆ ಅವನ ವಶವರ್ತಿಯಾಗಿರುತ್ತವೋ ಆ ಮನುಷ್ಯ ತನ್ನ ಇಂದ್ರಿಯಗಳಿಂದ ಕೆಲಸ ಮಾಡಿಸಿಕೊಂಡರೂ ಅವನ ಚಿತ್ತಕ್ಕೆ ಪ್ರಸನ್ನತೆ ಪ್ರಾಪ್ತವಾಗುತ್ತದೆ. ‖ ೬೪ ‖

ಚಿತ್ತದ ಪ್ರಸನ್ನತೆಯಿಂದ ಅವನ ದುಃಖಗಳೆಲ್ಲ ನಿರ್ಮೂಲವಾಗುತ್ತವೆ. ಪ್ರಸನ್ನಚಿತ್ತನ ಬುದ್ಧಿ ಶೀಘ್ರವಾಗಿ ಸ್ಥಿರವಾಗುತ್ತದೆ ‖ ೬೫ ‖

---

**ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।**
**ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ**
**‖ ೬೨ ‖**

**ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ‖ ೬೩ ‖**

**ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ‖ ೬೪ ‖**

**ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।**
**ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ‖ ೬೫ ‖**

ಸಮತ್ವವಿಲ್ಲದವನಿಗೆ ವಿವೇಕವಿಲ್ಲ, ಭಕ್ತಿಯಿಲ್ಲ ಭಕ್ತಿಯಿಲ್ಲದವನಿಗೆ ಶಾಂತಿಯಿಲ್ಲ. ಶಾಂತಿಯಿಲ್ಲದವನಿಗೆ ಸುಖವೆಲ್ಲಿ? || ೬೬ ||

ವಿಷಯಗಳಲ್ಲಿ ಅಲೆದಾಡುವ ಇಂದ್ರಿಯಗಳ ಹಿಂದೆ ಯಾರ ಮನಸ್ಸು ಓಡುತ್ತದೋ, ಅಂಥವನ ಮನಸ್ಸು ನೀರಿನಲ್ಲಿ ದೋಣಿಯನ್ನು ಸೆಳೆದೊಯ್ಯುವ ಗಾಳಿಯಂತೆ, ಅವನ ಬುದ್ಧಿಯನ್ನು ಬೇಕಾದಲ್ಲಿಗೆ ಸೆಳೆದೊಯ್ಯುತ್ತದೆ || ೬೭ ||

ಆದುದರಿಂದ, ಮಹಾಬಾಹು, ಯಾರ ಇಂದ್ರಿಯಗಳು ಸುತ್ತಲಿನ ವಿಷಯಗಳನ್ನು ಬಿಟ್ಟು ಅವನ ವಶವರ್ತಿಗಳಾಗುತ್ತವೆಯೋ ಅವನ ಬುದ್ಧಿ ಸ್ಥಿರವಾಗುತ್ತದೆ. ಪ್ರಾಣಿಮಾತ್ರವೆಲ್ಲವೂ ನಿದ್ರಿಸುವಾಗ ಸಂಯಮಿ ಎಚ್ಚತ್ತಿರುತ್ತಾನೆ. ಜನರು ಎಚ್ಚರವಾಗಿರುವಾಗ ಜ್ಞಾನವಂತನಾದ ಮುನಿ ನಿದ್ರಿಸುತ್ತಾನೆ || ೬೮–೬೯ ||

ಟಿಪ್ಪಣಿ—ಭೋಗಿಯಾದ ಮನುಷ್ಯ ರಾತ್ರಿ ೧೨ ಘಂಟೆಯ ವರೆಗೆ ನರ್ತನ, ನಾಟ್ಯ, ಆಹಾರಪಾನಾದಿಗಳಲ್ಲಿ ತನ್ನ ಹೊತ್ತು ಕಳೆಯುತ್ತಾನೆ. ಬೆಳಗ್ಗೆ ೭–೮ ಘಂಟೆಯವರೆಗೆ ಮಲಗುತ್ತಾನೆ. ಸಂಯಮಿಗಳು ರಾತ್ರಿ ೭–೮ ಘಂಟೆಗೆ ಮಲಗಿ ಅರ್ಧರಾತ್ರಿಯ ಮೇಲೆ ಎದ್ದು ಈಶ್ವರನ ಧ್ಯಾನಮಾಡುತ್ತಾರೆ ಭೋಗಿಗಳು ಸಂಸಾರವನ್ನು ಬೆಳೆಸಿಕೊಂಡು ಈಶ್ವರನನ್ನು ಮರೆಯುತ್ತಾರೆ ಸಂಯಮಿ ಸಾಂಸಾರಿಕ ಪ್ರಪಂಚದ ಪರಿವೆಯಿಲ್ಲದೆ ಈಶ್ವರಸಾಕ್ಷಾತ್ಕಾರ ಪಡೆಯುತ್ತಾನೆ ಈ ರೀತಿ ಇಬ್ಬರದೂ ಎರಡು ಬೇರೆ ಬೇರೆ ಪಂಥ ಈ ಶ್ಲೋಕದಲ್ಲಿ ಇದನ್ನೇ ಭಗವಂತ ಹೇಳಿದಾನೆ.

---

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ |**
**ನ ಚಾಭಾವಯತಶ್ಶಾಂತಿರಶಾಂತಸ್ಯ ಕುತಸ್ಸುಖಮ್ || ೬೬ ||**

**ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ |**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ || ೬೭ ||**

**ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ |**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ || ೬೮ ||**

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ |**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ || ೬೯ ||**

ನದಿಗಳು ಬಂದುಬಿದ್ದು ತುಂಬುತ್ತಿದ್ದರೂ ಸಮುದ್ರ ಅಚಲವಾಗಿರುವಂತೆ, ಯಾವ ಮನುಷ್ಯನಲ್ಲಿ ಸಾಂಸಾರಿಕ ಭೋಗ ಶಾಂತವಾಗುತ್ತದೆಯೋ ಅವನೇ ಶಾಂತಿಯನ್ನು ಪಡೆಯುತ್ತಾನೆ. ಕಾಮಗಳಲ್ಲಿ ಇಚ್ಛೆಯುಳ್ಳವನು ಪಡೆಯಲಾರ. || ೭೦ ||

ಎಲ್ಲ ಬಗೆಯ ಆಸಕ್ತಿಗಳನ್ನೂ ಬಿಟ್ಟು ಯಾವ ಪುರುಷ ಇಚ್ಛೆ, ಮಮತೆ, ಅಹಂಕಾರಗಳಿಲ್ಲದೆ ನಡೆಯುತ್ತಾನೋ, ಅವನೇ ಶಾಂತಿಯನ್ನು ಪಡೆಯುತ್ತಾನೆ || ೭೧ ||

ಪಾರ್ಥ! ಈಶ್ವರನನ್ನು ತಿಳಿದವನ ಸ್ಥಿತಿಯ ಚಿತ್ರ ಇದೇ. ಇದನ್ನು ಹೊಂದಿದ ಬಳಿಕ ಅವನು ಮೋಹವಶನಾಗುವುದಿಲ್ಲ ಅಂತ್ಯಕಾಲದಲ್ಲಿ ಕೂಡ ಈ ಸ್ಥಿತಿಯಲ್ಲಿಯೆ ಇರುವವನು ಬ್ರಹ್ಮನಿರ್ವಾಣವನ್ನು ಹೊಂದುತ್ತಾನೆ. || ೭೨ ||

---

**ಆಪೂರ್ಯಮಾಣಮಚಲಪ್ರತಿಷ್ಠಂ ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।**
**ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ ಸ ಶಾಂತಿಮಾಪ್ನೋತಿ ನ ಕಾಮಕಾಮೀ || ೭೦ ||**

**ವಿಹಾಯ ಕಾಮಾನ್ ಯಸ್ಸರ್ವಾನ್ ಪುಮಾಂಶ್ಚರತಿ ನಿಸ್ಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ || ೭೧ ||**

**ಏಷಾ ಬ್ರಾಹ್ಮೀಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಽಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ || ೭೨ ||**

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ಸಾಂಖ್ಯಯೋಗವೆಂಬ ಎರಡನೆಯ ಅಧ್ಯಾಯ.

---

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಸಾಂಖ್ಯಯೋಗೋ
ನಾಮ ದ್ವಿತೀಯೋಽಧ್ಯಾಯಃ ||**

# ಅಧ್ಯಾಯ ೩

## ಕರ್ಮಯೋಗ

**[ಈ ಅಧ್ಯಾಯ ಗೀತೆಯ ಸ್ವರೂಪವನ್ನರಿಯಲು ಬೀಗದ ಕೈಯೆನ್ನಬಹುದು. ಇದರಲ್ಲಿ ಹೇಗೆ ಕರ್ಮ ಮಾಡಬೇಕೋ, ಎಂಥ ಕರ್ಮ ಮಾಡಬೇಕೋ, ಸತ್ಕರ್ಮ ಯಾವುದೋ ಸ್ಪಷ್ಟಪಡಿಸ ಲಾಗಿದೆ. ನಿಜವಾದ ಜ್ಞಾನ ಪಾರಮಾರ್ಥಿಕ ಕರ್ಮವಾಗಿ ಪರಿಣಮಿಸ ಬೇಕೆಂಬುದನ್ನೂ ತೋರಿಸಲಾಗಿದೆ.]**

**ಅರ್ಜುನ :**

ಜನಾರ್ದನ, ಕರ್ಮಕ್ಕಿಂತಲೂ ಬುದ್ಧಿಯೆ ಹೆಚ್ಚು ಶ್ರೇಷ್ಠವೆಂದು ನೀನು ಅಭಿಪ್ರಾಯಪಡುವುದಾದರೆ, ನನಗೇಕೆ ಘೋರ ಕರ್ಮವನ್ನು ಅಂಟಿಸು ತ್ತಿದೀಯೆ ? ಕೇಶವ. ॥ ೧ ॥

ಟಿಪ್ಪಣಿ—ಬುದ್ಧಿ ಅರ್ಥಾತ್ ಸಮತ್ವಬುದ್ಧಿ.

ನಿನ್ನ ಮಿಶ್ರವಾಕ್ಯಗಳಿಂದ ನನ್ನ ಬುದ್ಧಿ ಸಂದೇಹಗೊಳ್ಳುತ್ತಿದೆ ಆದುದ ರಿಂದ, ನನಗೆ ಕಲ್ಯಾಣಕರವಾದ ಒಂದೇ ಮಾತನ್ನು ನಿಶ್ಚಿತವಾಗಿ ಹೇಳು ॥ ೨ ॥

---

## ಅಥ ತೃತೀಯೋಽಧ್ಯಾಯಃ

### ಅರ್ಜುನ ಉವಾಚ

**ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।**
**ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥ ೧ ॥**

**ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ॥ ೨ ॥**

ಟಿಪ್ಪಣಿ—ಅರ್ಜುನ ಗೊಂದಲದಲ್ಲಿ ಬಿದ್ದ ಏಕೆಂದರೆ, ಒಂದು ಕಡೆ ಭಗವಂತ ಮನೋದೌರ್ಬಲ್ಯಕ್ಕಾಗಿ ಅವನನ್ನು ಗದ್ದಿಸುತ್ತಿದಾನೆ. ಮತ್ತೊಂದು ಕಡೆ ಎರಡನೆಯ ಅಧ್ಯಾಯದ ೪೯-೫೦ನೆಯ ಶ್ಲೋಕಗಳಲ್ಲಿ ಕರ್ಮತ್ಯಾಗದ ಆಭಾಸ ಬಂದಿದೆ. ಆದರೆ ಗಹನವಿಚಾರ ಮಾಡಿದರೆ, ಹಾಗಿಲ್ಲ ಎಂದು ಭಗವಂತ ಮುಂದೆ ತೋರುತ್ತಾನೆ.

## ಶ್ರೀ ಭಗವಂತ :

ಪಾಪರಹಿತ, ಈ ಲೋಕದಲ್ಲಿ ಎರಡು ಬಗೆಯ ಅವಸ್ಥೆಯೆಂದು ನಾನು ಮೊದಲು ಹೇಳಿದೆ: ಒಂದು—ಜ್ಞಾನಯೋಗದಿಂದ ಸಾಂಖ್ಯ, ಎರಡು—ಕರ್ಮ ಯೋಗದ ಮೂಲಕ ಯೋಗಿಗಳ ನಿಷ್ಠೆ. ॥ ೩ ॥

ಕರ್ಮವನ್ನು ಮೊದಲಿಡದಿದ್ದರೆ ಮನುಷ್ಯನಿಗೆ ನೈಷ್ಕರ್ಮ್ಯದ ಅನುಭವ ಸಿಗದು. ಕರ್ಮದ ಕೇವಲ ಬಾಹ್ಯತ್ಯಾಗದಿಂದ ಮೋಕ್ಷವನ್ನು ಹೊಂದಲಾರ ॥ ೪ ॥

ಟಿಪ್ಪಣಿ—ನೈಷ್ಕರ್ಮ್ಯ ಎಂದರೆ ಮನಸ್ಸಿನಿಂದ ವಾಕ್ಕಿನಿಂದ ಶರೀರದಿಂದ ಕರ್ಮ ಮಾಡದಿರುವುದು ಕರ್ಮ ಮಾಡದೆಯೆ ಈ ಬಗೆಯ ನಿಷ್ಕರ್ಮದ ಅನುಭವವನ್ನು ಯಾರೂ ಹೊಂದಲಾರರು ಹಾಗಾದರೆ ಅದರ ಅನುಭವ ಪಡೆವುದು ಹೇಗೆಂಬುದನ್ನು ಈಗ ಅರಿಯಬೇಕು

ನಿಜವಾಗಿ ನೋಡಿದರೆ ಯಾರೂ ಒಂದು ಕ್ಷಣವಾದರೂ ಕೆಲಸಮಾಡದೆ ಇರಲಾರರು ಪ್ರಕೃತಿಸಂಭವವಾದ ಗುಣಗಳು ಹಠದಿಂದಲೇ ಪ್ರತಿಯೊಬ್ಬ ನಿಂದಲೂ ಕೆಲಸ ಮಾಡಿಸುತ್ತಿವೆ. ॥ ೫ ॥

---

### ಶ್ರೀ ಭಗವಾನುವಾಚ

ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾಽನಘ ।
ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್
॥ ೩ ॥

ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।
ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥ ೪ ॥

ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।
ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥ ೫ ॥

ಕರ್ಮ ಮಾಡುವ ಇಂದ್ರಿಯಗಳನ್ನು ತಡೆ ಹಿಡಿದು, ಆದರೆ ಮನಸ್ಸಿನಲ್ಲಿಯೆ ಆಯಾ ಇಂದ್ರಿಯಗಳ ವಿಷಯಚಿಂತನೆ ಮಾಡುತ್ತಾನೆ ಅವನು ಮೂಢಾತ್ಮ, ಮಿಥ್ಯಾಚಾರಿ. || ೬ ||

ಟಿಪ್ಪಣಿ—ಉದಾಹರಣಾರ್ಥ, ಒಬ್ಬ ತನ್ನ ನಾಲಗೆ ಬಿಗಿಹಿಡಿದಾನು, ಆದರೆ ಮನಸ್ಸಿನಲ್ಲಿಯೆ ಇತರರನ್ನು ನಿಂದಿಸಬಹುದು ಅವನು ನಿಷ್ಕರ್ಮಿಯಲ್ಲ, ಮಿಥ್ಯಾಚಾರಿ ಹೀಗೆ ಹೇಳಿದರೆ, ಮನಸ್ಸನ್ನು ಬಿಗಿಹಿಡಿಯದಿರುವವರೆಗೆ ಶರೀರವನ್ನು ಬಿಗಿಹಿಡಿಯುವುದು ನಿರರ್ಥಕವೆಂದಲ್ಲ ಶರೀರವನ್ನು ವಶಪಡಿಸಿಕೊಳ್ಳದ ಹೊರತು ಮನಸ್ಸಿನ ಅಂಕೆ ಸಾಧ್ಯವಲ್ಲ ಆದರೆ ಶರೀರವನ್ನು ನಿಗ್ರಹಿಸುವಾಗಲೇ ಮನಸ್ಸನ್ನೂ ವಶಪಡಿಸಿಕೊಳ್ಳುವ ಪ್ರಯತ್ನ ನಡೆಯಬೇಕು. ಭಯದಿಂದ ಅಥವಾ ಬೇರೆ ಬಾಹ್ಯ ಕಾರಣಗಳಿಂದ ಶರೀರವನ್ನು ಬಿಗಿಹಿಡಿದು ಮನಸ್ಸನ್ನು ಯಾರು ನಿಗ್ರಹಿಸರೋ, ಅಷ್ಟು ಮಾತ್ರವಲ್ಲದೆ ಮನಸ್ಸಿನಲ್ಲಿ ಆ ವಿಷಯವನ್ನು ಭೋಗಿಸುತ್ತ, ಅವಕಾಶ ದೊರೆತಾಗ ಶರೀರದಿಂದಲೂ ಅದನ್ನು ಭೋಗಿಸುತ್ತಾರೋ, ಅಂಥ ಮಿಥ್ಯಾಚಾರಿಗಳ ನಿಂದೆಮಾಡಿದೆ ಇಲ್ಲಿ. ಮುಂದಿನ ಶ್ಲೋಕ ಸ್ಪಷ್ಟವಾಗಿ ಇದಕ್ಕೆ ವಿರುದ್ಧ ಭಾವವನ್ನು ತೋರಿಸುತ್ತದೆ.

ಆದರೆ, ಅರ್ಜುನ! ಯಾರು ಮನಸ್ಸಿನಿಂದ ಇಂದ್ರಿಯಗಳನ್ನು ನಿರ್ಬಂಧಿಸಿ ನಿಸ್ಸಂಗಿಯಾಗಿ ಕರ್ಮೇಂದ್ರಿಯಗಳ ಮೂಲಕ ಕರ್ಮಯೋಗವನ್ನಾರಂಭಿಸುತ್ತಾನೋ ಅವನೇ ಶ್ರೇಷ್ಠ ಪುರುಷ. || ೭ ||

ಟಿಪ್ಪಣಿ—ಇದರಲ್ಲಿ ಬಹಿರಂಗ–ಅಂತರಂಗಗಳ ಮೇಳನವನ್ನು ಸಾಧಿಸಲಾಗಿದೆ ಮನಸ್ಸನ್ನು ಅಂಕೆಯಲ್ಲಿಟ್ಟಿದ್ದರೂ ಶರೀರದ ಮೂಲಕ ಎಂದರೆ ಕರ್ಮೇಂದ್ರಿಯಗಳ ಮೂಲಕ ಮನುಷ್ಯ ಏನಾದರೂ ಕೆಲಸ ಮಾಡಿಯೇ ಮಾಡುತ್ತಾನೆ ಆದರೆ ಯಾರ ಮನಸ್ಸು ಸ್ವಾಧೀನದಲ್ಲಿದೆಯೋ ಅಂಥವನ ಕಿವಿ ದೂಷಣೆಯ ಮಾತನ್ನು ಕೇಳವು ಈಶ್ವರ ಭಜನೆ ಕೇಳುತ್ತವೆ. ಸತ್ಪುರುಷರ ವಚನವನ್ನು ಕೇಳುತ್ತವೆ ಯಾರ ಮನಸ್ಸು ಸ್ವಾಧೀನ

---

ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ |
ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಸ್ಸ ಉಚ್ಯತೇ|| ೬ ||

ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ |
ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಸ್ಸ ವಿಶಿಷ್ಯತೇ || ೭ ||

ದಲ್ಲಿದೆಯೋ ಅಂಥವನು ವಿಷಯವಿಲಾಸಗಳಲ್ಲಿ ಮುಳುಗುವುದಿಲ್ಲ. ಅಂಥ ಮನುಷ್ಯ ಆತ್ಮದ ಶೋಭೆಯನ್ನು ಹೆಚ್ಚಿಸುವ ಕೆಲಸವನ್ನೆ ಮಾಡುತ್ತಾನೆ ಈ ಬಗೆಯ ಕರ್ಮ ಮಾಡುವುದೇ ಕರ್ಮಮಾರ್ಗ. ಯಾವುದರ ಮೂಲಕ ಆತ್ಮ ಶರೀರಬಂಧನದಿಂದ ಮುಕ್ತ ವಾಗುವ ಯೋಗ ಸಾಧಿಸುತ್ತದೆಯೋ ಅದೇ ಕರ್ಮಯೋಗ ಇದರಲ್ಲಿ ವಿಷಯಾಸಕ್ತಿಗೆ ಸ್ಥಾನವೇ ಇರಲಾರದು.

ಆದುದರಿಂದ ನೀನು ನಿಯತಕರ್ಮವನ್ನು ಮಾಡು. ಕರ್ಮ ಮಾಡ ದಿರುವುದಕ್ಕಿಂತ ಕರ್ಮ ಮಾಡುವುದೇ ಬಹಳ ಮೇಲು. ಕರ್ಮ ಮಾಡದೆ ನಿನ್ನ ಶರೀರವ್ಯಾಪಾರ ಕೂಡ ನಡೆಯಲಾರದು ॥ ೮ ॥

ಟಿಪ್ಪಣಿ—ನಿಯತವೆಂಬ ಶಬ್ದ ಮೂಲ ಶ್ಲೋಕದಲ್ಲಿಯೇ ಇದೆ ಅದು ಹಿಂದಿನ ಶ್ಲೋಕಕ್ಕೆ ಸಂಬಂಧಿಸಿದುದು ಆ ಶ್ಲೋಕದಲ್ಲಿ, ಮನಸ್ಸಿನಿಂದ ಇಂದ್ರಿಯಗಳನ್ನು ಸಂಯಮದಲ್ಲಿಟ್ಟು, ಸಂಗರಹಿತನಾಗಿ (ಅನಾಸಕ್ತನಾಗಿ) ಕರ್ಮಮಾಡುವವನ ಸ್ತುತಿ ಮಾಡಿದೆ. ಈ ಶ್ಲೋಕದಲ್ಲಿ, ನಿಯತಕರ್ಮಗಳನ್ನು ಅಥವಾ ಇಂದ್ರಿಯಗಳನ್ನು ಸ್ವಾಧೀನ ದಲ್ಲಿಟ್ಟುಕೊಂಡು ಮಾಡುವ ಕೆಲಸಗಳನ್ನು ಹೇಳಿದೆ

ಯಜ್ಞಾರ್ಥವಾಗಿ ಮಾಡುವ ಕರ್ಮವಲ್ಲದೆ ಉಳಿದವುಗಳಿಂದ ಈ ಲೋಕದಲ್ಲಿ ಬಂಧನವುಂಟಾಗುತ್ತದೆ ಆದುದರಿಂದ, ಕೌಂತೇಯ, ನೀನು ರಾಗರಹಿತನಾಗಿ ಯಜ್ಞಾರ್ಥಕರ್ಮ ಮಾಡು ॥ ೯ ॥

ಟಿಪ್ಪಣಿ—ಯಜ್ಞವೆಂದರೆ ಪರೋಪಕಾರಾರ್ಥ, ಈಶ್ವರಾರ್ಥ ಮಾಡಿದ ಕರ್ಮ.

---

**ನಿಯತಂ ಕುರು ಕರ್ಮತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।**
**ಶರೀರಯಾತ್ರಾऽಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥ ೮ ॥**

**ಯಜ್ಞಾರ್ಥಾತ್ ಕರ್ಮಣೋऽನ್ಯತ್ರ ಲೋಕೋऽಯಂ ಕರ್ಮಬಂಧನಃ।**
**ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಸ್ಸಮಾಚರ ॥ ೯ ॥**

ಪ್ರಜಾಪತಿ ಬ್ರಹ್ಮ ಯಜ್ಞಸಹಿತ ಪ್ರಜೆಗಳನ್ನು ಸೃಷ್ಟಿಸಿ ಹೀಗೆ ಹೇಳಿದ : ಯಜ್ಞದ ಮೂಲಕ ಅಭಿವೃದ್ಧಿ ಹೊಂದಿರಿ. ಇದು ನಿಮಗೆ ಇಚ್ಛಿತ ಫಲ ಕೊಡಲಿ. || ೧೦ ||

ನೀವು ಯಜ್ಞದ ಮೂಲಕ ದೇವತೆಗಳ ಪೋಷಣೆಮಾಡಿ. ಅವರು ನಿಮ್ಮನ್ನು ಪೋಷಿಸಲಿ. ಹೀಗೆ ಪರಸ್ಪರ ಪೋಷಣೆಯಿಂದ ನಿಮಗೆ ಪರಮ ಕಲ್ಯಾಣವಾಗಲಿ. ಯಜ್ಞದಿಂದ ಸಂತುಷ್ಟರಾದ ದೇವತೆಗಳು ನಿಮಗೆ ಇಚ್ಛಿತ ಭೋಗವನ್ನು ಕೊಡುತ್ತಾರೆ. ಆದರೆ ಅವರಿಗೆ ಹಿಂತಿರುಗಿ ಏನನ್ನೂ ಕೊಡದೆ ಅವರು ಕೊಟ್ಟಿದನ್ನು ಭೋಗಿಸುವವರು ಅವಶ್ಯವಾಗಿ ಕಳ್ಳರೇ ಸರಿ
|| ೧೧-೧೨ ||

ಟಿಪ್ಪಣಿ— ಇಲ್ಲಿ ದೇವತೆಗಳೆಂದರೆ ಭೂತಮಾತ್ರ ಅಥವಾ ಈಶ್ವರನ ಸಮಗ್ರ ಸೃಷ್ಟಿ. ಭೂತಮಾತ್ರಗಳ ಸೇವೆಯೆ ದೇವತಾಸೇವೆ, ಅದೇ ಯಜ್ಞ.

ಯಜ್ಞಮಾಡಿ ಉಳಿದುದನ್ನು ಭುಜಿಸುವವರು ಸರ್ವಪಾಪಗಳಿಂದಲೂ ಮುಕ್ತರಾಗುತ್ತಾರೆ ಕೇವಲ ತಮಗಾಗಿಯೆ ಬೇಯಿಸುವವರು ಪಾಪವನ್ನು ತಿನ್ನುತ್ತಾರೆ. || ೧೩ ||

---

**ಸಹಯಜ್ಞಾಃ ಪ್ರಜಾಸ್ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷವೋಽಸ್ತ್ವಿಷ್ಟಕಾಮಧುಕ್ || ೧೦ ||**

**ದೇವಾನ್ ಭಾವಯತಾಽನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ || ೧೧ ||**

**ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ।**
**ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇಸ್ತೇನ ಏವ ಸಃ || ೧೨ ||**

**ಯಜ್ಞಶಿಷ್ಟಾಶಿನಸ್ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।**
**ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ || ೧೩ ||**

ಪ್ರಾಣಿಮಾತ್ರಗಳೆಲ್ಲ ಅನ್ನದಿಂದ ಹುಟ್ಟುತ್ತವೆ ಅನ್ನ ಮಳೆಯಿಂದ ಹುಟ್ಟುತ್ತದೆ ಯಜ್ಞ ಮಾಡಿದರೆ ಮಳೆ, ಕರ್ಮ ಮಾಡಿದರೆ ಯಜ್ಞ. ॥ ೧೪ ॥

ಕರ್ಮ ಪ್ರಕೃತಿಯಿಂದ ಹುಟ್ಟಿತೆಂದು ತಿಳಿದುಕೊ ಪ್ರಕೃತಿ ಅಕ್ಷರ ಬ್ರಹ್ಮನಿಂದ ಹುಟ್ಟಿತು ಆದುದರಿಂದ ಸರ್ವವ್ಯಾಪಕ ಬ್ರಹ್ಮ ಸದಾ ಯಜ್ಞದಲ್ಲಿ ಇರುತ್ತಾನೆ. ॥ ೧೫ ॥

ಈ ಬಗೆಯಾಗಿ ಪ್ರವರ್ತಿತವಾದ ಚಕ್ರವನ್ನು ಯಾವ ಮನುಷ್ಯ ಅನುಸರಿಸುವುದಿಲ್ಲವೋ ಅವನ ಜೀವನ ಪಾಪಮಯವಾಗುತ್ತದೆ. ಅವನು ಇಂದ್ರಿಯ ಸುಖದಲ್ಲಿ ಸಿಲುಕುತ್ತಾನೆ ಪಾರ್ಥ, ಆ ಜೀವನ ವ್ಯರ್ಥ. ॥ ೧೬ ॥

ಆದರೆ ಯಾವ ಮನುಷ್ಯ ಆತ್ಮದೊಂದಿಗೆ ಕ್ರೀಡಿಸುತ್ತ, ಅದರಿಂದಲೇ ತೃಪ್ತನಾಗಿ, ಆತ್ಮದಲ್ಲಿಯೆ ಆನಂದ ಪಡೆಯುತ್ತಾನೋ ಅವನು ಏನೂ ಮಾಡಬೇಕಾದುದಿಲ್ಲ. ॥ ೧೭ ॥

ಮಾಡಿದರೂ, ಮಾಡದಿದ್ದರೂ ಅದರಲ್ಲಿ ಅವನಿಗೇನೂ ಸ್ವಾರ್ಥವಿಲ್ಲ ಭೂತಮಾತ್ರದಲ್ಲಿ ಅವನಿಗೆ ಸ್ವಾರ್ಥವೇನೂ ಇಲ್ಲ ಆದುದರಿಂದ ನೀನು

---

ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥ ೧೪ ॥

ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।
ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥ ೧೫ ॥

ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥ ೧೬ ॥

ಯಸ್ತ್ವಾತ್ಮರತಿರೇವಸ್ಯಾದಾತ್ಮತೃಪ್ತಶ್ಚ ಮಾನವಃ ।
ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥ ೧೭ ॥

ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।
ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥ ೧೮ ॥

ಸಂಗರಹಿತನಾಗಿ ನಿರಂತರವೂ ಕರ್ತವ್ಯಕರ್ಮ ಮಾಡು. ನಿಸ್ಸಂಗನಾಗಿದ್ದೇ ಕರ್ಮಮಾಡುವ ಮನುಷ್ಯ ಮೋಕ್ಷವನ್ನೈದುತ್ತಾನೆ ॥ ೧೮–೧೯ ॥

ಜನಕಾದಿಗಳು ಕರ್ಮದಿಂದಲೆ ಪರಮಸಿದ್ಧಿ ಪಡೆದಿದ್ದರು ಲೋಕ ಸಂಗ್ರಹ ದೃಷ್ಟಿಯಿಂದಲೂ ನೀನು ಕರ್ಮಮಾಡಬೇಕಾದುದು ಉಚಿತ ॥ ೨೦ ॥

ಉತ್ತಮ ಪುರುಷರು ಮಾಡಿದರೆ ಇತರರೂ ಹಾಗೆಯೆ ಮಾಡುತ್ತಾರೆ. ಅವರು ತೋರುವ ಪ್ರಮಾಣವನ್ನೆ ಜನರು ಅನುಸರಿಸುತ್ತಾರೆ ॥ ೨೧ ॥

ಪಾರ್ಥ, ಮೂರು ಲೋಕಗಳಲ್ಲಿ ನಾನು ಮಾಡಬೇಕಾದುದೇನೂ ಇಲ್ಲ ಪಡೆಯತಕ್ಕ ವಸ್ತು ಯಾವುದೂ ನನಗೆ ದೊರೆಯದೆ ಇಲ್ಲ. ಆದರೂ ನಾನು ಕರ್ಮದಲ್ಲಿ ಮಗ್ನನಾಗಿರುತ್ತೇನೆ. ॥ ೨೨ ॥

ಟಿಪ್ಪಣಿ—ಸೂರ್ಯ, ಚಂದ್ರ, ಪೃಥ್ವ್ಯಾದಿಗಳ ಬಿಡುವಿಲ್ಲದ, ತಪ್ಪದೆ ನಡೆಯುತ್ತಿರುವ ಗತಿ ಪರಮೇಶ್ವರನ ಕರ್ಮವನ್ನು ಸೂಚಿಸುತ್ತದೆ ಈ ಕರ್ಮ ಮಾನಸಿಕವಲ್ಲ, ಶಾರೀರಕವೇ. ನಿರಾಕಾರನಾಗಿದ್ದರೂ ಈಶ್ವರ ಶಾರೀರಕ ಕರ್ಮ ಮಾಡುತ್ತಾನೆ—ಅದು ಹೇಗೆ ಎನ್ನಬಹುದು. ಈ ಶಂಕೆಗೆ ಅವಕಾಶವೇ ಇಲ್ಲ ಏಕೆಂದರೆ ಆತ ಅಶರೀರಿಯಾಗಿದ್ದರೂ ಶರೀರಿಯ ಹಾಗೆ ಕೆಲಸಮಾಡಬಲ್ಲ ಈ ಕಾರಣದಿಂದಲೆ ಆತ ಕರ್ಮ ಮಾಡು

---

**ತಸ್ಮಾದಸಕ್ತಸ್ಸತತಂ ಕಾರ್ಯಂ ಕರ್ಮ ಸಮಾಚರ ।**
**ಅಸಕ್ತೋಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥ ೧೯ ॥**

**ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।**
**ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥ ೨೦ ॥**

**ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೨೧ ॥**

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥ ೨೨ ॥**

ತ್ತಿದ್ದರೂ ಅಕರ್ಮಿ, ಅಲಿಪ್ತ. ಈಶ್ವರನ ಪ್ರತಿಯೊಂದು ಕೃತಿಯೂ ಯಂತ್ರದ ಹಾಗೆ ಕೆಲಸಮಾಡುತ್ತಿರುವಂತೆಯೆ ಮನುಷ್ಯನೂ ಕೂಡ ಬುದ್ಧಿಪೂರ್ವಕವಾಗಿ, ಯಂತ್ರದಂತೆ ನಿಯಮಿತ ರೂಪದಿಂದ ಕೆಲಸಮಾಡುವುದು ಯೋಗ್ಯ. ಮನುಷ್ಯ ಇದನ್ನರಿಯಬೇಕು. ಯಂತ್ರಗತಿಯನ್ನು ಅಸಡ್ಡೆ ಮಾಡಿ ಸ್ವೇಚ್ಛಾಚಾರಿಯಾಗುವುದರಲ್ಲಿ ಮನುಷ್ಯನ ವಿಶೇಷತೆ ಇಲ್ಲ ಜ್ಞಾನಪೂರ್ವಕ ಆ ಗತಿಯನ್ನು ಅನುಕರಣಮಾಡುವುದರಲ್ಲಿದೆ ಅಲಿಪ್ತನಾಗಿದ್ದು, ನಿಸ್ಸಂಗನಾಗಿ, ಯಂತ್ರದಂತೆ ಕೆಲಸಮಾಡುವುದರಿಂದ ಅವನು ಕ್ಷೀಣನಾಗಲಾರ ಕೊನೆಯ ವರೆಗೂ ಹುರುಪಿನಿಂದಿರುತ್ತಾನೆ ದೇಹದ ನಿಯಮಾನುಸಾರ ಕಾಲಕ್ಕೆ ಸರಿಯಾಗಿ ದೇಹ ನಾಶವಾಗುತ್ತದೆ ಆದರೆ ಅದರಲ್ಲಿರುವ ಆತ್ಮ ಮೊದಲಿದ್ದಂತೆಯೆ ಇರುತ್ತದೆ.

ನಾನು ತಡೆ–ಬಿಡುವುಗಳಿಲ್ಲದೆ ಸತತ ಕರ್ಮ ಮಾಡುತ್ತಿದೇನೆ ಇಲ್ಲದೆ ಇದ್ದರೆ, ಜನರು ಕೂಡ ಎಲ್ಲ ಬಗೆಯಿಂದಲೂ ನನ್ನನ್ನೇ ಅನುಸರಿಸಿಯಾರು. || ೨೩ ||

ನಾನು ಕರ್ಮಮಾಡದಿದ್ದರೆ ಈ ಲೋಕಗಳು ಭ್ರಷ್ಟವಾಗುತ್ತವೆ. ಅವ್ಯವಸ್ಥೆಗೆ ಕಾರಣನಾಗಿ ನಾನು ಈ ಪ್ರಜೆಗಳ ನಾಶಮಾಡಿದಂತಾಗುತ್ತದೆ || ೨೪ ||

ಭಾರತ, ಅಜ್ಞಾನಿಗಳು ಆಸಕ್ತರಾಗಿ ಕೆಲಸಮಾಡುವಂತೆಯೆ ಜ್ಞಾನಿಗಳು ಆಸಕ್ತಿಯಿಲ್ಲದೆ ಕೇವಲ ಲೋಕಕಲ್ಯಾಣದ ಇಚ್ಛೆಯಿಂದ ಕೆಲಸಮಾಡಬೇಕು || ೨೫ ||

---

**ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ |**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ || ೨೩ ||**

**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್ |**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ || ೨೪ ||**

**ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ |**
**ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ||೨೫||**

ಕರ್ಮದಲ್ಲಿ ಆಸಕ್ತರಾದ ಅಜ್ಞಾನಿಗಳ ಬುದ್ಧಿಯಲ್ಲಿ ಜ್ಞಾನಿಗಳು ಭೇದವನ್ನು ಹುಟ್ಟಿಸದೆ ಎಲ್ಲ ಕೆಲಸಗಳನ್ನೂ ತಾವು ಸಮತ್ವದಿಂದ ಮಾಡುತ್ತ, ಅವರೂ ಎಲ್ಲ ಕೆಲಸಗಳನ್ನೂ ಮಾಡುವಂತೆ ಪ್ರೇರಿಸಬೇಕು. || ೨೬ ||

ಪ್ರಕೃತಿಯ ಗುಣಗಳ ಮೂಲಕ ಎಲ್ಲ ಕರ್ಮವೂ ನಡೆಯುತ್ತಿದೆ. ಅಹಂಕಾರದಿಂದ ಮೂಢನಾದ ಮನುಷ್ಯ 'ನಾನೇ ಕರ್ತೃ' ಎಂದು ತಿಳಿಯುತ್ತಾನೆ || ೨೭ ||

ಮಹಾಬಾಹು, ಗುಣಕರ್ಮಗಳ ವಿಭಾಗದ ರಹಸ್ಯವನ್ನರಿತ ಪುರುಷ 'ಗುಣ ತನ್ನ ಕೆಲಸಮಾಡುತ್ತಲಿದೆ' ಎಂದು ತಿಳಿದು ಅದರಲ್ಲಿ ಆಸಕ್ತನಾಗನು. || ೨೮ ||

ಟಿಪ್ಪಣಿ—ಶ್ವಾಸೋಚ್ಛ್ವಾಸಾದಿ ಕ್ರಿಯೆಗಳು ಸಹಜವಾಗಿ ಆಗುತ್ತಿರುವುದರಿಂದ ಅದರಲ್ಲಿ ಮನುಷ್ಯ ಆಸಕ್ತನಾಗಿಲ್ಲ. ಆದರೆ ಶರೀರದ ಒಂದು ಭಾಗಕ್ಕೆ ರೋಗ ಬಂದರೆ ಮನುಷ್ಯ ಅದರ ಚಿಂತೆ ಮಾಡಬೇಕಾಗುತ್ತದೆ ಆಗ ಅವನಿಗೆ ಆ ಅಂಗದ ಅರಿವಾಗುತ್ತದೆ. ಹಾಗೆ ಸ್ವಾಭಾವಿಕ ಕರ್ಮಗಳು ತಾವಾಗಿ ನಡೆವಾಗ ಅವುಗಳಲ್ಲಿ ಆಸಕ್ತಿಯಿರುವುದಿಲ್ಲ. ಉದಾರಸ್ವಭಾವದವನಿಗೆ ತನ್ನ ಸ್ವಭಾವ ಉದಾರವೆಂಬುದೇ ಗೊತ್ತಿರುವುದಿಲ್ಲ. ದಾನ ಮಾಡದಿದ್ದರೆ ಅವನ ಮನಸ್ಸಿಗೆ ಹಿತವಿಲ್ಲ ಈ ಬಗೆಯ ಅನಾಸಕ್ತಿ ಅಭ್ಯಾಸ, ಈಶ್ವರ ಕೃಪೆಗಳಿಂದ ಮಾತ್ರ ಲಭ್ಯ.

---

**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ ।**
**ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ ಯುಕ್ತಸ್ಸಮಾಚರನ್ ||೨೬||**

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಽಹಮಿತಿ ಮನ್ಯತೇ || ೨೭ ||**

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।**
**ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ || ೨೮ ||**

ಪ್ರಕೃತಿಯ ಗುಣಗಳಿಂದ ಮೋಹಿತರಾದ ಮನುಷ್ಯರು ತ್ರಿಗುಣಗಳ ಕರ್ಮಗಳಲ್ಲಿ ಆಸಕ್ತರಾಗಿರುತ್ತಾರೆ. ಇಂಥ ಅಜ್ಞಾನಿ, ಮಂದಬುದ್ಧಿಗಳನ್ನು ಜ್ಞಾನಿಗಳು ಅಸ್ಥಿರರಾಗಿ ಮಾಡಕೂಡದು || ೨೯ ||

ಅಧ್ಯಾತ್ಮವೃತ್ತಿಯನ್ನು ಧಾರಣೆಮಾಡಿ, ಎಲ್ಲ ಕರ್ಮಗಳನ್ನೂ ನನಗೆ ಅರ್ಪಿಸಿ, ಆಸಕ್ತಿ-ಮಮತ್ವಗಳನ್ನು ಬಿಟ್ಟು ರಾಗರಹಿತನಾಗಿ ನೀನು ಯುದ್ಧ ಮಾಡು || ೩೦ ||

ಟಿಪ್ಪಣಿ—ದೇಹದಲ್ಲಿರುವ ಆತ್ಮವನ್ನು ಗುರುತಿಸಿ, ಅದನ್ನು ಪರಮಾತ್ಮನ ಅಂಶ ವೆಂದು ತಿಳಿದವನು ತಾನು ಮಾಡಿದುದನ್ನೆಲ್ಲ—ಒಡೆಯನ ಬಲದಿಂದ ಕಾರ್ಯವನ್ನು ನಿರ್ವಹಿಸಿ ಸೇವಕ ತನ್ನ ಸರ್ವಸ್ವವನ್ನೂ ಒಡೆಯನಿಗೆ ಅರ್ಪಿಸುವಂತೆ—ಪರಮಾತ್ಮನಿಗೇ ಅರ್ಪಿಸುತ್ತಾನೆ

ಶ್ರದ್ಧೆಯನ್ನಿಟ್ಟು, ದ್ವೇಷ ಬಿಟ್ಟು, ನನ್ನ ಈ ಮಾತಿನಂತೆ ಯಾರು ನಡೆಯುತ್ತಾರೋ ಅವರು ಕರ್ಮಬಂಧನದಿಂದ ಮುಕ್ತರಾಗುತ್ತಾರೆ || ೩೧ ||

ಆದರೆ ಯಾರು ನನ್ನೀ ಮಾತಿನಲ್ಲಿ ದೋಷ ಬಗೆಯುತ್ತ ನನ್ನ ಮಾತಿನಂತೆ ಆಚರಿಸರೋ ಅವರು ಜ್ಞಾನಹೀನ ಮೂರ್ಖರು ಅವರ ನಾಶ ಖಂಡಿತ, ತಿಳಿದುಕೊ || ೩೨ ||

---

ಪ್ರಕೃತೇರ್ಗುಣಸಮ್ಮೂಢಾಃ ಸಜ್ಜಂತೇ ಗುಣಕರ್ಮಸು |
ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ || ೨೯ ||

ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಽಧ್ಯಾತ್ಮಚೇತಸಾ |
ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ || ೩೦ ||

ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ |
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ || ೩೧ ||

ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್ |
ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧಿ ನಷ್ಟಾನ ಚೇತಸಃ || ೩೨ ||

ಜ್ಞಾನಿಗಳೂ ತಮ್ಮ ಸ್ವಭಾವಕ್ಕನುಸಾರವಾಗಿ ನಡೆಯುತ್ತಾರೆ. ಪ್ರಾಣಿಗಳೂ ತಮ್ಮ ತಮ್ಮ ಸ್ವಭಾವದಂತೆ ನಡೆಯುತ್ತವೆ. ಇದರಲ್ಲಿ ಒತ್ತಾಯವೇನು ಮಾಡಬಲ್ಲದು ? || ೩೩ ||

ಟಿಪ್ಪಣಿ—ಈ ಶ್ಲೋಕ ಎರಡನೆಯ ಅಧ್ಯಾಯದ ೬೧ ಅಥವಾ ೬೮ನೆ ಶ್ಲೋಕಕ್ಕೆ ವಿರೋಧವಾಗಿಲ್ಲ ಇಂದ್ರಿಯನಿಗ್ರಹ ಮಾಡುತ್ತ ಮಾಡುತ್ತ ಮನುಷ್ಯ ಸತ್ತು ಸುಣ್ಣವಾಗಬೇಕು, ಅಷ್ಟು ಮಾಡಿದರೂ ಸಫಲತೆ ಲಭಿಸದಿದ್ದರೆ, ನಿಗ್ರಹ ಅಥವಾ ಬಲಾತ್ಕಾರ ನಿರರ್ಥಕ. ಈ ಶ್ಲೋಕದಲ್ಲಿ ನಿಗ್ರಹವನ್ನು ನಿಂದಿಸಿಲ್ಲ ಸ್ವಭಾವದ ಸಾಮ್ರಾಜ್ಯವನ್ನು ತೋರಲಾಗಿದೆ. ಸುಳ್ಳೇ ತನ್ನ ಸ್ವಭಾವವೆಂದು ಯಾರು ಸುಳ್ಳು ಹೇಳುತ್ತಲೇ ಇರುತ್ತಾನೊ ಅಂಥವನಿಗೆ ಈ ಶ್ಲೋಕದ ಅರ್ಥ ತಿಳಿಯಲಾರದು. ಸ್ವಭಾವದ ವಿಚಾರ ನಮಗೆ ತಿಳಿಯದು, ಅದರ ಮೂಲ ಗೊತ್ತಾಗುವುದಿಲ್ಲ ಎಲ್ಲ ಅಭ್ಯಾಸ-ರೂಢಿಗಳೂ ಸ್ವಭಾವವಲ್ಲ. ಆತ್ಮದ ಸ್ವಭಾವ ಊರ್ಧ್ವಗಮನ ಆದುದರಿಂದ ಪತನದ ಕಡೆ ಆತ್ಮ ಹೋದರೆ ಆಗ ಅದನ್ನು ವಿರೋಧಿಸುವುದು ಕರ್ತವ್ಯ. ಮುಂದಿನ ಶ್ಲೋಕ ಇದನ್ನೇ ಸ್ಫುಟಗೊಳಿಸುತ್ತದೆ.

ತಮ್ಮ ತಮ್ಮ (ಶಬ್ದ–ಸ್ಪರ್ಶಾದಿ) ವಿಷಯಗಳಲ್ಲಿ ಇಂದ್ರಿಯಗಳಿಗೆ ರಾಗ ದ್ವೇಷ ಇದ್ದೇ ಇರುತ್ತದೆ. ಮನುಷ್ಯ ಅವಕ್ಕೆ ವಶನಾಗಕೂಡದು. ಏಕೆಂದರೆ, ಅದೇ ಮನುಷ್ಯನ ದಾರಿಯಲ್ಲಿ ಬಾಧಕ. || ೩೪ ||

ಟಿಪ್ಪಣಿ—ಕಿವಿಯ ಕೆಲಸ ಕೇಳುವುದು. ರುಚಿಸಿದುದನ್ನು ಕೇಳುವ ಇಷ್ಟ ರಾಗ; ರುಚಿಸದುದನ್ನು ಕೇಳಲು ಅನಿಷ್ಟ ದ್ವೇಷ 'ಅದು ಸ್ವಭಾವ' ಎಂದು ರಾಗದ್ವೇಷಗಳ ವಶನಾಗದೆ, ಅವನ್ನು ವಿರೋಧಿಸಬೇಕು. ಸುಖದುಃಖಗಳಿಂದ ಮುಟ್ಟಲ್ಪಡದಿರುವುದೇ ಆತ್ಮದ ಸ್ವಭಾವ. ಮನುಷ್ಯ ಈ ಸ್ವಭಾವವನ್ನು ಪಡೆಯಬೇಕು.

---

ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।
ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ || ೩೩ ||

ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।
ತಯೋರ್ನ ವಶಮಾಗಚ್ಛೇತ್ ತೌ ಹ್ಯಸ್ಯ ಪರಿಪಂಥಿನೌ || ೩೪ ||

ಪರಧರ್ಮ ಸುಲಭವಾಗಿದ್ದರೂ, ತನ್ನ ಧರ್ಮ ವಿಗುಣವಾದರೂ ಅದಕ್ಕಿಂತಲೂ ಹೆಚ್ಚು ಶ್ರೇಯಸ್ಕರ ಸ್ವಧರ್ಮದಲ್ಲಿ ಇದ್ದು ಸಾಯುವುದು ಮೇಲು; ಪರಧರ್ಮ ಭಯಾವಹ ॥ ೩೫ ॥

ಟಿಪ್ಪಣಿ—ಸಮಾಜದಲ್ಲಿ ಕಸವನ್ನು ಗುಡಿಸುವ ಧರ್ಮ ಒಬ್ಬನದಾಗಿರಬಹುದು, ಗುಮಾಸ್ತೆಗಿರಿಯ ಧರ್ಮ ಮತ್ತೊಬ್ಬನದು ಗುಮಾಸ್ತೆ ಉತ್ತಮನೆನಿಸಿಕೊಳ್ಳಲೂ ಬಹುದು ಆದರೂ ಕಸ ಗುಡಿಸುವವನು ತನ್ನ ಧರ್ಮವನ್ನು ಬಿಡುವುದರಿಂದ ಧರ್ಮ ಭ್ರಷ್ಟನಾಗುವುದಲ್ಲದೆ, ಸಮಾಜಕ್ಕೂ ಹಾನಿಯಾಗುತ್ತದೆ ಈಶ್ವರನ ಸಭೆಯಲ್ಲಿ ಇಬ್ಬರ ಸೇವೆಯ ಬೆಲೆಯನ್ನೂ ಅವರವರ ನಿಷ್ಠೆಗನುಸಾರವಾಗಿ ನಿಶ್ಚಯಿಸುತ್ತಾರೆ ಅಲ್ಲಿ ಎಲ್ಲಾ ಉದ್ಯೋಗಕ್ಕೂ ಒಂದೇ ಬೆಲೆ ಇಬ್ಬರೂ ಈಶ್ವರಾರ್ಪಣಬುದ್ಧಿಯಿಂದ ತಮ್ಮ ತಮ್ಮ ಕರ್ತವ್ಯ ಮಾಡಿದರೆ, ಇಬ್ಬರೂ ಮೋಕ್ಷಕ್ಕೆ ಸಮಾನಾಧಿಕಾರಿಗಳೇ

**ಅರ್ಜುನ :**

ವಾರ್ಷ್ಣೇಯ, ಮನುಷ್ಯ ಇಚ್ಛಿಸದಿದ್ದರೂ ಕೂಡ ಬಲಾತ್ಕಾರದಿಂದಲೋ ಎಂಬಂತೆ ಅವನು ಪಾಪಮಾಡುತ್ತಾನಲ್ಲ ಯಾರ ಪ್ರೇರಣೆಯಿಂದ? ॥ ೩೬ ॥

**ಶ್ರೀ ಭಗವಂತ :**

ರಜೋಗುಣದಿಂದ ಹುಟ್ಟಿದ ಕಾಮಕ್ರೋಧಗಳೇ ಪ್ರೇರಕ ಅವಕ್ಕೆ ತೃಪ್ತಿಯೇ ಇಲ್ಲ. ಅವು ಮಹಾಪಾಪಿಗಳು ಈ ಲೋಕದಲ್ಲಿ ಅವೇ ನಿನ್ನ ಶತ್ರುಗಳೆಂದು ತಿಳಿದುಕೊ. ॥ ೩೭ ॥

---

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ ೩೫ ॥**

**ಅರ್ಜುನ ಉವಾಚ**

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥ ೩೬ ॥**

**ಶ್ರೀ ಭಗವಾನುವಾಚ**

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥ ೩೭ ॥**

ಟಿಪ್ಪಣಿ—ನಮ್ಮ ನಿಜವಾದ ಶತ್ರುಗಳು ಒಳಗಡೆಯೆ ಇವೆ ಕಾಮವೆನ್ನಿ, ಕ್ರೋಧ ಎನ್ನಿ—ಅವೇ

ಹೊಗೆಯಿಂದ ಬೆಂಕಿ, ಕೊಳೆಯಿಂದ ಕನ್ನಡಿ, ಪರೆಯಿಂದ ಗರ್ಭ ಮುಚ್ಚಿಕೊಂಡಿರುವಂತೆ ಕಾಮಾದಿ ಶತ್ರುಗಳಿಂದ ಈ ಜ್ಞಾನ ಮುಚ್ಚಿಕೊಂಡಿದೆ || ೩೮ ||

ಕುಂತೀತನಯ, ಈ ಕಾಮರೂಪ ಅಗ್ನಿ ನಿತ್ಯಶತ್ರು ಅದನ್ನು ಎಂದಿಗೂ ತೃಪ್ತಿಗೊಳಿಸಲಾಗುವುದಿಲ್ಲ. ಅದರಿಂದ ಜ್ಞಾನಿಗಳ ಜ್ಞಾನ ಕೂಡ ಮುಸುಕಿ ಹೋಗಿದೆ - || ೩೯ ||

ಇಂದ್ರಿಯಗಳು, ಮನಸ್ಸು, ಬುದ್ಧಿ ಈ ಶತ್ರುವಿನ ವಾಸಸ್ಥಾನ. ಅವುಗಳ ಮೂಲಕ ಜ್ಞಾನವನ್ನು ಮುಸುಕಿ, ಈ ಶತ್ರು ದೇಹಿಯನ್ನು ಮೂರ್ಛಿತಗೊಳಿಸುತ್ತದೆ || ೪೦ ||

ಟಿಪ್ಪಣಿ—ಇಂದ್ರಿಯಗಳಲ್ಲಿ ಕಾಮ ತುಂಬುವುದರಿಂದ ಮನಸ್ಸು ಮಲಿನವಾಗುತ್ತದೆ, ವಿವೇಕಶಕ್ತಿ ಮಂದವಾಗುತ್ತದೆ (ಅ ೨, ಶ್ಲೋಕ ೬೨-೬೪ ನೋಡಿ.)

ಆದುದರಿಂದ, ಭರತರ್ಷಭ, ಎಲ್ಲಕ್ಕೂ ಮೊದಲು ನೀನು ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಂಡು ಜ್ಞಾನ, ಅನುಭವಗಳನ್ನು ನಾಶಗೊಳಿಸುವ ಈ ಪಾಪಿಯನ್ನು ಅವಶ್ಯವಾಗಿ ತ್ಯಜಿಸು || ೪೧ ||

---

**ಧೂಮೇನಾವ್ರಿಯತೇ ವಹ್ನಿರ್ಯಥಾಽಽದರ್ಶೋ ಮಲೇನ ಚ ।**
**ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ || ೩೮ ||**

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ || ೩೯ ||**

**ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ || ೪೦ ||**

**ತಸ್ಮಾತ್ ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ || ೪೧ ||**

ಇಂದ್ರಿಯಗಳು ಸೂಕ್ಷ್ಮ, ಅವಕ್ಕಿಂತ ಮನಸ್ಸು ಸೂಕ್ಷ್ಮ, ಮನಸ್ಸಿಗಿಂತಲೂ ಬುದ್ಧಿ ಹೆಚ್ಚು ಸೂಕ್ಷ್ಮ, ಬುದ್ಧಿಗಿಂತಲೂ ಆತ್ಮ ಅತಿಶಯ ಸೂಕ್ಷ್ಮ || ೪೨ ||

ಟಿಪ್ಪಣಿ—ಆದುದರಿಂದ ಇಂದ್ರಿಯಗಳು ವಶವಲ್ಲಿದ್ದರೆ, ಸೂಕ್ಷ್ಮ ಕಾಮವನ್ನು ಗೆಲ್ಲುವುದು ಸುಲಭ.

ಈ ಬಗೆಯಾಗಿ ಬುದ್ಧಿಗೆ ಅತೀತವಾದ ಆತ್ಮವನ್ನು ಅರಿತು, ಆತ್ಮದ ಮೂಲಕ ಮನಸ್ಸನ್ನು ವಶಪಡಿಸಿಕೊಂಡು, ಕಾಮರೂಪವಾದ ದುರ್ಜಯ ಶತ್ರುವನ್ನು ನೀನು ಸಂಹರಿಸು. || ೪೩ ||

ಟಿಪ್ಪಣಿ—ಮನುಷ್ಯ ತನ್ನ ದೇಹದಲ್ಲಿರುವ ಆತ್ಮವನ್ನರಿತರೆ ಮನಸ್ಸು ಅವನ ವಶವಾದೀತೇ ವಿನಾ ಇಂದ್ರಿಯಗಳ ವಶವಾಗದು. ಮನಸ್ಸನ್ನು ಗೆದ್ದನಂತರ ಕಾಮವೇನು ಮಾಡಬಲ್ಲದು ?

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ಕರ್ಮಯೋಗವೆಂಬ ಮೂರನೆಯ ಅಧ್ಯಾಯ

---

ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।
ಮನಸಸ್ತು ಪರಾಬುದ್ಧಿರ್ಯೋಬುದ್ಧೇಃ ಪರತಸ್ತು ಸಃ || ೪೨ ||

ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।
ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ || ೪೩ ||

ಹರಿಃ ಓಂ ತತ್ಸತ್

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಕರ್ಮಯೋಗೋ ನಾಮ ತೃತೀಯೋಽಧ್ಯಾಯಃ ||

## ಅಧ್ಯಾಯ ೪

### ಜ್ಞಾನ–ಕರ್ಮ–ಸಂನ್ಯಾಸಯೋಗ

**[ ಈ ಅಧ್ಯಾಯದಲ್ಲಿ ಮೂರನೆಯ ಅಧ್ಯಾಯದ ವಿಶೇಷ ವಿವೇಚನೆ ಅಡಗಿದೆ. ಭಿನ್ನ ಭಿನ್ನ ಪ್ರಕಾರದ ಕೆಲವು ಯಜ್ಞಗಳ ವರ್ಣನೆಯೂ ಇದೆ.]**

**ಶ್ರೀ ಭಗವಂತ :**

ಅವಿನಾಶಿಯಾದ ಈ ಯೋಗವನ್ನು ನಾನು ವಿವಸ್ವಾನ್ ಸೂರ್ಯನಿಗೆ ಹೇಳಿದೆ ಅವನು ಮನುವಿಗೆ ಹೇಳಿದ ಮನು ಇಕ್ಷ್ವಾಕುವಿಗೆ ಹೇಳಿದ. ॥ ೧ ॥

ಈ ರೀತಿ ಪರಂಪರೆಯಿಂದ ಬಂದಿರುವ, ರಾಜರ್ಷಿಗಳು ತಿಳಿದುಕೊಂಡು ಇರುವ, ಈ ಯೋಗ ದೀರ್ಘಕಾಲವಾದುದರಿಂದ ಅಳಿದುಹೋಗಿದೆ ॥ ೨ ॥

ಅದೇ ಪುರಾತನಯೋಗವನ್ನು ನಾನು ಇಂದು ನಿನಗೆ ಹೇಳಿದೇನೆ. ಏಕೆಂದರೆ, ನೀನು ನನ್ನ ಭಕ್ತ, ಈ ಯೋಗವೋ ಉತ್ತಮ ರಹಸ್ಯ. ॥ ೩ ॥

---

### ಅಥ ಚತುರ್ಥೋಽಧ್ಯಾಯಃ

---

**ಶ್ರೀ ಭಗವಾನುವಾಚ**

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।**
**ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥ ೧ ॥**

**ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥ ೨ ॥**

**ಸ ಏವಾಽಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನ ।**
**ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ॥ ೩ ॥**

**ಅರ್ಜುನ :**

ನೀನು ಈಗ ಹುಟ್ಟಿರುವವನು, ವಿವಸ್ವಾನನು ಹಿಂದೆಯೇ ಆಗಿಹೋದ. ಹೀಗಿರುವಾಗ ಈ ಯೋಗವನ್ನು ನೀನು ಹಿಂದೆಯೇ ಹೇಳಿದೆಯೆಂದು ನಾನು ಹೇಗೆ ತಿಳಿಯಲಿ? || ೪ ||

**ಶ್ರೀ ಭಗವಂತ :**

ಅರ್ಜುನ! ನನಗೂ ನಿನಗೂ ಅನೇಕ ಜನ್ಮಗಳಾಗಿವೆ ನಾನು ಅವೆಲ್ಲವನ್ನೂ ಬಲ್ಲೆ. ನೀನು ಅರಿಯೆ || ೫ ||

ನಾನು ಜನ್ಮರಹಿತ, ಅವಿನಾಶಿ, ಅಲ್ಲದೆ ಭೂತಮಾತ್ರಗಳಿಗೆ ಸ್ವಾಮಿ ಆದರೂ ನನ್ನ ಸ್ವಭಾವದ ದೆಸೆಯಿಂದ ಮಾಯಾಬಲದ ಮೂಲಕ ಜನ್ಮಧಾರಣೆ ಮಾಡುತ್ತಿದೇನೆ || ೬ ||

ಭಾರತ! ಯಾವ ಕಾಲದಲ್ಲಿ ಧರ್ಮ ಮಂದವಾಗಿ ಅಧರ್ಮ ಪ್ರಬಲವಾಗುತ್ತದೋ ಆಗ ನಾನು ಜನಿಸುತ್ತೇನೆ || ೭ ||

---

**ಅರ್ಜುನ ಉವಾಚ**

**ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।**
**ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ || ೪ ||**

**ಶ್ರೀ ಭಗವಾನುವಾಚ**

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ || ೫ ||**

**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ || ೬ ||**

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾಽತ್ಮಾನಂ ಸೃಜಾಮ್ಯಹಮ್ || ೭ ||**

ಸಾಧುಗಳ ರಕ್ಷಣೆ, ದುಷ್ಟರ ನಾಶನ, ಧರ್ಮದ ಪುನರುದ್ಧಾರಗಳಿಗಾಗಿ ಯುಗಯುಗದಲ್ಲಿಯೂ ನಾನು ಹುಟ್ಟುತ್ತೇನೆ. || ೮ ||

ಟಿಪ್ಪಣಿ—ಶ್ರದ್ಧಾವಂತನಿಗೆ ಇದು ಆಶ್ವಾಸನ, ಸತ್ಯದ–ಧರ್ಮದ–ಅವಿಚಲತೆಯ ಬಗ್ಗೆ ಮಾಡಿದ ಪ್ರತಿಜ್ಞೆ ಈ ಜಗತ್ತಿನಲ್ಲಿ ಏರಿಳಿತಗಳು ಇದ್ದೇ ಇವೆ ಆದರೆ ಕೊನೆಯಲ್ಲಿ ಧರ್ಮಕ್ಕೇ ಜಯವಾಗುತ್ತದೆ ಸಂತರಿಗೆ ನಾಶವಿಲ್ಲ ದುಷ್ಟರ ನಾಶ ನಿಶ್ಚಯ ಏಕೆಂದರೆ ಅಸತ್ಯಕ್ಕೆ ಅಸ್ತಿತ್ವವೇ ಇಲ್ಲ ಇದನ್ನು ತಿಳಿದು ಮನುಷ್ಯ ತಾನೇ ಸ್ವಯಂ ಕರ್ತನೆಂದು ಭಾವಿಸಿಕೊಂಡು ಅಭಿಮಾನವಶನಾಗಿ ಹಿಂಸೆ ಮಾಡದಿರಲಿ, ದುರಾಚಾರ ಮಾಡದಿರಲಿ. ಈಶ್ವರನ ಗಹನ ಮಾಯೆ ತನ್ನ ಕೆಲಸವನ್ನು ಮಾಡುತ್ತಲೇ ಇರುತ್ತದೆ. ಇದೇ ಅವತಾರ, ಈಶ್ವರನ ಜನ್ಮ ವಸ್ತುತಃ, ಈಶ್ವರನ ಜನ್ಮಧಾರಣೆ ಆಗುವುದೇ ಇಲ್ಲ.

ಅರ್ಜುನ, ನನ್ನ ಈ ದಿವ್ಯ ಜನ್ಮಕರ್ಮಗಳ ರಹಸ್ಯಗಳನ್ನರಿತವನು, ದೇಹತ್ಯಾಗಮಾಡಿದನಂತರ, ಮತ್ತೆ ಜನ್ಮಪಡೆಯದೆ ನನ್ನನ್ನು ಸೇರುತ್ತಾನೆ. ||೯||

ಟಿಪ್ಪಣಿ—ಏಕೆಂದರೆ, ಈಶ್ವರ ಸತ್ಯವನ್ನೇ ಗೆಲ್ಲಿಸುತ್ತಾನೆಂದು ಮನುಷ್ಯನಿಗೆ ದೃಢ ವಿಶ್ವಾಸವುಂಟಾದರೆ, ಅವನು ಸತ್ಯವನ್ನು ಬಿಡ ಧೈರ್ಯತಳೆದು ದುಃಖವನ್ನು ಸಹಿಸುತ್ತಾನೆ. ಮಮತಾರಹಿತನಾದುದರಿಂದ ಅವನು ಜನನ–ಮರಣಗಳ ಸುಳಿಯಿಂದ ಮುಕ್ತನಾಗಿ ಈಶ್ವರನ ಧ್ಯಾನವನ್ನೇ ಮಾಡುತ್ತ ಅವನಲ್ಲಿಯೇ ಲೀನನಾಗುತ್ತಾನೆ

ರಾಗ, ಭಯ, ಕ್ರೋಧರಹಿತರಾಗಿ, ನನ್ನ ಧ್ಯಾನದಲ್ಲಿಯೇ ಮಗ್ನರಾಗಿ, ನನ್ನ ಮರೆಹೊಕ್ಕು ಜ್ಞಾನರೂಪ ತಪಸ್ಸಿನಿಂದ ಪವಿತ್ರರಾದ ಅನೇಕರು ನನ್ನ ಸ್ವರೂಪವನ್ನು ಹೊಂದಿದಾರೆ. || ೧೦ ||

---

**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ |**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ || ೮ ||**

**ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ವತಃ |**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ || ೯ ||**

**ವೀತರಾಗಭಯಕ್ರೋಧಾಮನ್ಮಯಾ ಮಾಮುಪಾಶ್ರಿತಾಃ |**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ || ೧೦ ||**

ಯಾರು ಯಾವ ರೀತಿ ನನ್ನ ಆಶ್ರಯ ಪಡೆಯುತ್ತಾರೋ ಆ ರೀತಿಯ ಫಲವನ್ನೇ ನಾನು ಅವರಿಗೆ ಕೊಡುತ್ತೇನೆ ಯಾವ ರೀತಿಯಿಂದಲೇ ಆಗಲಿ, ಅರ್ಜುನ, ಮನುಷ್ಯರು ನನ್ನ ಮಾರ್ಗವನ್ನೇ ಅನುಸರಿಸುತ್ತಾರೆ ನನ್ನ ಶಾಸನಕ್ಕೆ ಅಧೀನರಾಗಿರುತ್ತಾರೆ || ೧೧ ||

ಟಿಪ್ಪಣಿ—ಅರ್ಥಾತ್ ಯಾರೂ ಈಶ್ವರೀಯ ನಿಯಮವನ್ನು ಉಲ್ಲಂಘಿಸಲಾರರು. ಬಿತ್ತಿದಂತೆ ಬೆಳೆ, ಕಾರ್ಯಕ್ಕೆ ತಕ್ಕ ಫಲ ಈಶ್ವರೀಯ ನಿಯಮಕ್ಕೆ—ಕರ್ಮನಿಯಮಕ್ಕೆ —ಅಪವಾದವಿಲ್ಲ ಎಲ್ಲರಿಗೂ ಸಮಾನವಾಗಿ, ಅವರವರ ಯೋಗ್ಯತಾನುಸಾರ ನ್ಯಾಯ ಲಭಿಸುತ್ತದೆ

ಕರ್ಮಸಿದ್ಧಿಯನ್ನಪೇಕ್ಷಿಸುವವರು ಈ ಲೋಕದಲ್ಲಿ ದೇವತೆಗಳನ್ನು ಪೂಜಿಸುತ್ತಾರೆ. ಆದುದರಿಂದ ಅವರ ಕರ್ಮಜನ್ಯ ಫಲ ಕೂಡಲೆ ಈ ಮನುಷ್ಯ ಲೋಕದಲ್ಲಿಯೇ ಲಭಿಸುತ್ತದೆ || ೧೨ ||

ಟಿಪ್ಪಣಿ—ದೇವತೆಗಳೆಂದರೆ ಈಶ್ವರನ ಅಂಶರೂಪ ಶಕ್ತಿ ಈ ಅರ್ಥದಲ್ಲಿ ಮನುಷ್ಯನೂ ದೇವತೆಯೆ ಹಬೆ, ಮಿಂಚು ಮುಂತಾದ ದೊಡ್ಡ ದೊಡ್ಡ ಶಕ್ತಿಗಳೂ ದೇವತೆಗಳೇ. ಇವುಗಳ ಆರಾಧನೆಯ ಫಲ ಒಡನೆಯೆ ಈ ಲೋಕದಲ್ಲಿಯೇ ಲಭಿಸುವುದನ್ನು ನಾವು ನೋಡುತ್ತೇವೆ. ಈ ಫಲ ಕ್ಷಣಿಕ ಇದರಿಂದ ಆತ್ಮನಿಗೆ ಸಂತೋಷವಾಗದು ಇನ್ನು ಇದರಿಂದ ಮೋಕ್ಷ ಹೇಗೆ ಲಭಿಸಬೇಕು ?

ಗುಣ, ಕರ್ಮ ವಿಭಾಗಾನುಸಾರ ನಾನು ನಾಲ್ಕು ವರ್ಣಗಳನ್ನು ಸೃಷ್ಟಿಸಿದೇನೆ ನಾನು ಅವುಗಳ ಕರ್ತೃವಾಗಿದ್ದರೂ, ನಾನು ಅವಿನಾಶಿ, ಅಕರ್ತೃ ಎಂದು ನೀನು ತಿಳಿ || ೧೩ ||

---

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ |**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ || ೧೧ ||**

**ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ |**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ || ೧೨ ||**

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ |**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ || ೧೩ ||**

ಕರ್ಮಗಳು ನನ್ನನ್ನು ಸ್ಪರ್ಶಿಸವು. ಅವುಗಳ ಫಲದಲ್ಲಿ ನನಗೆ ಲಾಲಸೆ ಇಲ್ಲ ಈ ಬಗೆಯಾಗಿ ನನ್ನನ್ನು ಚೆನ್ನಾಗಿ ಅರಿತುಕೊಂಡವನನ್ನು ಕರ್ಮ ಬಂಧಿಸದು. || ೧೪ ||

ಟಿಪ್ಪಣಿ—ಏಕೆಂದರೆ, ಕರ್ಮವನ್ನು ಮಾಡುತ್ತಿದ್ದರೂ ಅಕರ್ಮಿಯಾಗಿರುವ ಸರ್ವೋತ್ತಮ ದೃಷ್ಟಾಂತ ಮನುಷ್ಯನೆದುರಿಗಿದೆ. ಅಲ್ಲದೆ ಪ್ರತಿಯೊಂದು ಕೆಲಸಕ್ಕೂ ಈಶ್ವರನೇ ಕರ್ತ, ನಾವು ಕೇವಲ ನಿಮಿತ್ತಮಾತ್ರ ಹೀಗಿರುವಾಗ ನಾವು ಕರ್ತೃತ್ವದ ಅಭಿಮಾನವನ್ನೇಕೆ ತಳೆಯಬೇಕು ?

ಇದನ್ನು ತಿಳಿದವರಾಗಿ ಪೂರ್ವಕಾಲದ ಮುಮುಕ್ಷುಗಳು ಕರ್ಮವನ್ನು ಮಾಡಿದರು ಆದುದರಿಂದ ಪೂರ್ವಜರು ಹೇಗೆ ಯಾವಾಗಲೂ ಮಾಡುತ್ತಾ ಬಂದರೋ ನೀನೂ ಹಾಗೆ ಮಾಡು || ೧೫ ||

ಕರ್ಮವಾವುದು ಅಕರ್ಮವಾವುದು ಎಂಬೀ ವಿಷಯದಲ್ಲಿ ತಿಳಿದವರು ಕೂಡ ಮೋಹವಶರಾಗಿದಾರೆ ಈ ಕರ್ಮವಿಚಾರವನ್ನು ನಾನು ನಿನಗೆ ಸರಿಯಾಗಿ ತಿಳಿಸುತ್ತೇನೆ ಅದನ್ನರಿತು ನೀನು ಅಶುಭದಿಂದ ಪಾರಾಗುತ್ತೀ || ೧೬ ||

ಕರ್ಮ, ನಿಷಿದ್ಧ ಕರ್ಮ, ಅಕರ್ಮ—ಇವುಗಳ ಭೇದವನ್ನು ಅರಿಯ ಬೇಕು. ಕರ್ಮದ ಗತಿ ಗೂಢ. || ೧೭ ||

---

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ |**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸಬಧ್ಯತೇ || ೧೪ ||**

**ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ |**
**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಮ್ ||೧೫||**

**ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ |**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್**
**|| ೧೬ ||**

**ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ |**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ || ೧೭ ||**

ಕರ್ಮದಲ್ಲಿ ಅಕರ್ಮವನ್ನು, ಅಕರ್ಮದಲ್ಲಿ ಕರ್ಮವನ್ನು ಕಾಣುವವನು ಲೋಕದಲ್ಲಿ ಜಾಣನೆನಿಸುತ್ತಾನೆ ಅವನೇ ಯೋಗಿ. ಅವನೇ ಸಂಪೂರ್ಣ ಕರ್ಮ ಮಾಡುವವನು ॥ ೧೮ ॥

ಟಿಪ್ಪಣಿ—ಕರ್ಮವನ್ನು ಮಾಡುತ್ತಿದ್ದರೂ ಯಾರು ಕರ್ತೃತ್ವದ ಅಭಿಮಾನ ತಳೆಯುವುದಿಲ್ಲವೋ, ಅವನ ಕರ್ಮ ಅಕರ್ಮ ಬಹಿರಂಗವಾಗಿ ಕರ್ಮತ್ಯಾಗ ಮಾಡುತ್ತಿದ್ದರೂ ಮನಸ್ಸಿನಲ್ಲಿ ಯಾರು ಮಹಲನ್ನು ಕಟ್ಟುತ್ತಾನೋ ಅವನ ಅಕರ್ಮವೂ ಕರ್ಮವೆ ಪಾರ್ಶ್ವವಾಯುವಾದವನು ಇಚ್ಛಾಪೂರ್ವಕ—ಅಭಿಮಾನಪೂರ್ವಕ—ನಿಶ್ಚೇಷ್ಟ ಅಂಗವನ್ನು ಅಲ್ಲಾಡಿಸಿದಾಗಲೇ ಅದು ಅಲ್ಲಾಡುತ್ತದೆ. ಅವನು ಆ ವಾಯು ಬಡಿದ ಅಂಗವನ್ನಲ್ಲಾಡಿಸುವ ಕ್ರಿಯೆಯ ಕರ್ತೃವಾದ. ಆತ್ಮದ ಗುಣ ಅಕರ್ತೃವಿನ ಗುಣ. ಯಾರು ಭ್ರಮೆಯಿಂದ ತಾನೇ ಕರ್ತೃವೆಂದು ಭಾವಿಸುತ್ತಾನೋ ಅವನ ಆತ್ಮಕ್ಕೆ ಪಾರ್ಶ್ವವಾಯು ಆಗಿದೆಯೆಂದು ತಿಳಿಯಬೇಕು. ಅವನು ಅಭಿಮಾನವಶನಾಗಿ ಕೆಲಸ ಮಾಡುತ್ತಿದಾನೆ ಯಾರು ಕರ್ಮದ ಈ ಗತಿಯನ್ನರಿಯುತ್ತಾನೋ ಅವನೇ ಜಾಣ, ಯೋಗಿ, ಕರ್ತವ್ಯಪರಾಯಣ ಎಂದು ಭಾವಿಸಬೇಕು 'ನಾನೇ ಕರ್ತ' ಎನ್ನುವವನು ಕರ್ಮ-ವಿಕರ್ಮದ ಭೇದಗಳನ್ನು ಮರೆಯುವನಲ್ಲದೆ, ಸಾಧನೆಯ ಸಾರಾಸಾರ ವಿಚಾರವನ್ನೂ ಮಾಡ ಆತ್ಮದ ಸ್ವಾಭಾವಿಕ ಗತಿ ಊರ್ಧ್ವಮುಖ ಆದುದರಿಂದ ಮನುಷ್ಯ ನೀತಿ ಮಾರ್ಗವನ್ನು ತ್ಯಜಿಸಿದಾಗ ಅವನಲ್ಲಿ 'ಅಹಂ' ಭಾವವಿದೆ ಎನ್ನಬೇಕು ಅಭಿಮಾನರಹಿತ ಪುರುಷನ ಕರ್ಮ ಸಹಜವಾಗಿ ಸಾತ್ವಿಕವಾಗಿರುತ್ತದೆ

ಯಾರ ಸಕಲ ಸಮಾರಂಭಗಳು ಆಸೆ, ಸಂಕಲ್ಪರಹಿತವೋ ಅವನ ಕರ್ಮಗಳು ಜ್ಞಾನರೂಪವಾದ ಅಗ್ನಿಯಿಂದ ದಹಿಸಲ್ಪಡುತ್ತವೆ. ಅವನನ್ನು ಜ್ಞಾನಿಗಳು ಪಂಡಿತ ಎನ್ನುತ್ತಾರೆ ॥ ೧೯ ॥

---

**ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥ ೧೮ ॥**

**ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ ।**
**ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥ ೧೯ ॥**

ಯಾರು ಕರ್ಮಫಲ ತ್ಯಾಗಮಾಡಿದಾನೋ, ಯಾರು ಸದಾ ಸಂತುಷ್ಟನೋ, ಯಾರಿಗೆ ಯಾವ ಆಶ್ರಯದಲ್ಲೂ ಲಾಲಸೆಯಿಲ್ಲವೋ ಅಂಥವನು ಕರ್ಮದಲ್ಲಿ ನಿರತನಾಗಿದ್ದರೂ ಅವನು ಯಾವುದನ್ನೂ ಮಾಡುತ್ತಿಲ್ಲವೆನ್ನಬಹುದು. || ೨೦ ||

ಟಿಪ್ಪಣಿ—ಅರ್ಥಾತ್ ಅವನು ಕರ್ಮಬಂಧನವನ್ನು ಭೋಗಿಸಬೇಕಾಗುವುದಿಲ್ಲ

ಯಾರು ಆಶಾರಹಿತನೋ, ಯಾರ ಮನಸ್ಸು ಸ್ವಾಧೀನದಲ್ಲಿದೆಯೋ, ಯಾರು ಸರ್ವಸಂಗವನ್ನೂ ತ್ಯಜಿಸಿದಾನೋ, ಯಾರ ಕೇವಲ ಶರೀರ ಮಾತ್ರ ಕೆಲಸಮಾಡುತ್ತಿದೆಯೋ ಅವನು ಕರ್ಮವನ್ನು ಮಾಡುತ್ತಿದ್ದರೂ ದೋಷಿಯಾಗನು || ೨೧ ||

ಟಿಪ್ಪಣಿ—ಅಭಿಮಾನಪೂರ್ವಕ ಮಾಡಿದ ಪ್ರತಿಯೊಂದು ಕರ್ಮವೂ ಎಷ್ಟೇ ಸಾತ್ವಿಕವಾಗಿದ್ದರೂ ಬಂಧನಕಾರಕ ಅದನ್ನೇ ಈಶ್ವರಾರ್ಪಣಬುದ್ಧಿಯಿಂದ ಅಭಿಮಾನ ರಹಿತವಾಗಿ ಮಾಡಿದಾಗ ಅದು ಬಂಧನರಹಿತವಾಗುತ್ತದೆ ಯಾರಲ್ಲಿ 'ನಾನು' ಎಂಬುದು ಅಳಿದುಹೋಗಿದೆಯೋ ಅವನ ಶರೀರ ಮಾತ್ರ ಕೆಲಸಮಾಡುತ್ತದೆ ನಿದ್ರಿಸುವಾಗ ಮನುಷ್ಯನ ಶರೀರ ಮಾತ್ರವೆ ಕೆಲಸಮಾಡುತ್ತದೆ ಕೈದಿ ಅಸಹಾಯನಾಗಿ ಅನಿಚ್ಛೆಯಿಂದ ಉಳುತ್ತಿರುವಾಗ ಅವನ ಶರೀರ ಮಾತ್ರ ಕೆಲಸಮಾಡುತ್ತದೆ. ಯಾರು ಸ್ವೇಚ್ಛೆಯಿಂದ ಈಶ್ವರನ ಕೈದಿಯಾಗಿದಾನೋ ಅವನೂ ಅಷ್ಟೇ ಅವನ ಶರೀರ ಮಾತ್ರವೆ ಕೆಲಸಮಾಡುತ್ತದೆ ಅವನು ಸ್ವಯಂ ಶೂನ್ಯ ಅವನಿಗೆ ಪ್ರೇರಕ ಈಶ್ವರ

ಸಹಜವಾಗಿ ದೊರೆತುದರಲ್ಲಿಯೆ ಯಾರು ಸಂತುಷ್ಟನಾಗಿರುತ್ತಾನೋ, ಸುಖದುಃಖಾದಿ ದ್ವಂದ್ವಗಳಿಂದ ಯಾರು ಮುಕ್ತನೋ, ಯಾರು ದ್ವೇಷ ರಹಿತನೋ, ಸಫಲತೆ–ನಿಷ್ಫಲತೆಗಳಿಗೆ ಯಾರು ಉದಾಸೀನನೋ (ಎರಡೂ

---

**ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ।**
**ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ || ೨೦ ||**

**ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವ ಪರಿಗ್ರಹಃ ।**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ || ೨೧ ||**

**ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।**
**ಸಮಸ್ಸಿದ್ಧಾವಸಿದ್ಧೌ ಚ ಕೃತ್ವಾಽಪಿ ನ ನಿಬಧ್ಯತೇ || ೨೨ ||**

ಸಮಾನವೆಂದು ತಿಳಿದವನು) ಅವನು ಕರ್ಮ ಮಾಡುತ್ತಿದ್ದರೂ ಅದರ ಬಂಧನಕ್ಕೆ ಸಿಗುವುದಿಲ್ಲ || ೨೨ ||

ಯಾರು ಆಸಕ್ತಿರಹಿತನೋ, ಯಾರ ಚಿತ್ತ ಜ್ಞಾನಮಯವೋ, ಯಾರು ಮುಕ್ತನೋ, ಯಜ್ಞವೆಂದೇ ಯಾರು ಕರ್ಮವನ್ನು ಮಾಡುತ್ತಾನೋ ಅವನ ಕರ್ಮವೆಲ್ಲ ಲಯವಾಗುತ್ತದೆ || ೨೩ ||

(ಯಜ್ಞದಲ್ಲಿ) ಅರ್ಪಣೆ ಬ್ರಹ್ಮ ಹವಿಸ್ಸು, ಹವನಮಾಡುವ ವಸ್ತುವೂ ಬ್ರಹ್ಮವೇ ಬ್ರಹ್ಮರೂಪ ಅಗ್ನಿಯಲ್ಲಿ ಹವನಮಾಡುವವನೂ ಬ್ರಹ್ಮನೇ. ಹೀಗೆ ಕರ್ಮದೊಂದಿಗೆ ಬ್ರಹ್ಮನ ಮಿಲನವನ್ನು ಸಾಧಿಸಿದವನು ಬ್ರಹ್ಮವನ್ನೇ ಹೊಂದುತ್ತಾನೆ || ೨೪ ||

ಬೇರೆ ಕೆಲವರು ಯೋಗಿಗಳು ದೇವತೆಗಳ ಪೂಜನರೂಪ ಯಜ್ಞವನ್ನು ಮಾಡುತ್ತಾರೆ ಕೆಲವರು ಬ್ರಹ್ಮರೂಪಾಗ್ನಿಯಲ್ಲಿ ಯಜ್ಞಮಾಡಿ ಯಜ್ಞವನ್ನೇ ಹವನಮಾಡುತ್ತಾರೆ || ೨೫ ||

ಕೆಲವರು ಶ್ರವಣಾದಿ ಇಂದ್ರಿಯಗಳ ಸಂಯಮರೂಪದಿಂದ ಯಜ್ಞ ಮಾಡುತ್ತಾರೆ ಇನ್ನು ಕೆಲವರು ಶಬ್ದಾದಿವಿಷಯಗಳನ್ನು ಇಂದ್ರಿಯಾಗ್ನಿಯಲ್ಲಿ ಯಜ್ಞಮಾಡುತ್ತಾರೆ || ೨೬ ||

---

**ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ |**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ || ೨೩ ||**

**ಬ್ರಹ್ಮಾರ್ಪಣಂ ಬಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾಹುತಮ್ |**
**ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ || ೨೪ ||**

**ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ |**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ || ೨೫ ||**

**ಶ್ರೋತ್ರಾದೀನಿಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ |**
**ಶಬ್ದಾದೀನ್ ವಿಷಯಾನನ್ಯ ಇಂದ್ರಿಯಾಗ್ನಿಷು ಜುಹ್ವತಿ || ೨೬ ||**

ಟಿಪ್ಪಣಿ—ಕೇಳುವ ಕ್ರಿಯೆ ಮೊದಲಾದುವನ್ನು ಸಂಯಮ ಮಾಡುವುದು ಒಂದು ವಿಚಾರ, ಇಂದ್ರಿಯಗಳನ್ನು ಉಪಯೋಗಿಸುವಾಗಲೂ ಅವುಗಳ ವಿಷಯಗಳನ್ನು ಪ್ರಭುವಿನ ಪ್ರೀತಿಯ ಕೆಲಸಗಳಲ್ಲಿ ತೊಡಗಿಸುವುದು ಮತ್ತೊಂದು ವಿಚಾರ ಉದಾ. ಭಜನಾದಿಗಳನ್ನು ಕೇಳುವುದು. ವಸ್ತುತಃ ಎರಡೂ ಒಂದೇ

ಬೇರೆ ಕೆಲವರು ಎಲ್ಲ ಇಂದ್ರಿಯಕರ್ಮ, ಪ್ರಾಣಕರ್ಮಗಳನ್ನೂ ಜ್ಞಾನ ದೀಪದಿಂದ ಹೊತ್ತಿಸಲ್ಪಟ್ಟ ಆತ್ಮಸಂಯಮವೆಂಬ ಯೋಗಾಗ್ನಿಯಲ್ಲಿ ಹೋಮ ಮಾಡುತ್ತಾರೆ. || ೨೭ ||

ಟಿಪ್ಪಣಿ—ಎಂದರೆ, ಪರಮಾತ್ಮನಲ್ಲಿ ತಲ್ಲೀನರಾಗುತ್ತಾರೆ.

ಈ ರೀತಿ ಕೆಲವರು ಯಜ್ಞಕ್ಕೋಸುಗ ದ್ರವ್ಯವನ್ನು ಕೊಡುತ್ತಾರೆ, ಕೆಲ ವರು ತಪಸ್ಸು ಮಾಡುತ್ತಾರೆ, ಕೆಲವರು ಅಷ್ಟಾಂಗಯೋಗ ಸಾಧಕರಾಗುತ್ತಾರೆ. ಕೆಲವರು ಸ್ವಾಧ್ಯಾಯಯಜ್ಞವನ್ನೂ ಜ್ಞಾನಯಜ್ಞವನ್ನೂ ಮಾಡುತ್ತಾರೆ. ಈ ಎಲ್ಲ ಕಠಿನ ವ್ರತಧಾರಿಗಳೂ ಪ್ರಯತ್ನಶೀಲ ಯಾಜ್ಞಿಕರೆನಿಸುತ್ತಾರೆ. ||೨೮||

ಇನ್ನು ಬೇರೆ ಕೆಲವರು ಪ್ರಾಣಾಯಾಮದಲ್ಲಿ ತತ್ಪರರಾಗಿ, ಅಪಾನ ವಾಯುವನ್ನು ಪ್ರಾಣವಾಯುವಿನಲ್ಲಿ ಹವನಮಾಡುತ್ತಾರೆ, ಪ್ರಾಣವನ್ನು ಅಪಾನದಲ್ಲಿ ಹೋಮಮಾಡುತ್ತಾರೆ ಅಥವಾ ಪ್ರಾಣ, ಅಪಾನಗಳೆರಡನ್ನೂ ನಿರೋಧಿಸುತ್ತಾರೆ || ೨೯ ||

ಟಿಪ್ಪಣಿ—ಪ್ರಾಣಾಯಾಮ ರೇಚಕ, ಪೂರಕ, ಕುಂಭಕ ಎಂದು ಮೂರು ಬಗೆ. ಸಂಸ್ಕೃತದಲ್ಲಿ ಒಳಗಿನಿಂದ ಹೊರಗೆ ಹೋಗುವುದು ಪ್ರಾಣವಾಯು ಹೊರಗಿನಿಂದ ಒಳಕ್ಕೆ ಎಳೆದುಕೊಳ್ಳುವ ವಾಯುವನ್ನು ನಾವು ಪ್ರಾಣವಾಯು (ಆಕ್ಸಿಜನ್) ಎನ್ನುತ್ತೇವೆ.

---

**ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।**
**ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ || ೨೭ ||**

**ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಽಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಸ್ಸಂಶಿತವ್ರತಾಃ || ೨೮ ||**

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಽಪರೇ ।**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ || ೨೯ ||**

ಮತ್ತೊಂದು ಬಗೆಯ ಜನರು ಆಹಾರಸಂಯಮ ಮಾಡಿ ಪ್ರಾಣಗಳನ್ನೇ ಪ್ರಾಣದಲ್ಲಿ ಹೋಮಮಾಡುತ್ತಾರೆ. ಯಜ್ಞದಿಂದ ತಮ್ಮ ಪಾಪವನ್ನು ನೀಗಿಕೊಂಡ ಇವರೆಲ್ಲರೂ ಯಜ್ಞವನ್ನರಿತವರು || ೩೦ ||

ಕುರುಸತ್ತಮ ! ಯಜ್ಞದಲ್ಲುಳಿದ ಅಮೃತವನ್ನು ಭುಜಿಸುವವರು ಸನಾತನ ಬ್ರಹ್ಮವನ್ನೈದುತ್ತಾರೆ ಯಜ್ಞಮಾಡದವರಿಗೆ ಈ ಲೋಕವೇ ಇಲ್ಲ, ಇನ್ನು ಪರಲೋಕವೆಲ್ಲಿಯದು ? || ೩೧ ||

ವೇದಗಳಲ್ಲಿ ಇಂಥ ಅನೇಕ ಬಗೆಯ ಯಜ್ಞಗಳ ವರ್ಣನೆ ಮಾಡಿದೆ. ಅವೆಲ್ಲವೂ ಕರ್ಮದಿಂದ ಉತ್ಪನ್ನವಾದವು, ತಿಳಿ. ಇವೆಲ್ಲವನ್ನೂ ಅರಿತರೆ, ನೀನು ಮೋಕ್ಷವನ್ನು ಪಡೆಯುವೆ || ೩೨ ||

ಟಿಪ್ಪಣಿ—ಇಲ್ಲಿ ಕರ್ಮದ ಅರ್ಥ ವ್ಯಾಪಕವಾಗಿದೆ ಶಾರೀರಕ, ಮಾನಸಿಕ, ಆತ್ಮಿಕ ಇಂತಹ ಕರ್ಮವಿಲ್ಲದೆ ಯಜ್ಞವಾಗಲಾರದು , ಯಜ್ಞವಿಲ್ಲದೆ ಮೋಕ್ಷ ಲಭಿಸದು. ಈ ವಿಚಾರವನ್ನು ತಿಳಿದು ತದನುಸಾರ ಆಚರಣೆ ಮಾಡುವುದೇ ಈ ಯಜ್ಞಗಳನ್ನು ತಿಳಿಯುವ ವಿಧಾನ ತಾತ್ಪರ್ಯವೇನೆಂದರೆ—ಮನುಷ್ಯ ತನ್ನ ಶರೀರ, ಬುದ್ಧಿ, ಆತ್ಮಗಳ ಉಪಯೋಗವನ್ನು ಪ್ರಭುಪ್ರೀತ್ಯರ್ಥವಾಗಿ, ಲೋಕಸೇವಾರ್ಥವಾಗಿ ಮಾಡದಿದ್ದರೆ ಅಂಥವನು ಕಳ್ಳ ಅವನು ಮೋಕ್ಷಕ್ಕೆ ಯೋಗ್ಯನಾಗಲಾರ. ಯಾರು ಕೇವಲ ಬುದ್ಧಿ ಶಕ್ತಿಯನ್ನು ಉಪಯೋಗಿಸುತ್ತ, ಶರೀರ, ಆತ್ಮಗಳನ್ನು ಕದಿಯುತ್ತಾನೋ ಅವನು

---

**ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ ।**
**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ || ೩೦ ||**

**ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮಸನಾತನಮ್ ।**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ || ೩೧ ||**

**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।**
**ಕರ್ಮಜಾನ್ ವಿದ್ಧಿ ತಾನ್ ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ || ೩೨ ||**

ಪೂರ್ಣ ಯಾಜ್ಞಿಕನಲ್ಲ ಈ ಶಕ್ತಿಗಳನ್ನು ಪಡೆಯದೆ ಅವನು ಪರೋಪಕಾರಕ್ಕಾಗಿ ಉಪಯೋಗಿಸಲಾರ ಅದುದರಿಂದ ಆತ್ಮಶುದ್ಧಿಯಿಲ್ಲದೆ ಲೋಕಸೇವೆ ಅಸಂಭವ. ಶರೀರ, ಬುದ್ಧಿ, ಆತ್ಮ (ನೀತಿ)—ಈ ಮೂರನ್ನೂ ಸಮಾನವಾಗಿ ವಿಕಾಸಗೊಳಿಸಬೇಕಾದುದು ಸೇವಕನ ಕರ್ತವ್ಯ

ಪರಂತಪ! ದ್ರವ್ಯಯಜ್ಞಕ್ಕಿಂತಲೂ ಜ್ಞಾನಯಜ್ಞ ಹೆಚ್ಚು ಶ್ರೇಷ್ಠ ಏಕೆಂದರೆ ಅರ್ಜುನ, ಎಲ್ಲ ಕರ್ಮಗಳ ಪರಾಕಾಷ್ಠೆ ಜ್ಞಾನದಲ್ಲಿಯೇ || ೩೩ ||

ಟಿಪ್ಪಣಿ—ಪರೋಪಕಾರಭಾವನೆಯಿಂದ ಕೊಟ್ಟ ಧನ ಕೂಡ, ಜ್ಞಾನಪೂರ್ವಕ ಕೊಡದಿದ್ದರೆ, ಬಹುಶಃ ಹಾನಿಯನ್ನೇ ತರುತ್ತದೆ ಇದರ ಅನುಭವ ಯಾರಿಗಿಲ್ಲ? ಒಳ್ಳೆಯ ಭಾವನೆಯಿಂದ ಮಾಡುವ ಕರ್ಮಗಳಿಗೆಲ್ಲ ಅವುಗಳೊಂದಿಗೆ ಜ್ಞಾನ ಸೇರಿದಾಗಲೇ ಶೋಭೆ. ಆದುದರಿಂದ ಸರ್ವಕರ್ಮಗಳ ಪೂರ್ಣಾಹುತಿ ಜ್ಞಾನದಲ್ಲಿಯೇ

ತತ್ತ್ವವಿದರಾದ ಜ್ಞಾನಿಗಳ ಸೇವೆಮಾಡಿ, ನಮ್ರತಾಪೂರ್ವಕ ವಿವೇಕದಿಂದ ಬಾರಿಬಾರಿಗೂ (ಅವರನ್ನು) ಪ್ರಶ್ನಿಸಿ ತಿಳಿದುಕೊಳ್ಳಬೇಕು. ಅವರು ನಿನ್ನ ಜಿಜ್ಞಾಸೆಯನ್ನು ತೃಪ್ತಿಗೊಳಿಸುತ್ತಾರೆ || ೩೪ ||

ಟಿಪ್ಪಣಿ—ಜ್ಞಾನಪ್ರಾಪ್ತಿಗೆ ಪ್ರಣಿಪಾತ, ಪರಿಪ್ರಶ್ನೆ, ಸೇವೆ ಎಂಬೀ ಮೂರು ನಿಯಮಗಳಿವೆ ಈ ಯುಗದಲ್ಲಿ ಇವನ್ನು ಚೆನ್ನಾಗಿ ಗಮನದಲ್ಲಿಡಬೇಕು ಪ್ರಣಿಪಾತ ಎಂದರೆ ನಮ್ರತೆ, ವಿವೇಕ, ಪರಿಪ್ರಶ್ನವೆಂದರೆ ಬಾರಿಬಾರಿಗೂ ಕೇಳುವುದು, ಸೇವಾವಿಹೀನ ನಮ್ರತೆ ಬರೀ ಮುಖಸ್ತುತಿಯಾದೀತು. ಅಲ್ಲದೆ ಶೋಧನೆ ಮಾಡದೆ ಜ್ಞಾನ ಲಭಿಸದು ಆದುದರಿಂದ ತನಗೆ ಸರಿಯಾಗಿ ತಿಳಿಯುವವರೆಗೆ ಶಿಷ್ಯ ನಮ್ರತೆಯಿಂದ ಗುರುವನ್ನು ಪ್ರಶ್ನಿಸುತ್ತಿರಬೇಕು ಇದು ಜಿಜ್ಞಾಸೆಯ ಹೆಗ್ಗುರುತು ಇದಕ್ಕೆ ಶ್ರದ್ಧೆ ಆವಶ್ಯಕ. ಶ್ರದ್ಧೆಯಿಲ್ಲದವರಲ್ಲಿ ಹಾರ್ದಿಕ ನಮ್ರತೆಯೂ ಇರಲಾರದು ಅಂಥವರಿಂದ ಸೇವೆ ಹೇಗಾದೀತು?

---

**ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ || ೩೩ ||**

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ || ೩೪ ||**

ಈ ಜ್ಞಾನ ಲಭಿಸಿದನಂತರ, ನಿನಗೆ ಮತ್ತೆ ಮೋಹವುಂಟಾಗದು. ಆ ಜ್ಞಾನದಿಂದ ಆತ್ಮನಲ್ಲಿಯೂ (ನಿನ್ನಲ್ಲಿಯೂ) ನನ್ನಲ್ಲಿಯೂ ಭೂತಮಾತ್ರಗಳನ್ನು ನೋಡಬಲ್ಲೆ. ‖ ೩೫ ‖

ಟಿಪ್ಪಣಿ—'ಯಥಾ ಪಿಂಡೇ ತಥಾ ಬ್ರಹ್ಮಾಂಡೇ' ಎಂಬುದರ ಅರ್ಥ ಇದೇ ಆತ್ಮದರ್ಶನವಾದವನು ತನ್ನ-ಬೇರೆಯವರ ಆತ್ಮಗಳಲ್ಲಿ ಯಾವ ಭೇದವನ್ನೂ ಕಾಣಲಾರ.

ಪಾಪಿಗಳೆಲ್ಲರಲ್ಲಿ ನೀನು ಹೆಚ್ಚು ಪಾಪಿಯಾಗಿದ್ದರೂ ಜ್ಞಾನದ ದೋಣಿಯ ಮೂಲಕ ಆ ಪಾಪಗಳಿಂದ ನೀನು ಪಾರಾಗುತ್ತೀಯೆ. ‖ ೩೬ ‖

ಅರ್ಜುನ! ಉರಿಯುವ ಬೆಂಕಿ ಕಟ್ಟಿಗೆಯನ್ನು ಸುಟ್ಟು ಬೂದಿಮಾಡುವಂತೆ, ಜ್ಞಾನದ ಬೆಂಕಿ ಸಕಲ ಕರ್ಮಗಳನ್ನೂ ಭಸ್ಮಮಾಡಿಬಿಡುತ್ತದೆ ‖೩೭‖

ಜ್ಞಾನಕ್ಕಿಂತ ಪವಿತ್ರ ವಸ್ತು ಈ ಜಗತ್ತಿನಲ್ಲಿ ಮತ್ತೊಂದಿಲ್ಲ ಯೋಗದಲ್ಲಿ-ಸಮತ್ವದಲ್ಲಿ ಪೂರ್ಣತೆ ಪಡೆದ ಮಾನವ ಕಾಲಾನುಸಾರವಾಗಿ ತನ್ನಲ್ಲಿಯೆ ಆ ಜ್ಞಾನದ ದರ್ಶನ ಪಡೆಯುತ್ತಾನೆ. ‖ ೩೮ ‖

ಶ್ರದ್ಧಾವಂತ, ಈಶ್ವರಪರಾಯಣ, ಜಿತೇಂದ್ರಿಯ ಆದ ಪುರುಷ ಜ್ಞಾನವನ್ನು ಗಳಿಸುತ್ತಾನೆ ಜ್ಞಾನವನ್ನು ಪಡೆದು ತೀವ್ರವಾಗಿ ಪರಮಶಾಂತಿಯನ್ನು ಪಡೆಯುತ್ತಾನೆ ‖ ೩೯ ‖

---

**ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ ।**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ‖ ೩೫ ‖**

**ಅಪಿ ಚೇದಸಿ ಪಾಪೇಭ್ಯಸ್ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ‖ ೩೬ ‖**

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ ।**
**ಜ್ಞಾನಾಗ್ನಿಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ‖ ೩೭ ‖**

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ‖ ೩೮ ‖**

**ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಸ್ಸಂಯತೇಂದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ‖ ೩೯ ‖**

ಅಜ್ಞಾನಿಯೂ ಶ್ರದ್ಧಾವಿಹೀನನೂ ಆದ ಸಂಶಯಾತ್ಮ ನಾಶಹೊಂದುತ್ತಾನೆ. ಸಂಶಯಾತ್ಮನಿಗೆ ಈ ಲೋಕವೂ ಇಲ್ಲ, ಪರಲೋಕವೂ ಇಲ್ಲ. ಅವನಿಗೆ ಎಲ್ಲಿಯೂ ಸುಖವಿಲ್ಲ. ॥ ೪೦ ॥

ಸಮತ್ವರೂಪವಾದ ಯೋಗದಿಂದ ಕರ್ಮಗಳನ್ನು ಎಂದರೆ ಕರ್ಮಫಲವನ್ನು ಯಾರು ತ್ಯಜಿಸುತ್ತಾನೋ, ಜ್ಞಾನದಿಂದ ಸಂಶಯಗಳನ್ನು ನಾಶಗೊಳಿಸುತ್ತಾನೋ, ಅಂಥ ಆತ್ಮದರ್ಶಿಗೆ ಕರ್ಮಬಂಧನವುಂಟಾಗದು ॥ ೪೧ ॥

ಆದುದರಿಂದ ಭಾರತ, ಹೃದಯದಲ್ಲಿ ಅಜ್ಞಾನದಿಂದ ಹುಟ್ಟಿದ ಸಂಶಯವನ್ನು ಆತ್ಮಜ್ಞಾನದ ಕತ್ತಿಯಿಂದ ಕತ್ತರಿಸಿ ಯೋಗಸಮತ್ವವನ್ನಾಶ್ರಯಿಸು. ಎದ್ದು ನಿಲ್ಲು. ॥ ೪೨ ॥

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ಜ್ಞಾನ–ಕರ್ಮ–ಸಂನ್ಯಾಸಯೋಗವೆಂಬ ನಾಲ್ಕನೆಯ ಅಧ್ಯಾಯ.

---

**ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥೪೦॥**

**ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಮ್ ।**
**ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥ ೪೧ ॥**

**ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾಽಽತ್ಮನಃ ।**
**ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥ ೪೨ ॥**

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ಜ್ಞಾನಕರ್ಮಯೋಗೋ ನಾಮ ಚತುರ್ಥೋಽಧ್ಯಾಯಃ ॥**

## ಅಧ್ಯಾಯ ೫

### ಕರ್ಮಸಂನ್ಯಾಸಯೋಗ

[ಈ ಅಧ್ಯಾಯದಲ್ಲಿ ಕರ್ಮಯೋಗವಿಲ್ಲದೆ ಕರ್ಮಸಂನ್ಯಾಸವಿಲ್ಲ, ವಸ್ತುತಃ ಅವೆರಡೂ ಒಂದೇ ಎಂಬುದನ್ನು ಹೇಳಿದೆ ]

**ಅರ್ಜುನ :**

ಕೃಷ್ಣ ! ನೀನು ಒಂದು ಸಲ ಕರ್ಮಯೋಗವನ್ನು, ಒಂದು ಸಲ ಕರ್ಮ ತ್ಯಾಗವನ್ನು ಹೊಗಳುತ್ತೀಯೆ. ಇವೆರಡರಲ್ಲಿ ಯಾವುದು ಶ್ರೇಯಸ್ಕರವೋ ಸರಿಯಾಗಿ ನಿಶ್ಚಯಿಸಿ ಹೇಳು || ೧ ||

**ಶ್ರೀ ಭಗವಂತ :**

ಕರ್ಮಗಳ ತ್ಯಾಗ, ಯೋಗ ಎರಡೂ ಮೋಕ್ಷವನ್ನು ಕೊಡುತ್ತವೆ ಆದರೂ ಅವೆರಡರಲ್ಲಿ ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವೇ ಹೆಚ್ಚಿನದು || ೨ ||

---

### ಅಧ ಪಂಚಮೋಽಧ್ಯಾಯಃ

**ಅರ್ಜುನ ಉವಾಚ**

**ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ |**
**ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ || ೧ ||**

**ಶ್ರೀ ಭಗವಾನುವಾಚ**

**ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ |**
**ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ||೨||**

ಯಾವ ಮನುಷ್ಯನು ದ್ವೇಷಿಸನೋ ಏನನ್ನೂ ಇಚ್ಛಿಸನೋ ಅವನು ನಿತ್ಯಸಂನ್ಯಾಸಿಯೆಂದು ತಿಳಿ. ಸುಖದುಃಖಾದಿ ದ್ವಂದ್ವಗಳಿಂದ ಮುಕ್ತನಾದವನು ಸಹಜವಾಗಿ ಬಂಧನಗಳಿಂದ ಮುಕ್ತನಾಗುತ್ತಾನೆ. || ೩ ||

ಟಿಪ್ಪಣಿ—ಕರ್ಮತ್ಯಾಗ ಸಂನ್ಯಾಸದ ವಿಶಿಷ್ಟ ಲಕ್ಷಣವಲ್ಲ, ದ್ವಂದ್ವಾತೀತನಾಗುವುದು ಅದರ ಲಕ್ಷಣ. ಒಬ್ಬ ಕರ್ಮಮಾಡುತ್ತಿದ್ದರೂ ಸಂನ್ಯಾಸಿಯಾಗಬಲ್ಲ ಮತ್ತೊಬ್ಬ ಕರ್ಮಮಾಡದಿದ್ದರೂ ಮಿಥ್ಯಾಚಾರಿಯಾಗಬಲ್ಲ (ಅಧ್ಯಾಯ ೩, ಶ್ಲೋಕ ೬ ನೋಡಿ.)

ಅಜ್ಞಾನಿಗಳು ಸಾಂಖ್ಯಯೋಗ, ಜ್ಞಾನಕರ್ಮ ಇವೆರಡನ್ನೂ ಬೇರೆ ಬೇರೆ ಎಂದು ತಿಳಿಯುತ್ತಾರೆ, ಪಂಡಿತರು ಹಾಗೆ ಭಾವಿಸರು ಸಂಪೂರ್ಣವಾಗಿ ಸ್ಥಿರನಾದವನು ಎರಡರ ಫಲವನ್ನೂ ಹೊಂದುತ್ತಾನೆ. || ೪ ||

ಟಿಪ್ಪಣಿ—ಜ್ಞಾನಯೋಗಿ ಲೋಕಸಂಗ್ರಹದ ಕರ್ಮಯೋಗದ ವಿಶೇಷ ಫಲವನ್ನು ಸಂಕಲ್ಪಮಾತ್ರದಿಂದಲೇ ಪಡೆಯುತ್ತಾನೆ. ಕರ್ಮಯೋಗಿ ತನ್ನ ಅನಾಸಕ್ತಿಯಿಂದ ಬಾಹ್ಯಕರ್ಮವನ್ನು ಮಾಡುತ್ತಿದ್ದರೂ, ಜ್ಞಾನಯೋಗಿಯ ಶಾಂತಿಯನ್ನು ಅನಾಯಾಸವಾಗಿ ಪಡೆಯುತ್ತಾನೆ.

ಸಾಂಖ್ಯಮಾರ್ಗಿ ಪಡೆವ ಸ್ಥಾನವನ್ನೇ ಯೋಗಿಯೂ ಪಡೆಯುತ್ತಾನೆ ಸಾಂಖ್ಯ, ಯೋಗಗಳನ್ನು ಒಂದೇ ರೂಪದಿಂದ ನೋಡುವವನೇ ನಿಜವಾಗಿ ನೋಡಬಲ್ಲವನು. || ೫ ||

---

ಜ್ಞೇಯಸ್ಸನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।
ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್
ಪ್ರಮುಚ್ಯತೇ || ೩ ||

ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।
ಏಕಮಪ್ಯಾಸ್ಥಿತಸ್ಸಮ್ಯಗುಭಯೋರ್ವಿಂದತೇ ಫಲಮ್ || ೪ ||

ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।
ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ || ೫ ||

ಮಹಾಬಾಹು ಕರ್ಮಯೋಗವಿಲ್ಲದೆ ಕರ್ಮತ್ಯಾಗ ಕಷ್ಟಸಾಧ್ಯ ಆದರೆ ಸಮತ್ವವುಳ್ಳ ಮುನಿ ಶೀಘ್ರವಾಗಿ ಮೋಕ್ಷವನ್ನೈದುತ್ತಾನೆ. || ೬ ||

ಯೋಗಸಾಧನೆ ಮಾಡಿದ, ಹೃದಯವನ್ನು ಶುದ್ಧಗೊಳಿಸಿದ, ಮನಸ್ಸನ್ನೂ ಇಂದ್ರಿಯಗಳನ್ನೂ ಜಯಿಸಿದ, ಭೂತಮಾತ್ರಗಳೆಲ್ಲವನ್ನೂ ತನ್ನಂತೆ ಭಾವಿಸುವ ಮನುಷ್ಯ ಕರ್ಮಮಾಡುತ್ತಿದ್ದರೂ ಅಲಿಪ್ತನೇ || ೭ ||

ನೋಡುವಾಗ, ಕೇಳುವಾಗ, ಸ್ಪರ್ಶಮಾಡುವಾಗ, ಮೂಸುವಾಗ, ತಿನ್ನುವಾಗ, ನಡೆಯುವಾಗ, ಮಲಗಿರುವಾಗ, ಮಾತಾಡುವಾಗ, ಬಿಡುವಾಗ, ತೆಗೆದುಕೊಳ್ಳುವಾಗ, ಕಣ್ಣು ತೆರೆಯುವಾಗ, ಮುಚ್ಚುವಾಗ ಕೇವಲ ಇಂದ್ರಿಯಗಳೇ ತಮ್ಮ ತಮ್ಮ ಕೆಲಸ ಮಾಡುತ್ತಿವೆ ಎಂಬ ಭಾವನೆ ಇಟ್ಟುಕೊಂಡು, ತತ್ತ್ವಜ್ಞನಾದ ಯೋಗಿ 'ನಾನು ಏನೂ ಮಾಡುತ್ತಿಲ್ಲ' ಎಂದು ಅರಿಯಬೇಕು. || ೮-೯ ||

ಟಿಪ್ಪಣಿ—ಅಭಿಮಾನವಿರುವವರೆಗೆ ಈ ಅಲಿಪ್ತ ಸ್ಥಿತಿ ಬಾರದು. ಆದುದರಿಂದ ವಿಷಯಾಸಕ್ತನಾದ ಮನುಷ್ಯ 'ನಾನು ವಿಷಯಭೋಗ ಮಾಡುತ್ತಿಲ್ಲ ಇಂದ್ರಿಯಗಳು ತಮ್ಮ ಕೆಲಸಮಾಡುತ್ತಿವೆ' ಎಂದು ಹೇಳಿ ಬಿಡುಗಡೆಹೊಂದಲಾರ ಇಂಥ ಅನರ್ಥಕಾರಿ, ಗೀತೆಯನ್ನೂ ಅರಿಯ, ಧರ್ಮವನ್ನೂ ಅರಿಯ ಕೆಳಗಿನ ಶ್ಲೋಕ ಈ ವಿಚಾರವನ್ನು ಚೆನ್ನಾಗಿ ಸ್ಪಷ್ಟಗೊಳಿಸುತ್ತದೆ

---

**ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ || ೬ ||**

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ || ೭ ||**

**ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ || ೮ ||**

**ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ || ೯ ||**

ಯಾರು ಕರ್ಮಗಳನ್ನು ಬ್ರಹ್ಮಾರ್ಪಣಮಾಡಿ ಆಸಕ್ತಿ ಬಿಟ್ಟು ವರ್ತಿಸುವನೋ ಅವನು ನೀರಿನಲ್ಲಿರುವ ಕಮಲದಂತೆ ಪಾಪದಿಂದ ಅಲಿಪ್ತನಾಗಿರುತ್ತಾನೆ. ॥ ೧೦ ॥

ಆಸಕ್ತಿರಹಿತರಾಗಿ ಯೋಗಿಗಳು ಶರೀರದಿಂದ, ಮನದಿಂದ, ಬುದ್ಧಿಯಿಂದ, ಇಂದ್ರಿಯಗಳಿಂದಲೂ ಕೇವಲ ಆತ್ಮಶುದ್ಧಿಗಾಗಿ ಕರ್ಮ ಮಾಡುತ್ತಾರೆ ॥ ೧೧ ॥

ಸಮತಾವಂತರು ಕರ್ಮಫಲವನ್ನು ತ್ಯಜಿಸಿ ಪರಮಶಾಂತಿಯನ್ನು ಹೊಂದುತ್ತಾರೆ. ಅಸ್ಥಿರಚಿತ್ತರು ಕಾಮನಾವಶರಾಗಿ ಫಲದ ಬಲೆಗೆ ಸಿಕ್ಕಿ ಬಂಧನದಲ್ಲಿರುತ್ತಾರೆ. ॥ ೧೨ ॥

ಸಂಯಮಿಯಾದ ಪುರುಷ ಮನಸ್ಸಿನಿಂದ ಎಲ್ಲ ಕರ್ಮಗಳನ್ನೂ ತ್ಯಾಗ ಮಾಡಿ, ನವದ್ವಾರವುಳ್ಳ ನಗರದಂತಿರುವ ಶರೀರದಲ್ಲಿದ್ದರೂ, ಏನೂ ಮಾಡದೆ, ಮಾಡಿಸದೆ ಸುಖವಾಗಿರುತ್ತಾನೆ ॥ ೧೩ ॥

ಟಿಪ್ಪಣಿ—ಎರಡು ಮೂಗು, ಎರಡು ಕಿವಿ, ಎರಡು ಕಣ್ಣು, ಮಲಮೂತ್ರೇಂದ್ರಿಯಗಳೆರಡು, ಮುಖ—ಈ ರೀತಿಯಾಗಿ ಶರೀರದಲ್ಲಿ ಒಂಬತ್ತು ಮುಖ್ಯ ದ್ವಾರ ಹಾಗೆ ನೋಡಿದರೆ ಚರ್ಮದಲ್ಲಿರುವ ಅಸಂಖ್ಯ ರಂಧ್ರಗಳೂ ದ್ವಾರಗಳೇ. ಈ ದ್ವಾರಗಳ ಕಾವಲುಗಾರ ಇವುಗಳಲ್ಲಿ ಅಧಿಕಾರಿಗಳನ್ನು ಮಾತ್ರ ಬರಹೋಗಗೊಡುತ್ತ ತನ್ನ ಧರ್ಮ

---

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥ ೧೦ ॥**

**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾಽತ್ಮಶುದ್ಧಯೇ ॥ ೧೧ ॥**

**ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್ ।**
**ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥ ೧೨ ॥**

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥ ೧೩ ॥**

ವನ್ನು ಪಾಲಿಸಿಕೊಂಡಿದ್ದರೆ, ಈ ಆಗಮನ–ನಿರ್ಗಮನದಲ್ಲಿ ಅವನು ಭಾಗಿಯಲ್ಲ, ಕೇವಲ ಸಾಕ್ಷಿ ಅವನು ಯಾವುದನ್ನೂ ಮಾಡಲಿಲ್ಲ, ಮಾಡಿಸಲೂ ಇಲ್ಲ

ಜಗತ್ತಿನ ಸ್ವಾಮಿ ಕರ್ತೃತ್ವವನ್ನೂ ರಚಿಸುವುದಿಲ್ಲ, ಕರ್ಮವನ್ನೂ ನಿರ್ಮಿಸುವುದಿಲ್ಲ, ಕರ್ಮವನ್ನು, ಫಲವನ್ನು ಕೂಡಿಸುವುದಿಲ್ಲ ಇದೆಲ್ಲವನ್ನೂ ಮಾಡುವುದು ಪ್ರಕೃತಿಯೇ || ೧೪ ||

ಟಿಪ್ಪಣಿ—ಈಶ್ವರ ಕರ್ತನಲ್ಲ. ಕರ್ಮ–ನಿಯಮ ಅಚಲ, ಅನಿವಾರ್ಯ. ಯಾರೇ ಆಗಲಿ, ತಾನು ಮಾಡಿದ್ದನ್ನು ಉಣ್ಣಬೇಕು. ಇದರಲ್ಲಿ ಈಶ್ವರನ ಮಹಾದಯೆ, ನ್ಯಾಯ ವಿದ್ಯಮಾನವಾಗಿದೆ ಶುದ್ಧ ನ್ಯಾಯದಲ್ಲಿ ಶುದ್ಧ ದಯೆಯಿದೆ ನ್ಯಾಯವಿರೋಧಿಯಾದ ದಯೆ ದಯೆಯಲ್ಲ, ಕ್ರೌರ್ಯ. ಆದರೆ ಮನುಷ್ಯ ತ್ರಿಕಾಲದರ್ಶಿಯಲ್ಲ ಆದುದರಿಂದ ಅವನಿಗೆ ದಯೆ–ಕ್ಷಮೆಗಳೇ ನ್ಯಾಯ ಅವನು ಸ್ವಯಂ ನಿರಂತರವೂ ನ್ಯಾಯಪಾತ್ರ, ಕ್ಷಮಾಯಾಚಕ ಕ್ಷಮೆಯಿಂದಲೆ ಅವನು ಪರರಿಗೆ ನ್ಯಾಯ ಮಾಡಬಲ್ಲ ಕ್ಷಮಾಗುಣ ಪಡೆದಮೇಲೆಯೆ ಕೊನೆಗೆ ಅವನು ಅಕರ್ತ–ಯೋಗಿ–ಸಮತಾನಂತ–ಕರ್ಮಕುಶಲ ಆಗುತ್ತಾನೆ.

ಈಶ್ವರ ಯಾರ ಪಾಪವನ್ನಾಗಲಿ ಪುಣ್ಯವನ್ನಾಗಲಿ ಹೊತ್ತುಕೊಳ್ಳುವುದಿಲ್ಲ ಜ್ಞಾನದ ಮೇಲೆ ಅಜ್ಞಾನ ಮುಸುಕಿರುತ್ತದೆ. ಆದರಿಂದ ಜನರು ಮೋಹದಲ್ಲಿ ಬೀಳುತ್ತಾರೆ. || ೧೫ ||

ಟಿಪ್ಪಣಿ—ಅಜ್ಞಾನವಶರಾಗಿ 'ನಾನು ಮಾಡುತ್ತೇನೆ' ಎಂಬ ವೃತ್ತಿಯಿಂದ ಮನುಷ್ಯರು ತಾವು ಕರ್ಮಬಂಧನದಲ್ಲಿ ಸಿಲುಕಿದರೂ ಒಳ್ಳೆಯ–ಕೆಟ್ಟ ಫಲಗಳ ಆರೋಪವನ್ನು ಈಶ್ವರನ ಮೇಲೆ ಹೊರಿಸುತ್ತಾರೆ ಇದೇ ಮೋಹಜಾಲ

---

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।**
**ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ || ೧೪ ||**

**ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ ।**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ || ೧೫ ||**

ಆದರೆ ಆತ್ಮಜ್ಞಾನದ ಮೂಲಕ ಯಾರ ಅಜ್ಞಾನ ನಾಶವಾಗಿದೆಯೋ ಅವನು ಸೂರ್ಯನಂತೆ ಪ್ರಕಾಶಮಯವಾದ ಜ್ಞಾನದ, ಪರಮತತ್ತ್ವದ, ದರ್ಶನ ಹೊಂದುತ್ತಾನೆ. || ೧೬ ||

ಜ್ಞಾನದ ಮೂಲಕ ಪಾಪವನ್ನು ತೊಳೆದುಕೊಂಡು, ಈಶ್ವರನ ಧ್ಯಾನ ಮಾಡುತ್ತ ತನ್ಮಯರಾಗಿ, ಅದರಲ್ಲೇ ಸ್ಥಿರವಾಗಿದ್ದು, ಅದನ್ನೇ ಸರ್ವಸ್ವವೆಂದು ಭಾವಿಸುವವರು ಮೋಕ್ಷವನ್ನೈದುತ್ತಾರೆ || ೧೭ ||

ವಿದ್ಯಾವಂತ-ವಿನಯವಂತ ಆದ ಬ್ರಾಹ್ಮಣನಲ್ಲಿಯೂ, ಹಸು, ಆನೆ, ನಾಯಿಗಳಲ್ಲಿಯೂ, ನಾಯಿಯನ್ನು ತಿನ್ನುವ ಮನುಷ್ಯರಲ್ಲಿಯೂ ಜ್ಞಾನಿಗಳು ಸಮದೃಷ್ಟಿಯನ್ನಿಡುತ್ತಾರೆ. || ೧೮ ||

ಟಿಪ್ಪಣಿ—ಎಲ್ಲರಿಗೂ ಅವರವರ ಆವಶ್ಯಕತಾನುಸಾರ ಸೇವೆಮಾಡುತ್ತಾರೆ. ಬ್ರಾಹ್ಮಣ-ಚಂಡಾಲರಲ್ಲಿ ಸಮಭಾವವಿಡುವರೆಂದರೆ, ಬ್ರಾಹ್ಮಣನಿಗೆ ಹಾವು ಕಚ್ಚಿದಾಗ ಪ್ರೇಮಭಾವದಿಂದ ಜ್ಞಾನಿಗಳು ಹೇಗೆ ಕಡಿದ ಸ್ಥಳವನ್ನು ಹೀರಿ ಅವನನ್ನು ವಿಷಮುಕ್ತನಾಗಿ ಮಾಡಲೆತ್ನಿಸುವರೊ ಹಾಗೆಯೆ ಚಂಡಾಲನಿಗೆ ಹಾವು ಕಡಿದಾಗಲೂ ಅವನ ವಿಷವನ್ನು ನಿವಾರಿಸುವ ಪ್ರಯತ್ನವನ್ನು ಮಾಡುತ್ತಾರೆಂದು ತಿಳಿಯಬೇಕು

ಯಾರ ಮನಸ್ಸು ಸಮತ್ವದಲ್ಲಿ ಸ್ಥಿರವಾಗಿದೆಯೋ ಅವರು ಈ ದೇಹದಲ್ಲಿದ್ದೇ ಸಂಸಾರವನ್ನು ಗೆಲ್ಲುತ್ತಾರೆ. ಬ್ರಹ್ಮನಿರ್ದೋಷವಾಗಿದೆ, ಸಮಭಾವಪೂರ್ಣವಾಗಿದೆ. ಆದುದರಿಂದ ಅವರು ಬ್ರಹ್ಮನಲ್ಲಿ ಸ್ಥಿರರಾಗುತ್ತಾರೆ || ೧೯ ||

---

**ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।**
**ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಮ್ || ೧೬ ||**

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ || ೧೭ ||**

**ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।**
**ಶುನಿ ಚೈವ ಶ್ವಪಾಕೇ ಚ ಪಂಡಿತಾಸ್ಸಮದರ್ಶಿನಃ || ೧೮ ||**

**ಇಹೈವ ತೈರ್ಜಿತಸ್ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ || ೧೯ ||**

ಟಿಪ್ಪಣಿ—ಮನುಷ್ಯ ಯಾವುದನ್ನು ಕುರಿತು ಹೇಗೆ ಚಿಂತಿಸುತ್ತಾನೋ ಹಾಗೆಯೇ ಆಗುತ್ತಾನೆ ಆದುದರಿಂದ ಸಮತ್ವವನ್ನು ಚಿಂತಿಸಿ ದೋಷರಹಿತನಾಗಿ, ಸಮತ್ವದ ಮೂರ್ತಿಯಾದ ನಿರ್ದೋಷಬ್ರಹ್ಮವನ್ನು ಪಡೆಯುತ್ತಾನೆ

ಯಾರ ಬುದ್ಧಿ ಸ್ಥಿರವಾಗಿದೆಯೋ, ಯಾರ ಮೋಹ ನಷ್ಟವಾಗಿದೆಯೋ, ಯಾರು ಬ್ರಹ್ಮವನ್ನು ಅರಿತು ಬ್ರಹ್ಮಪರಾಯಣನಾಗಿದಾನೆಯೋ ಅವನು ಇಷ್ಟಾರ್ಥವನ್ನು ಪಡೆದರೆ ಸುಖ ಪಡ ಅಪ್ರಿಯವಾದರೆ ದುಃಖ ಪಡ ॥ ೨೦ ॥

ಬಾಹ್ಯ ವಿಷಯಗಳಲ್ಲಿ ಆಸಕ್ತಿಯಿಲ್ಲದ ಪುರುಷ ಆತ್ಮದಲ್ಲಿ ಯಾವ ಆನಂದವನ್ನು ಉಪಭೋಗಿಸುತ್ತಾನೋ ಅದೇ ಅಕ್ಷಯ ಆನಂದವನ್ನು ಬ್ರಹ್ಮ ಪರಾಯಣ ಪುರುಷನೂ ಅನುಭವಿಸುತ್ತಾನೆ ॥ ೨೧ ॥

ಟಿಪ್ಪಣಿ—ಅಂತರ್ಮುಖಿಯಾದವನೇ ಈಶ್ವರಸಾಕ್ಷಾತ್ಕಾರ ಪಡೆದು ಪರಮ ಆನಂದಹೊಂದುತ್ತಾನೆ ವಿಷಯಗಳಿಂದ ನಿವೃತ್ತರಾಗಿ ಕರ್ಮಮಾಡುವುದು, ಬ್ರಹ್ಮ ಸಮಾಧಿಯಲ್ಲಿ ನಿರತರಾಗಿರುವುದು—ಇವೆರಡೂ ಭಿನ್ನವಸ್ತುಗಳಲ್ಲ ಒಂದೇ ವಸ್ತುವನ್ನು ನೋಡುವ ಎರಡು ಬಗೆಯ ದೃಷ್ಟಿ , ಒಂದೇ ನಾಣ್ಯದ ಎರಡು ಪಕ್ಕಗಳಂತೆ

ವಿಷಯಜನ್ಯ ಭೋಗಗಳು ಅವಶ್ಯವಾಗಿಯೂ ದುಃಖಕ್ಕೆ ಕಾರಣ. ಕೌಂತೇಯ, ಅದಕ್ಕೆ ಆದಿ–ಅಂತ್ಯ ಇದೆ. ತಿಳಿದವರು ಇವುಗಳಲ್ಲಿ ತೊಡಗರು ॥ ೨೨ ॥

---

ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ
ಚಾಪ್ರಿಯಮ್ ।
ಸ್ಥಿರಬುದ್ಧಿರಸಮ್ಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥ ೨೦ ॥

ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್ ।
ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯಮಶ್ನುತೇ ॥ ೨೧ ॥

ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।
ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥ ೨೨ ॥

ದೇಹತ್ಯಾಗಕ್ಕೆ ಮುಂಚೆಯೆ ಈ ದೇಹದಿಂದಲೇ ಕಾಮ–ಕ್ರೋಧಗಳ ವೇಗವನ್ನು ಸಹಿಸುವ ಶಕ್ತಿ ಪಡೆದ ಮನುಷ್ಯ ಸಮತ್ವವನ್ನು ಹೊಂದಿದಾನೆ ಅವನೇ ಸುಖಿ || ೨೩ ||

ಟಿಪ್ಪಣಿ—ಪ್ರಾಣವಿಲ್ಲದ ಶರೀರಕ್ಕೆ ಇಚ್ಛೆ, ದ್ವೇಷ, ಸುಖ, ದುಃಖ ಉಂಟಾಗದು ಅದರಂತೆ, ಬದುಕಿದ್ದರೂ ಹೆಣದಂತೆ ಯಾರು ಜಡಭರತನ ಹಾಗೆ ದೇಹಾತೀತನಾಗಿ ದಾನೆಯೋ ಅವನು ಈ ಜಗತ್ತಿನಲ್ಲಿ ವಿಜಯಿ ಅವನು ನಿಜವಾದ ಸುಖವನ್ನರಿತವನು

ಆಂತರಿಕ ಆನಂದವನ್ನು ಹೊಂದಿದ, ಅಂತಶ್ಶಾಂತಿಯುಳ್ಳ ಅಂತರ್ಜ್ಞಾನ ವುಳ್ಳ ಆ ಬ್ರಹ್ಮರೂಪಿಯಾದ ಯೋಗಿ ಬ್ರಹ್ಮನಿರ್ವಾಣವನ್ನೈದುತ್ತಾನೆ. || ೨೪ ||

ಯಾರ ಪಾಪಗಳು ನಾಶವಾಗಿವೆಯೋ, ಯಾರ ಸಂಶಯಗಳು ದೂರ ವಾಗಿವೆಯೋ, ಯಾರಿಗೆ ತಮ್ಮ ಮನಸ್ಸಿನಮೇಲೆ ಅಧಿಕಾರವಿದೆಯೋ, ಯಾರು ಪ್ರಾಣಿಮಾತ್ರಗಳ ಹಿತದಲ್ಲಿಯೆ ನಿರತರೋ ಅಂಥ ಋಷಿಗಳು ಬ್ರಹ್ಮನಿರ್ವಾಣ ವನ್ನು ಹೊಂದುತ್ತಾರೆ. || ೨೫ ||

ಯಾರು ಆತ್ಮಜ್ಞಾನ ಪಡೆದಿದಾರೋ, ಯಾರು ಕಾಮಕ್ರೋಧಗಳನ್ನು ಗೆದ್ದಿದಾರೋ, ಯಾರು ಮನಸ್ಸನ್ನು ವಶಪಡಿಸಿಕೊಂಡಿದಾರೋ, ಅಂಥ ಋಷಿಗಳಿಗೆ ಸರ್ವತ್ರ ಬ್ರಹ್ಮನಿರ್ವಾಣ ಲಭಿಸುತ್ತದೆ || ೨೬ ||

---

**ಶಕ್ನೋತೀಹೈವ ಯಃ ಸೋಢುಂ ಪ್ರಾಕ್ ಶರೀರವಿಮೋಕ್ಷಣಾತ್ |**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಸ್ಸ ಸುಖೀ ನರಃ || ೨೩ ||**

**ಯೋಽಂತಸ್ಸುಖೋಽಂತರಾರಾಮಸ್ತಥಾಂತರ್ಜ್ಯೋತಿರೇವ ಯಃ |**
**ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ || ೨೪ ||**

**ಲಭಂತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ |**
**ಛಿನ್ನದ್ವೈಧಾ ಯತಾತ್ಮಾನಸ್ಸರ್ವಭೂತಹಿತೇ ರತಾಃ || ೨೫ ||**

**ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ |**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ || ೨೬ ||**

ಹೊರಗಣ ವಿಷಯಭೋಗಗಳನ್ನು ಬಹಿಷ್ಕರಿಸಿ, ದೃಷ್ಟಿಯನ್ನು ಎರಡು ಹುಬ್ಬುಗಳ ಮಧ್ಯೆ ಸ್ಥಿರವಾಗಿ ನಿಲ್ಲಿಸಿ, ಮೂಗಿನ ರಂಧ್ರಗಳ ಮೂಲಕ ಹೋಗಿ ಬರುವ ಪ್ರಾಣ–ಅಪಾನ ವಾಯುಗಳ ಗತಿಯನ್ನು ಒಂದೇ ಸಮವಾಗಿಟ್ಟುಕೊಂಡು, ಇಂದ್ರಿಯ–ಮನಸ್ಸು–ಬುದ್ಧಿಗಳನ್ನು ಸ್ವಾಧೀನದಲ್ಲಿಟ್ಟುಕೊಂಡು, ಇಚ್ಛೆ–ಭಯ–ಕ್ರೋಧಗಳಿಲ್ಲದೆ, ಮೋಕ್ಷಪರಾಯಣನಾಗಿರುವ ಮುನಿ ನಿರಂತರ ಮುಕ್ತ ॥ ೨೭–೨೮ ॥

ಟಿಪ್ಪಣಿ—ಒಳಗಿನಿಂದ ಹೊರಗೆ ಬರುವುದು ಪ್ರಾಣವಾಯು. ಹೊರಗಿನಿಂದ ಒಳಗೆ ಹೋಗುವುದು ಅಪಾನವಾಯು ಈ ಶ್ಲೋಕದಲ್ಲಿ ಪ್ರಾಣಾಯಾಮಾದಿ ಯೌಗಿಕ ಕ್ರಿಯೆಗಳ ಸಮರ್ಥನವಿದೆ ಪ್ರಾಣಾಯಾಮಾದಿಗಳು ಬಾಹ್ಯ ಕ್ರಿಯೆಗಳು ಶರೀರವನ್ನು ಸ್ವಸ್ಥವಾಗಿಡುವುದು, ಅದನ್ನು ಪರಮಾತ್ಮನ ವಾಸಕ್ಕೆ ಯೋಗ್ಯ ಮಂದಿರವಾಗಿ ಮಾಡುವುದು—ಇಷ್ಟೇ ಅದರ ಉಪಯೋಗ ಸಾಮಾನ್ಯ ವ್ಯಾಯಾಮಗಳಿಂದ ಭೋಗಿಗೆ ಯಾವ ಉದ್ದೇಶ್ಯಸಾಧನೆಯಾಗುತ್ತದೋ, ಯೋಗಿಗೆ ಅದೇ ಉದ್ದೇಶ್ಯಸಾಧನೆ ಪ್ರಾಣಾಯಾಮಗಳಿಂದ ಸಿದ್ಧಿಸುತ್ತದೆ ವ್ಯಾಯಾಮಾದಿಗಳು ಭೋಗಿಯ ಇಂದ್ರಿಯಗಳನ್ನು ಉತ್ತೇಜನಗೊಳಿಸಲು ಸಹಾಯಕ ಪ್ರಾಣಾಯಾಮಾದಿಗಳು ಶರೀರವನ್ನು ನಿರೋಗವಾಗಿಯೂ ಗಟ್ಟಿಯಾಗಿಯೂ ಮಾಡಿದರೂ, ಅವನ ಇಂದ್ರಿಯಗಳನ್ನು ಶಾಂತವಾಗಿರಿಸಲು ಸಹಾಯಕ ಈಗಿನ ಕಾಲದಲ್ಲಿ ಪ್ರಾಣಾಯಾಮಾದಿ ವಿಧಿಗಳು ಕೆಲವರಿಗೆ ಮಾತ್ರ ಗೊತ್ತಿದೆ ಅವರಲ್ಲಿಯೂ ಸ್ವಲ್ಪ ಜನ ಮಾತ್ರವೇ ಅವುಗಳ ಸದುಪಯೋಗಮಾಡುತ್ತಾರೆ ಇಂದ್ರಿಯ, ಮನಸ್ಸು, ಬುದ್ಧಿಗಳನ್ನು ಸ್ವಲ್ಪವಾದರೂ ಸ್ವಾಧೀನಪಡಿಸಿಕೊಂಡವರಿಗೆ, ಮೋಕ್ಷಪರಾಯಣರಿಗೆ, ರಾಗದ್ವೇಷಾದಿಗಳನ್ನು ಗೆದ್ದು ಭಯವನ್ನು ತ್ಯಜಿಸಿದವರಿಗೆ, ಪ್ರಾಣಾಯಾಮಾದಿಗಳು ಪ್ರಯೋಜನಕರ, ಸಹಾಯಕ. ಅಂತಶ್ಶೌಚಹೀನ ಪ್ರಾಣಾಯಾಮಾದಿಗಳು ಬಂಧನದ ಕಾರಣವಾಗಿ ಮನುಷ್ಯನನ್ನು ಮೋಹಕೂಪದಲ್ಲಿ ಬಹಳ ಆಳಕ್ಕೆ ಒಯ್ಯಬಲ್ಲವು. ಒಯ್ಯುತ್ತವೆ ಎಂಬುದು ಬಹುಜನರ ಅನುಭವ ಆದುದರಿಂದ ಯೋಗೀಂದ್ರ ಪತಂಜಲಿ ಯಮನಿಯಮಗಳಿಗೆ ಪ್ರಥಮ ಸ್ಥಾನವನ್ನಿತ್ತು, ಅವುಗಳ ಸಾಧಕರಿಗೇ ಪ್ರಾಣಾಯಾಮಾದಿಗಳು ಮೋಕ್ಷಮಾರ್ಗದಲ್ಲಿ ಸಹಾಯಕ ಎಂದು ಹೇಳಿದಾರೆ.

ಯಮ ಐದು ಬಗೆ—ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ; ನಿಯಮವೂ ಐದು ಬಗೆ—ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ, ಈಶ್ವರಪ್ರಣಿಧಾನ.

---

**ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ ।**
**ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ॥ ೨೭ ॥**

ಯಜ್ಞ–ತಪಸ್ಸುಗಳ ಭೋಕ್ತೃ, ಸರ್ವಲೋಕಮಹೇಶ್ವರ, ಭೂತಮಾತ್ರಗಳ ಹಿತಕಾರಿ ಎಂದು ನನ್ನನ್ನು ತಿಳಿದು (ಮುನಿ) ಶಾಂತಿಹೊಂದುತ್ತಾನೆ || ೨೯ ||

ಟಿಪ್ಪಣಿ—ಈ ಅಧ್ಯಾಯದಲ್ಲಿ ಹದಿನಾಲ್ಕು, ಹದಿನೈದು ಹಾಗೂ ಎರಡನೆಯ ಶ್ಲೋಕಗಳಿಗೆ ಈ ಶ್ಲೋಕ ವಿರೋಧವೆಂದು ಭಾವಿಸಬಾರದು ಈಶ್ವರ ಸರ್ವಶಕ್ತಿವಂತನಾದುದರಿಂದ ಕರ್ತ–ಅಕರ್ತ, ಭೋಕ್ತೃ–ಅಭೋಕ್ತೃ—ಹೀಗೆ ಬೇಕಾದುದು ಆಗಿರಬಹುದು, ಆಗದೆಯೂ ಇರಬಹುದು ಆ ವಿಚಾರ ಅವರ್ಣನೀಯ. ಮನುಷ್ಯನ ಭಾಷೆಗೆ ಅದು ಅತೀತ. ಆದುದರಿಂದ ಅವನಲ್ಲಿ ಪರಸ್ಪರ ವಿರುದ್ಧ ಗುಣ–ಶಕ್ತಿಗಳನ್ನು ಆರೋಪಿಸಿಯೂ ಕೂಡ ಮನುಷ್ಯ ಅವನನ್ನು ದರ್ಶಿಸುವ ಆಸೆಯಿಟ್ಟುಕೊಳ್ಳುತ್ತಾನೆ

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ಕರ್ಮಸಂನ್ಯಾಸಯೋಗವೆಂಬ ಐದನೆಯ ಅಧ್ಯಾಯ

---

**ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ |**
**ವಿಗತೇಚ್ಛಾಭಯಕ್ರೋಧೋ ಯಸ್ಸದಾ ಮುಕ್ತ ಏವ ಸಃ || ೨೮ ||**

**ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ |**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ || ೨೯ ||**

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ಕರ್ಮಸಂನ್ಯಾಸಯೋಗೋ ನಾಮ ಪಂಚಮೋಽಧ್ಯಾಯಃ ||**

## ಅಧ್ಯಾಯ ೬

## ಧ್ಯಾನಯೋಗ

**[ಈ ಅಧ್ಯಾಯದಲ್ಲಿ ಯೋಗಸಾಧನೆಗೆ, ಸಮತ್ವಪ್ರಾಪ್ತಿಗೆ ಕೆಲವು ಸಾಧನಗಳನ್ನು ಹೇಳಲಾಗಿದೆ.]**

**ಶ್ರೀ ಭಗವಂತ :**

ಕರ್ಮಫಲವನ್ನು ಆಶ್ರಯಿಸದೆ ವಿಹಿತ (ಕರ್ತವ್ಯ) ಕರ್ಮವನ್ನು ಮಾಡುವ ಮನುಷ್ಯನೇ ಸಂನ್ಯಾಸಿ, ಅವನೇ ಯೋಗಿ, ಅಗ್ನಿಯನ್ನು, ಎಲ್ಲಾ ಬಗೆಯ ಕ್ರಿಯೆಗಳನ್ನು ತ್ಯಾಗಮಾಡಿ ಕುಳಿತವನಲ್ಲ. ॥ ೧ ॥

ಟಿಪ್ಪಣಿ—ಅಗ್ನಿಯೆಂದರೆ ಸಾಧನಮಾತ್ರವೆಂದು ಅರ್ಥ ಅಗ್ನಿಯ ಮೂಲಕ ಹೋಮವಾಗುತ್ತಿದ್ದಾಗ ಅಗ್ನಿಯು ಆವಶ್ಯಕತೆಯಿತ್ತು. ಈ ಯುಗದಲ್ಲಿ ರಾಟೆ ಸೇವೆಯು ಸಾಧನವಾಗಿದೆ ಅದರ ತ್ಯಾಗದಿಂದ ಯಾರೂ ಸಂನ್ಯಾಸಿಯಾಗಲಾರ

ಪಾಂಡವ! ಸಂನ್ಯಾಸವೇ ಯೋಗ ಎಂದು ನೀನು ತಿಳಿದುಕೊ ಯಾರು ಮನಸ್ಸಿನ ಸಂಕಲ್ಪಗಳನ್ನು ಬಿಟ್ಟಿಲ್ಲವೊ ಅವನು ಯೋಗಿಯಾಗಲಾರ ॥ ೨ ॥

---

## ಅಥ ಷಷ್ಠೋಽಧ್ಯಾಯಃ

**ಶ್ರೀ ಭಗವಾನುವಾಚ**

**ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥ ೧ ॥**

**ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ ।**
**ನಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥ ೨ ॥**

ಯೋಗದ ಸಾಧಕನಿಗೆ ಕರ್ಮ ಸಾಧನ. ಅದನ್ನು ಸಾಧಿಸಿದವನಿಗೆ ಶಾಂತಿ ಸಾಧನ. ॥ ೩ ॥

ಟಿಪ್ಪಣಿ—ಆತ್ಮಶುದ್ಧಿಯಾದವನಿಗೆ, ಸಮತ್ವ ಸಿದ್ಧಿಸಿದವನಿಗೆ ಆತ್ಮದರ್ಶನ ಸ್ವಾಭಾವಿಕ. ಇದರ ಅರ್ಥ, ಯೋಗಾರೂಢನಾದ ವ್ಯಕ್ತಿ ಲೋಕಸಂಗ್ರಹಕ್ಕಾಗಿಯೂ ಕರ್ಮಮಾಡಬೇಕಾಗಿಲ್ಲವೆಂದಲ್ಲ ಲೋಕಸಂಗ್ರಹದ ವಿನಾ ಅವನು ಜೀವಿಸಲಾರ ಆದುದರಿಂದ ಅವನಿಗೆ ಸೇವಾಕರ್ಮ ಮಾಡುವುದು ಸ್ವಾಭಾವಿಕವಾಗುತ್ತದೆ. ತೋರಿಕೆಗಾಗಿ ಅವನು ಯಾವುದನ್ನೂ ಮಾಡ (ಅಧ್ಯಾಯ ೩-೪, ಅಧ್ಯಾಯ ೫-೨ ಸೇರಿಸಿ ನೋಡಿ.)

ಯಾವಾಗ ಮನುಷ್ಯ ಇಂದ್ರಿಯವಿಷಯಗಳಲ್ಲಾಗಲಿ ಕರ್ಮಗಳಲ್ಲಿ ಆಗಲಿ ಆಸಕ್ತನಾಗುವನೋ, ಸರ್ವಸಂಕಲ್ಪಗಳನ್ನೂ ತ್ಯಜಿಸುವನೊ, ಆಗ ಅವನು ಯೋಗಾರೂಢನೆಂದು ಹೇಳುತ್ತಾರೆ ॥ ೪ ॥

ಆತ್ಮದ ಮೂಲಕ ಮನುಷ್ಯ ಆತ್ಮದ ಉದ್ಧಾರ ಮಾಡಬೇಕು ಅದಕ್ಕೆ ಅಧೋಗತಿ ತರಬಾರದು ಆತ್ಮವೇ ಆತ್ಮಕ್ಕೆ ಬಂಧು, ಆತ್ಮವೇ ಆತ್ಮಕ್ಕೆ ಶತ್ರು. ॥ ೫ ॥

ತನ್ನ ಬಲದಿಂದ ಮನಸ್ಸನ್ನು ಯಾರು ಗೆದ್ದಿದಾನೋ ಅವನಿಗೆ ಆತ್ಮವೇ ಬಂಧು ಆತ್ಮವನ್ನು ಸ್ವಾಧೀನಪಡಿಸಿಕೊಳ್ಳದವನು ತನಗೆ ತಾನೇ ಶತ್ರುವಿನಂತೆ ವ್ಯವಹರಿಸುತ್ತಾನೆ. ॥ ೬ ॥

---

**ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥ ೩ ॥**

**ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।**
**ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ॥ ೪ ॥**

**ಉದ್ಧರೇದಾತ್ಮನಾಽಽತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥ ೫ ॥**

**ಬಂಧುರಾತ್ಮಾಽಽತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥ ೬ ॥**

ತನ್ನ ಮನಸ್ಸನ್ನು ಗೆದ್ದು ಸಂಪೂರ್ಣ ಶಾಂತನಾದವನ ಆತ್ಮ ಶೀತೋಷ್ಣಗಳಲ್ಲಿ, ಸುಖದುಃಖಗಳಲ್ಲಿ, ಮಾನಾಪಮಾನಗಳಲ್ಲಿ ಒಂದೇ ಸಮವಾಗಿರುತ್ತದೆ. || ೭ ||

ಜ್ಞಾನಾನುಭವಗಳಿಂದ ತೃಪ್ತ, ಅವಿಚಲ, ಇಂದ್ರಿಯಜಿತ ಯಾರೋ, ಯಾರ ಮನಸ್ಸಿಗೆ ಕಲ್ಲು-ಮಣ್ಣು-ಬಂಗಾರಗಳು ಸಮಾನವೋ, ಅಂಥ ಈಶ್ವರ ಪರಾಯಣ ಮನುಷ್ಯ ಯೋಗಿ ಎನಿಸುತ್ತಾನೆ. || ೮ ||

ಹಿತೈಷಿ, ಮಿತ್ರ, ಶತ್ರು, ನಿಷ್ಪಕ್ಷಪಾತಿ, ಇಬ್ಬರ ಹಿತವನ್ನೂ ಬಯಸುವವನು, ದ್ವೇಷಪಾತ್ರ, ಬಂಧು, ಸಾಧು, ಪಾಪಿ—ಇವರೆಲ್ಲರಲ್ಲಿ ಸಮಭಾವ ಇಡುವವನು ಶ್ರೇಷ್ಠ. || ೯ ||

ಚಿತ್ತವನ್ನು ಸ್ಥಿರಗೊಳಿಸಿ, ವಾಸನೆ-ಸಂಗ್ರಹಗಳನ್ನು ತ್ಯಜಿಸಿ, ಒಬ್ಬನೇ ಏಕಾಂತದಲ್ಲಿದ್ದು, ಯೋಗಿ ನಿರಂತರವೂ ಆತ್ಮವನ್ನು ಪರಮಾತ್ಮನೊಂದಿಗೆ ಸೇರಿಸಬೇಕು || ೧೦ ||

ಪವಿತ್ರವಾದ ಸ್ಥಳದಲ್ಲಿ, ಬಹಳ ಎತ್ತರವಾಗಲಿ ಬಹಳ ಕೆಳಗಾಗಲಿ ಇರದಂತೆ, ಮೊದಲು ದರ್ಭೆ, ಮೃಗಚರ್ಮ, ವಸ್ತ್ರಗಳನ್ನು ಹಾಸಿ ತನಗಾಗಿ

---

**ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ || ೭ ||**

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ || ೮ ||**

**ಸುಹೃನ್ಮಿತ್ರಾರ್ಯುದಾಸೀನ ಮಧ್ಯಸ್ಥ ದ್ವೇಷ್ಯಬಂಧುಷು ।**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ || ೯ ||**

**ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ || ೧೦ ||**

**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೇಲಾಜಿನಕುಶೋತ್ತರಮ್ || ೧೧ ||**

ಸ್ಥಿರ ಆಸನವನ್ನು ಮಾಡಿ, ಅದರ ಮೇಲೆ ಏಕಾಗ್ರಮನಸ್ಸಿನಿಂದ ಕುಳಿತು ಚಿತ್ತವನ್ನೂ ಇಂದ್ರಿಯಗಳನ್ನೂ ಸ್ವಾಧೀನಪಡಿಸಿಕೊಂಡು, ಆತ್ಮಶುದ್ಧಿಗಾಗಿ ಯೋಗವನ್ನು ಸಾಧಿಸಬೇಕು. ॥ ೧೧–೧೨ ॥

ಶರೀರ, ಕುತ್ತಿಗೆ, ತಲೆಗಳನ್ನು ಸಮವಾಗಿ ಏಕರೇಷೆಯಲ್ಲಿ ನಿಶ್ಚಲವಾಗಿ ಹಿಡಿದು, ಅಲ್ಲಿ–ಇಲ್ಲಿ ನೋಡದೆ ತನ್ನ ನಾಸಿಕಾಗ್ರದಲ್ಲಿ ದೃಷ್ಟಿ ನೆಟ್ಟು, ಶಾಂತಿಯಿಂದ ಭಯರಹಿತನಾಗಿ, ಬ್ರಹ್ಮಚರ್ಯೆಯಲ್ಲಿ ದೃಢನಾಗಿ, ಮನಸ್ಸನ್ನು ಬಿಗಿಹಿಡಿದು, ನನ್ನಲ್ಲಿ ಪರಾಯಣನಾಗಿ, ಯೋಗಿ ನನ್ನ ಧ್ಯಾನದಲ್ಲಿ ಮಗ್ನನಾಗಿ ಕುಳಿತುಕೊಳ್ಳಬೇಕು ॥ ೧೩–೧೪ ॥

ಟಿಪ್ಪಣಿ—ನಾಸಿಕಾಗ್ರವೆಂದರೆ ಹುಬ್ಬುಗಳ ನಡುವಿನ ಭಾಗ (ಅಧ್ಯಾಯ ೫, ಶ್ಲೋಕ ೨೭) ಬ್ರಹ್ಮಚರ್ಯ ವ್ರತವೆಂದರೆ ಕೇವಲ ವೀರ್ಯಸಂಗ್ರಹ ಮಾತ್ರವಲ್ಲ, ಬ್ರಹ್ಮಪ್ರಾಪ್ತಿಗಾಗಿ ಅವಶ್ಯಕವಾದ ಅಹಿಂಸಾದಿ ಸಕಲ ವ್ರತಗಳೂ.

ಯಾರ ಮನಸ್ಸು ಹೀಗೆ ನಿಯಮಬದ್ಧವೋ ಅಂಥ ಯೋಗಿ ಆತ್ಮವನ್ನು ಪರಮಾತ್ಮನಲ್ಲಿ ಸೇರಿಸುತ್ತಾನೆ. ನನ್ನನ್ನು ಪಡೆದರೆ ಸಿಗುವ ಮೋಕ್ಷರೂಪವಾದ ಪರಮಶಾಂತಿಯನ್ನು ಅವನು ಪಡೆಯುತ್ತಾನೆ ॥ ೧೫ ॥

---

**ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।**
**ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥ ೧೨ ॥**

**ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥ ೧೩ ॥**

**ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।**
**ಮನಸ್ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥ ೧೪ ॥**

**ಯುಂಜನ್ನೇವಂ ಸದಾಽಽತ್ಮಾನಂ ಯೋಗೀ ನಿಯತಮಾನಸಃ ।**
**ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥ ೧೫ ॥**

ಅರ್ಜುನ, ಹೊಟ್ಟೆಬಾಕನಿಗಾಗಲಿ, ಉಪವಾಸಮಾಡುವವನಿಗಾಗಲಿ, ಈ ಸಮತ್ವರೂಪ ಯೋಗ ಲಭಿಸದು, ವಿಶೇಷ ನಿದ್ದೆಮಾಡುವವನಿಗೂ, ಬಹಳ ನಿದ್ದೆಗೇಡಿಗೂ ಲಭಿಸದು. ॥ ೧೬ ॥

ಆಹಾರವಿಹಾರದಲ್ಲಿಯೂ, ಬೇರೆ ಕರ್ಮಗಳಲ್ಲಿಯೂ, ನಿದ್ದೆ–ಎಚ್ಚರಗಳಲ್ಲಿಯೂ ಪರಿಮಿತಿಯುಳ್ಳ ಮನುಷ್ಯನ ಯೋಗ ದುಃಖನಾಶಕವಾಗುತ್ತದೆ. ॥ ೧೭ ॥

ಚೆನ್ನಾಗಿ ನಿಯಮಬದ್ಧವಾದ ಮನಸ್ಸು ಆತ್ಮದಲ್ಲಿ ಸ್ಥಿರವಾದಾಗ, ಮನುಷ್ಯ ಎಲ್ಲಾ ಕಾಮನೆಗಳಿಂದ ನಿಃಸ್ಪೃಹನಾಗಿ ಕುಳಿತಾಗ, ಅವನು ಯೋಗಿ ಎನ್ನುತ್ತಾರೆ. ॥ ೧೮ ॥

ಆತ್ಮವನ್ನು ಪರಮಾತ್ಮನೊಂದಿಗೆ ಬೆರಸುವ ಪ್ರಯತ್ನಮಾಡುವ ಸ್ಥಿರಚಿತ್ತನಾದ ಯೋಗಿಯ ಸ್ಥಿತಿ ಗಾಳಿಯಿಲ್ಲದ ಸ್ಥಳದಲ್ಲಿ ಅಲುಗಾಡದೆ ಉರಿಯುವ ದೀಪಕ್ಕೆ ಸಮ ॥ ೧೯ ॥

ಯೋಗದಿಂದ ಸ್ವಾಧೀನಕ್ಕೆ ಬಂದ ಮನಸ್ಸು ಎಲ್ಲಿ ಶಾಂತಿ ಹೊಂದುತ್ತದೋ, ಆತ್ಮದ ಮೂಲಕವೇ ಆತ್ಮವನ್ನು ಕಂಡು ಎಲ್ಲಿ ಮನುಷ್ಯ ಆತ್ಮವಿಚಾರ

---

**ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ ।**
**ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥ ೧೬ ॥**

**ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥ ೧೭ ॥**

**ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।**
**ನಿಸ್ಸ್ಪೃಹಸ್ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥ ೧೮ ॥**

**ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥ ೧೯ ॥**

**ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾಽತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥ ೨೦ ॥**

ದಲ್ಲಿ ಸಂತೋಷಿಸುತ್ತಾನೋ, ಇಂದ್ರಿಯಗಳಿಗೆ ದೂರವಾಗಿ, ಬುದ್ಧಿಯಿಂದ ಗ್ರಹಿಸಲ್ಪಡಲು ಯೋಗ್ಯವಾದ ಅನಂತಸುಖಗಳ ಅನುಭವ ಎಲ್ಲಿ ಆಗುತ್ತದೋ, ಎಲ್ಲಿದ್ದುಕೊಂಡು ಮನುಷ್ಯ ಮೂಲವಸ್ತುವಿನಿಂದ ಚಲಾಯಮಾನನಾಗನೋ, ಯಾವುದನ್ನು ಪಡೆದರೆ ಬೇರಾವ ಲಾಭವೂ ಹೆಚ್ಚೆಂದು ಮನುಷ್ಯ ಭಾವಿಸನೋ, ಎಲ್ಲಿ ಸ್ಥಿರವಾದ ಬಳಿಕ ಮಹಾದುಃಖಗಳಿಂದ ಅವನು ಕಂಪಿತನಾಗನೋ, ದುಃಖರಹಿತವಾದ ಆ ಸ್ಥಿತಿಯ ಹೆಸರು ಯೋಗದ ಸ್ಥಿತಿಯೆಂದು ಅರಿಯಬೇಕು. ಈ ಯೋಗ ಬೇಸರವಿಲ್ಲದೆಯೂ ದೃಢತೆಯಿಂದಲೂ ಸಾಧಿಸಲು ಯೋಗ್ಯವಾದುದು || ೨೦–೨೩ ||

ಸಂಕಲ್ಪದಿಂದ ಹುಟ್ಟುವ ಸಕಲ ಕಾಮಗಳನ್ನೂ ಸಂಪೂರ್ಣವಾಗಿ ಬಿಟ್ಟು, ಮನಸ್ಸಿನ ಮೂಲಕವೇ ಇಂದ್ರಿಯ ಸಮೂಹಗಳನ್ನು ಎಲ್ಲ ಬಗೆಯಿಂದಲೂ ಚೆನ್ನಾಗಿ ವಶಪಡಿಸಿಕೊಂಡು, ಅಚಲ ಬುದ್ಧಿಯಿಂದ ಯೋಗಿ ಮೆಲ್ಲಮೆಲ್ಲನೆ ಶಾಂತನಾಗಬೇಕು. ಮನಸ್ಸನ್ನು ಆತ್ಮದಲ್ಲಿಯೆ ನೆಟ್ಟು, ಮತ್ತಾವ ವಿಚಾರವನ್ನೂ ಮಾಡಕೂಡದು. || ೨೪–೨೫ ||

---

**ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್ ।**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ || ೨೧ ||**

**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
**ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ || ೨೨ ||**

**ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ।**
**ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ||೨೩||**

**ಸಂಕಲ್ಪಪ್ರಭವಾನ್ ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।**
**ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ || ೨೪ ||**

**ಶನೈಶ್ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ ।**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ || ೨೫ ||**

ಚಂಚಲವೂ ಅಸ್ಥಿರವೂ ಆದ ಮನಸ್ಸು ಎತ್ತೆತ್ತ ಓಡಿಹೋಗುತ್ತದೋ ಅತ್ತತ್ತಣಿಂದ ಅದನ್ನು (ಯೋಗಿ) ನಿಯಮಕ್ಕೆ ತಂದುಕೊಂಡು ವಶಪಡಿಸಿ ಕೊಳ್ಳಬೇಕು || ೨೬ ||

ಯಾರ ಮನಸ್ಸು ವಿಶೇಷವಾಗಿ ಶಾಂತವಾಗಿದೆಯೋ, ಯಾರ ವಿಕಾರ ನಾಶವಾಗಿದೆಯೋ, ಆ ಬ್ರಹ್ಮಮಯನೂ ಪಾಪರಹಿತನೂ ಆದ ಯೋಗಿ ಅವಶ್ಯವಾಗಿ ಉತ್ತಮ ಸುಖವನ್ನು ಹೊಂದುತ್ತಾನೆ || ೨೭ ||

ಆತ್ಮನೊಂದಿಗೆ ನಿರಂತರವೂ ಅನುಸಂಧಾನಮಾಡುತ್ತ ಪಾಪರಹಿತನಾದ ಯೋಗಿ ಸುಲಭವಾಗಿ ಬ್ರಹ್ಮಪ್ರಾಪ್ತಿಯ ಅನಂತಸುಖದ ಅನುಭವ ಪಡೆಯು ತ್ತಾನೆ. || ೨೮ ||

ಸರ್ವತ್ರ ಸಮಭಾವವನ್ನಿಡುವ ಯೋಗಿ ತನ್ನನ್ನು ಸಕಲ ಭೂತಗಳ ಲ್ಲಿಯೂ ಭೂತಗಳನ್ನು ತನ್ನಲ್ಲಿಯೂ ಕಾಣುತ್ತಾನೆ || ೨೯ ||

ಯಾರು ನನ್ನನ್ನು ಎಲ್ಲೆಲ್ಲಿಯೂ ನೋಡುತ್ತಾರೋ, ಎಲ್ಲವನ್ನೂ ನನ್ನಲ್ಲಿ ನೋಡುತ್ತಾರೋ ಅವರು ನನ್ನ ದೃಷ್ಟಿಯಿಂದ ದೂರರಾಗರು ನಾನೂ ಅವರ ದೃಷ್ಟಿಯಿಂದ ದೂರನಾಗೆ || ೩೦ ||

---

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ |**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ || ೨೬ ||**

**ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ |**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ || ೨೭ ||**

**ಯುಂಜನ್ನೇವಂ ಸದಾಽಽತ್ಮಾನಂ ಯೋಗೀ ವಿಗತಕಲ್ಮಷಃ |**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ || ೨೮ ||**

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ |**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ || ೨೯ ||**

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ |**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ || ೩೦ ||**

ನನ್ನಲ್ಲಿ ಲೀನನಾಗಿ, ಸರ್ವಭೂತಸ್ಥಿತನಾದ ನನ್ನನ್ನು ಭಜಿಸುವ ಯೋಗಿ ಯಾವ ರೀತಿ ನಡೆದರೂ ನನ್ನಲ್ಲಿಯೇ ರತ. || ೩೧ ||

ಟಿಪ್ಪಣಿ—'ಸ್ವಯಂ' ಎಂಬುದು ಎಲ್ಲಿಯವರೆಗಿರುವುದೋ ಅಲ್ಲಿಯವರೆಗೆ ಪರಮಾತ್ಮ ಪೃಥಕ್ಕಾಗಿ ಕಾಣಿಸುತ್ತಾನೆ. 'ಸ್ವಯಂ' ಎಂಬುದು ಶೂನ್ಯವಾದ ಬಳಿಕ ಆ ಒಬ್ಬ ಪರಮಾತ್ಮನೇ ಎಲ್ಲೆಲ್ಲಿಯೂ ಕಾಣಿಸಲಾರಂಭಿಸುತ್ತಾನೆ. (ನೋಡಿ ಟಿಪ್ಪಣಿ, ಅಧ್ಯಾಯ ೧೩–೨೩)

ಅರ್ಜುನ, ಯಾವ ಮನುಷ್ಯ ಎಲ್ಲರನ್ನೂ ತನ್ನಂತೆ ನೋಡುತ್ತಾನೋ, ಸುಖ–ದುಃಖಗಳು ಸಮಾನವೆಂದು ಭಾವಿಸುತ್ತಾನೋ, ಅವನು ಶ್ರೇಷ್ಠನಾದ ಯೋಗಿ || ೩೨ ||

**ಅರ್ಜುನ:**

ಮಧುಸೂದನ, ನೀನು (ಸಮತ್ವದ) ಯೋಗವನ್ನು ಹೇಳಿದೆ. ಚಂಚಲತೆಯ ದೆಸೆಯಿಂದ ನಾನು ಅದರ ಸ್ಥಿರತೆಯನ್ನು ಕಾಣಲಾರದಿದೇನೆ. || ೩೩ ||

---

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ || ೩೧ ||**

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ**
**|| ೩೨ ||**

**ಅರ್ಜುನ ಉವಾಚ**

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ ।**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ || ೩೩ ||**

ಏಕೆಂದರೆ, ಕೃಷ್ಣ, ಮನಸ್ಸು ಚಂಚಲ ಅದು ಮನುಷ್ಯನನ್ನು (ಮಥಿಸಿ) ಕಡೆದುಬಿಡುತ್ತದೆ ಅದು ಬಹು ಬಲಿಷ್ಠ. ವಾಯುವನ್ನು ಒತ್ತಿಡುವುದು ಕಷ್ಟವಾಗಿರುವಂತೆಯೆ ಮನಸ್ಸನ್ನು ವಶಪಡಿಸಿಕೊಳ್ಳುವುದೂ ಕಷ್ಟವೆಂದು ನಾನು ತಿಳಿದಿದೇನೆ || ೩೪ ||

**ಶ್ರೀ ಭಗವಂತ :**

ಮಹಾಬಾಹು, ಚಂಚಲವಾದುದರಿಂದ ಮನಸ್ಸನ್ನು ವಶಪಡಿಸಿಕೊಳ್ಳುವುದು ಕಷ್ಟ, ನಿಜ. ಆದರೆ, ಕೌಂತೇಯ, ಅಭ್ಯಾಸ–ವೈರಾಗ್ಯಗಳಿಂದ ಅದನ್ನು ವಶಪಡಿಸಿಕೊಳ್ಳಬಹುದು || ೩೫ ||

ಮನಸ್ಸು ಸ್ವಾಧೀನವಿಲ್ಲದವನಿಗೆ ಯೋಗಸಾಧನೆ ಬಹಳ ಕಷ್ಟವೆಂದು ನನ್ನ ಅಭಿಪ್ರಾಯ ಆದರೆ ಯಾರಿಗೆ ಮನಸ್ಸು ತನ್ನ ವಶವೋ, ಯಾರು ಪ್ರಯತ್ನಶೀಲನೋ, ಅವನು ಉಪಾಯದಿಂದ ಯೋಗಸಿದ್ಧಿ ಪಡೆಯಬಲ್ಲ ||೩೬||

**ಅರ್ಜುನ :**

ಕೃಷ್ಣ ! ಶ್ರದ್ಧಾವಂತನಾದರೂ ಪ್ರಯತ್ನ ಮಂದವಾದುದರಿಂದ ಯಾರು ಯೋಗಭ್ರಷ್ಟನಾಗುತ್ತಾನೋ ಅಸಫಲನಾಗುತ್ತಾನೋ ಅವನ ಗತಿಯೇನು ? || ೩೭ ||

---

**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।**
**ತಸ್ಯಾಽಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ || ೩೪ ||**

**ಶ್ರೀ ಭಗವಾನುವಾಚ**

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।**
**ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ || ೩೫ ||**

**ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।**
**ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ || ೩೬ ||**

**ಅರ್ಜುನ ಉವಾಚ**

**ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।**
**ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ || ೩೭ ||**

ಯೋಗಭ್ರಷ್ಟನಾಗಿ, ಬ್ರಹ್ಮಮಾರ್ಗದಲ್ಲಿ ದಾರಿ ತಪ್ಪಿದವನು ಚದರಿದ ಮೋಡಗಳಂತೆ ಉಭಯಭ್ರಷ್ಟನಾಗಿ ನಾಶಹೊಂದುವುದಿಲ್ಲವಷ್ಟೆ ? || ೩೮ ||

ಕೃಷ್ಣ, ನನ್ನ ಈ ಸಂಶಯಗಳನ್ನು ನೀನು ಕಳೆಯಬೇಕು. ಈ ಸಂಶಯಗಳನ್ನು ಕಳೆಯಲು ನಿನ್ನನ್ನು ಬಿಟ್ಟರೆ ಮತ್ತಾರೂ ದೊರೆಯಲಾರರು || ೩೯ ||

**ಶ್ರೀ ಭಗವಂತ :**

ಪಾರ್ಥ! ಇಂಥ ಜನರಿಗೆ ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ ನಾಶವಿಲ್ಲ ಕಲ್ಯಾಣಮಾರ್ಗದಲ್ಲಿ ಹೋಗುವವರಿಗೆ ಎಂದಿಗೂ ದುರ್ಗತಿಯಿಲ್ಲ. || ೪೦ ||

ಪುಣ್ಯಶಾಲಿ ಜನರು ಪಡೆವ ಸ್ಥಾನವನ್ನೆ ಪಡೆದು, ಅಲ್ಲಿ ಬಹಳ ಕಾಲ ಇದ್ದು, ಯೋಗಭ್ರಷ್ಟನಾದ ಮನುಷ್ಯ ಪವಿತ್ರರೂ ಸಾಧನಸಂಪನ್ನರೂ ಆದವರ ಮನೆಯಲ್ಲಿ ಹುಟ್ಟುತ್ತಾನೆ. || ೪೧ ||

---

**ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ ।**
**ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ || ೩೮ ||**

**ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।**
**ತ್ವದನ್ಯಸ್ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ || ೩೯ ||**

**ಶ್ರೀ ಭಗವಾನುವಾಚ**

**ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನ ಹಿ ಕಲ್ಯಾಣಕೃತ್ ಕಶ್ಚಿದ್ದುರ್ಗತಿಂ ತಾತ ಗಚ್ಛತಿ || ೪೦ ||**

**ಪ್ರಾಪ್ಯ ಪುಣ್ಯಕೃತಾನ್ ಲೋಕಾನುಷಿತ್ವಾ ಶಾಶ್ವತೀಸ್ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ || ೪೧ ||**

ಅಥವಾ ಜ್ಞಾನಿಯಾದ ಯೋಗಿಯ ಕುಲದಲ್ಲಿಯೆ ಹುಟ್ಟುತ್ತಾನೆ ಜಗತ್ತಿನಲ್ಲಿ ನಿಜವಾಗಿ ಇಂಥ ಜನ್ಮ ಬಹು ದುರ್ಲಭ || ೪೨ ||

ಕುರುನಂದನ! ಅಲ್ಲಿ ಅವನಿಗೆ ಪೂರ್ವಜನ್ಮದ ಬುದ್ಧಿಸಂಸ್ಕಾರ ದೊರೆಯುತ್ತದೆ ಅಲ್ಲಿಂದ ಅವನು ಮೋಕ್ಷಕ್ಕಾಗಿ ಮುಂಬರಿಯುತ್ತಾನೆ. || ೪೩ ||

ಆ ಪೂರ್ವಾಭ್ಯಾಸದಿಂದಲೆ ಅವನು ಅವಶ್ಯವಾಗಿ ಯೋಗದ ಕಡೆ ಸೆಳೆಯಲ್ಪಡುತ್ತಾನೆ ಸಕಾಮನಾಗಿ ವೈದಿಕ ಕರ್ಮ ಮಾಡುವವನ ಸ್ಥಿತಿಯನ್ನು ಯೋಗಜಿಜ್ಞಾಸು ಕೂಡ ದಾಟಿಹೋಗುತ್ತಾನೆ. || ೪೪ ||

ಪ್ರಯತ್ನದಲ್ಲಿಯೆ ಮುಳುಗಿರುವ ಯೋಗಿ ಪಾಪಮುಕ್ತನಾಗಿ ಅನೇಕ ಜನ್ಮಗಳಿಂದ ವಿಶುದ್ಧನಾಗಿ ಪರಮಗತಿಯನ್ನು ಹೊಂದುತ್ತಾನೆ. || ೪೫ ||

ತಪಸ್ವಿಗಿಂತ ಯೋಗಿ ಶ್ರೇಷ್ಠ. ಜ್ಞಾನಿಗಿಂತಲೂ ಶ್ರೇಷ್ಠ. ಹಾಗೆಯೇ ಕರ್ಮಿಗಳಿಗಿಂತಲೂ ಅಧಿಕಶ್ರೇಷ್ಠ ಆದುದರಿಂದ, ಅರ್ಜುನ, ನೀನು ಯೋಗಿಯಾಗು || ೪೬ ||

---

**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್** || ೪೨ ||

**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್ ।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ** || ೪೩ ||

**ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ** || ೪೪ ||

**ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧ ಕಿಲ್ಬಿಷಃ ।**
**ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್** || ೪೫ ||

**ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ** ||೪೬||

ಟಿಪ್ಪಣಿ— ಇಲ್ಲಿ ತಪಸ್ಸು ಫಲೇಚ್ಛೆಯುಳ್ಳುದು. ಜ್ಞಾನಿಯೆಂದರೆ ಅನುಭವಜ್ಞಾನಿ ಎಂದಲ್ಲ.

ನನ್ನಲ್ಲಿ ಮನಸ್ಸನ್ನು ಲೀನಮಾಡಿ, ಶ್ರದ್ಧೆಯಿಂದ ನನ್ನ ಭಜನೆಮಾಡು ವವನೇ ಯೋಗಿಗಳಲ್ಲಿ ಸರ್ವಶ್ರೇಷ್ಠನೆಂದು ನಾನು ತಿಳಿಯುತ್ತೇನೆ ॥ ೪೭ ॥

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ಧ್ಯಾನಯೋಗವೆಂಬ ಆರನೆಯ ಅಧ್ಯಾಯ.

---

**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।**
**ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥ ೪೭ ॥**

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ಧ್ಯಾನಯೋಗೋ ನಾಮ ಷಷ್ಠೋಽಧ್ಯಾಯಃ ॥**

# ಅಧ್ಯಾಯ ೭

## ಜ್ಞಾನವಿಜ್ಞಾನಯೋಗ

**[ಈ ಅಧ್ಯಾಯದಲ್ಲಿ ಈಶ್ವರತತ್ತ್ವ, ಈಶ್ವರಭಕ್ತಿಗಳನ್ನು ತಿಳಿಸಲು ಆರಂಭಿಸಿದೆ.]**

**ಶ್ರೀ ಭಗವಂತ :**

ಪಾರ್ಥ! ನನ್ನಲ್ಲಿ ಮನಸ್ಸು ನೆಟ್ಟು ನನ್ನ ಆಶ್ರಯಹೊಂದಿ, ಯೋಗ ಸಾಧನೆಯನ್ನು ಮಾಡುತ್ತ, ನೀನು ನನ್ನನ್ನು ನಿಜವಾಗಿ ಸಂಪೂರ್ಣವಾಗಿ ಹೇಗೆ ಅರಿಯಬಲ್ಲೆಯೋ ಕೇಳು ॥ ೧ ॥

ಈ ಅನುಭವಯುಕ್ತ ಜ್ಞಾನವನ್ನು ನಿನಗೆ ಸಂಪೂರ್ಣವಾಗಿ ತಿಳಿಸುತ್ತೇನೆ. ಅದನ್ನು ತಿಳಿದಮೇಲೆ ಈ ಲೋಕದಲ್ಲಿ ಇನ್ನು ತಿಳಿಯಬೇಕಾದುದೇನೂ ಇರದು. ॥ ೨ ॥

ಸಾವಿರಾರು ಮನುಷ್ಯರಲ್ಲಿ ಸಿದ್ಧಿಪಡೆಯಲು ಯತ್ನಿಸುವವರು ಕೆಲವರೇ. ಪ್ರಯತ್ನಶೀಲರಾದ ಸಿದ್ಧರಲ್ಲಿಯೂ ನನ್ನನ್ನು ನಿಜವಾಗಿ ಅರಿತವರು ವಿರಳ. ॥೩॥

---

## ಅಥ ಸಪ್ತಮೋಽಧ್ಯಾಯಃ

### ಶ್ರೀ ಭಗವಾನುವಾಚ

**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ ಮದಾಶ್ರಯಃ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥ ೧ ॥**

**ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹಭೂಯೋಽನ್ಯತ್ ಜ್ಞಾತವ್ಯಮವಶಿಷ್ಯತೇ ॥ ೨ ॥**

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ ೩ ॥**

ಪೃಥ್ವಿ, ನೀರು, ಅಗ್ನಿ, ತೇಜಸ್ಸು, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಭಾವ—ಹೀಗೆ ಎಂಟು ವಿಧ ನನ್ನ ಪ್ರಕೃತಿ || ೪ ||

ಟಿಪ್ಪಣಿ—ಈ ಎಂಟು ತತ್ತ್ವಗಳ ಸ್ವರೂಪವೇ ಕ್ಷೇತ್ರ ಅಥವಾ ಕ್ಷರಪುರುಷ (ಅಧ್ಯಾಯ ೧೩ ಶ್ಲೋಕ ೫, ಅಧ್ಯಾಯ ೧೫ ಶ್ಲೋಕ ೬)

ಇದು ಅಪರಾಪ್ರಕೃತಿ ಇದಕ್ಕಿಂತಲೂ ಶ್ರೇಷ್ಠವಾದುದು ಜೀವರೂಪದ ಪರಾಪ್ರಕೃತಿ. ಈ ಜಗತ್ತು ಅದರ ಆಧಾರದ ಮೇಲೆ ನಿಂತಿದೆ || ೫ ||

ಇವೆರಡೂ ಸಕಲ ಭೂತಗಳ ಉತ್ಪತ್ತಿಗೆ ಕಾರಣವೆಂದು ತಿಳಿ ಸಮಗ್ರ ಜಗತ್ತಿನ ಉತ್ಪತ್ತಿ-ಲಯಗಳಿಗೆ ಕಾರಣ ನಾನೇ || ೬ ||

ಧನಂಜಯ, ನನಗಿಂತಲೂ ಉಚ್ಚವಾದುದು ಯಾವುದೂ ಇಲ್ಲ ದಾರದಲ್ಲಿ ಹೇಗೆ ಮಣಿಗಳು ಪೋಣಿಸಿರುತ್ತವೆಯೋ ಹಾಗೆ ಇವೆಲ್ಲವೂ ನನ್ನಲ್ಲಿ ಪೋಣಿಸಿದೆ || ೭ ||

ಕೌಂತೇಯ! ನೀರಿನಲ್ಲಿ ರಸ ನಾನು, ಸೂರ್ಯಚಂದ್ರರ ತೇಜಸ್ಸು ನಾನು, ಸರ್ವವೇದಗಳ ಓಂಕಾರ ನಾನು, ಆಕಾಶದ ಶಬ್ದ ನಾನು, ಪುರುಷರಲ್ಲಿ ಪರಾಕ್ರಮ ನಾನೇ || ೮ ||

---

**ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ || ೪ ||**

**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ || ೫ ||**

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ || ೬ ||**

**ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ || ೭ ||**

**ರಸೋಽಹಮಪ್ಸು ಕೌಂತೇಯ ಪ್ರಭಾಽಸ್ಮಿ ಶಶಿಸೂರ್ಯಯೋಃ ।**
**ಪ್ರಣವಸ್ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು || ೮ ||**

ಪೃಥ್ವಿಯ ಸುಗಂಧ ನಾನು, ಅಗ್ನಿಯ ತೇಜಸ್ಸು ನಾನು, ಪ್ರಾಣಿಮಾತ್ರಗಳ ಜೀವ, ತಪಸ್ವಿಗಳ ತಪಸ್ಸು ನಾನೇ ॥ ೯ ॥

ಪಾರ್ಥ, ಸಕಲ ಜೀವಗಳ ಸನಾತನ ಬೀಜ ನಾನು, ತಿಳಿ. ಬುದ್ಧಿವಂತರ ಬುದ್ಧಿ, ತೇಜಸ್ವಿಗಳ ತೇಜಸ್ಸು ನಾನು. ॥ ೧೦ ॥

ಬಲವಂತರ ಕಾಮ, ರಾಗರಹಿತ ಬಲ ನಾನು, ಪ್ರಾಣಿಗಳಲ್ಲಿ ಧರ್ಮಕ್ಕೆ ವಿರುದ್ಧವಲ್ಲದ ಕಾಮ ನಾನು ॥ ೧೧ ॥

ಸಾತ್ವಿಕ, ರಾಜಸ, ತಾಮಸ ಭಾವಗಳೆಲ್ಲವೂ ನನ್ನಿಂದಲೇ ಹುಟ್ಟಿದುವು, ತಿಳಿ ಆದರೆ ನಾನು ಅವುಗಳಲ್ಲಿಲ್ಲ ಅವು ನನ್ನಲ್ಲಿವೆ ॥ ೧೨ ॥

ಟಿಪ್ಪಣಿ—ಪರಮಾತ್ಮ ಈ ಭಾವಗಳ ಮೇಲೆ ಆಧಾರಗೊಂಡಿಲ್ಲ ಆದರೆ ಅವು ಆತನ ಆಧಾರದ ಮೇಲಿವೆ ಅಲ್ಲದೆ ಆತನ ವಶದಲ್ಲಿವೆ.

ಈ ತ್ರಿಗುಣಮಯ ಭಾವಗಳಿಂದ ಇಡೀ ಜಗತ್ತು ಮೋಹಿತವಾಗಿದೆ. ಆದುದರಿಂದಲೆ ಅವುಗಳಿಂದ ಉಚ್ಚ, ಭಿನ್ನ ಆದ ನನ್ನನ್ನು—ಅವಿನಾಶಿಯನ್ನು—ಅದು ತಿಳಿಯಲಾರದು ॥ ೧೩ ॥

---

ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।
ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥ ೯ ॥

ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್ ।
ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ॥ ೧೦ ॥

ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಮ್ ।
ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥ ೧೧ ॥

ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।
ಮತ್ತ ಏವೇತಿ ತಾನ್ ವಿದ್ಧಿ ನ ತ್ವಹಂ ತೇಷು ತೇ ಮಯಿ ॥ ೧೨ ॥

ತ್ರಿಭಿರ್ಗುಣಮಯೈರ್ಭಾವೈರೇಭಿಸ್ಸರ್ವಮಿದಂ ಜಗತ್ ।
ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥ ೧೩ ॥

ನನ್ನ ಈ ತ್ರಿಗುಣಮಯ ದೈವೀಮಾಯೆಯಿಂದ ಪಾರಾಗುವುದು ದುಸ್ತರ ಆದರೆ ನನಗೆ ಶರಣಾಗತರಾದವರು ಈ ಮಾಯೆಯಿಂದ ಪಾರಾಗುತ್ತಾರೆ ||೧೪||

ದುರಾಚಾರಿಗಳು, ಮೂಢರು, ಅಧಮ ಮನುಷ್ಯರು ನನಗೆ ಶರಣು ಬಾರರು. ಅವರು ಆಸುರೀ ಭಾವವುಳ್ಳವರು. ಮಾಯೆಯಿಂದ ಅವರ ಜ್ಞಾನ ಹರಣವಾಗುತ್ತದೆ. || ೧೫ ||

ಅರ್ಜುನ, ದುಃಖಿ, ಜಿಜ್ಞಾಸು, ಏನಾದರೂ ಪಡೆಯುವ ಆಸೆಯುಳ್ಳವರು, ಜ್ಞಾನಿ—ಈ ನಾಲ್ಕು ಬಗೆಯ ಸದಾಚಾರಿಗಳೂ ನನ್ನನ್ನು ಭಜಿಸುತ್ತಾರೆ. || ೧೬ ||

ಇವರಲ್ಲಿ ನಿತ್ಯ ಸಮಭಾವಿಯಾಗಿ, ಒಂದೇ ಭಾವದಿಂದ ಭಜಿಸುವ ಜ್ಞಾನಿಯೇ ಶ್ರೇಷ್ಠ. ನಾನು ಜ್ಞಾನಿಗೆ ಅತ್ಯಂತ ಪ್ರಿಯ, ನನಗೂ ಜ್ಞಾನಿ ಪ್ರಿಯ || ೧೭ ||

ಈ ಭಕ್ತರೆಲ್ಲರೂ ಉತ್ತಮರೇ. ಆದರೆ ಜ್ಞಾನಿ ನನ್ನ ಆತ್ಮ ಏಕೆಂದರೆ, ನನ್ನನ್ನು ಪಡೆವುದಕ್ಕಿಂತಲೂ ಹೆಚ್ಚಿನ ಶ್ರೇಷ್ಠ ಗತಿ ಮತ್ತೊಂದಿಲ್ಲವೆಂದು ತಿಳಿದು ಆ ಯೋಗಿ ನನ್ನ ಆಶ್ರಯವನ್ನೇ ಪಡೆಯುತ್ತಾನೆ. || ೧೮ ||

---

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ |**
**ಮಾಮೇವಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ||೧೪||**

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ |**
**ಮಾಯಯಾಽಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ || ೧೫ ||**

**ಚತುರ್ವಿಧಾ ಭಜಂತೇ ಮಾಂ ಜನಾಸ್ಸುಕೃತಿನೋಽರ್ಜುನ |**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ || ೧೬ ||**

**ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ |**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ||೧೭||**

**ಉದಾರಾಸ್ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ |**
**ಆಸ್ಥಿತಸ್ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ || ೧೮ ||**

ಅನೇಕ ಜನ್ಮಗಳನಂತರ ಕೊನೆಯಲ್ಲಿ ಜ್ಞಾನಿ ನನ್ನನ್ನು ಪಡೆಯುತ್ತಾನೆ ಸಕಲವೂ ವಾಸುದೇವಮಯ ಎಂಬುದನ್ನು ಅರಿತ ಮಹಾತ್ಮ ಬಹು ದುರ್ಲಭ || ೧೯ ||

ಅನೇಕ ಕಾಮನೆಗಳಿಂದ ಯಾರ ಜ್ಞಾನ ನಷ್ಟವಾಗಿದೆಯೋ ಅವರು ತಮ್ಮ ತಮ್ಮ ಪ್ರಕೃತಿಯಂತೆ ಭಿನ್ನ ಭಿನ್ನ ವಿಧಿಗಳ ಆಶ್ರಯ ಪಡೆದು ಬೇರೆ ದೇವತೆಗಳಿಗೆ ಶರಣುಹೋಗುತ್ತಾರೆ || ೨೦ ||

ಯಾರು ಯಾರು ಯಾವ ಯಾವ ಸ್ವರೂಪದಲ್ಲಿ ಭಕ್ತಿಯಿಡುತ್ತಾರೋ ಶ್ರದ್ಧೆಯಿಂದ ಆಯಾ ರೂಪದಲ್ಲಿಯೇ ಅವರ ಭಕ್ತಿಯನ್ನು ಸ್ಥಿರಗೊಳಿಸುತ್ತೇನೆ || ೨೧ ||

ಅವನು ಶ್ರದ್ಧಾಪೂರ್ವಕ ಆಯಾ ಸ್ವರೂಪದ ಆರಾಧನೆ ಮಾಡಿ, ಆದರ ಮೂಲಕ ನನ್ನಿಂದ ನಿರ್ಮಿತವಾದ ಹಾಗೂ ಅವನಿಗೆ ಬೇಕಾದ ಕಾಮಫಲ ಗಳನ್ನು ಹೊಂದುತ್ತಾನೆ || ೨೨ ||

---

**ಬಹೂನಾಂ ಜನ್ಮನಾಮಂತೆ ಜ್ಞಾನವಾನ್ ಮಾಂ ಪ್ರಪದ್ಯತೇ ।**
**ವಾಸುದೇವಸ್ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ || ೧೯ ||**

**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಸ್ಸ್ವಯಾ || ೨೦ ||**

**ಯೋ ಯೋ ಯಾಂ ಯಾಂ ತನುಂ ಭಕ್ತಶ್ಶ್ರದ್ಧಯಾಽರ್ಚಿತು-**
**ಮಿಚ್ಛತಿ ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ || ೨೧ ||**

**ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ ಹಿತಾನ್ || ೨೨ ||**

ಈ ಅಲ್ಪಬುದ್ಧಿಗಳಿಗೆ ದೊರೆವ ಫಲ ನಾಶವಂತ ಫಲ ದೇವತೆಗಳನ್ನು ಭಜಿಸುವವರು ದೇವತೆಗಳನ್ನೈದುತ್ತಾರೆ ನನ್ನನ್ನು ಭಜಿಸುವವರು ನನ್ನನ್ನು ಪಡೆಯುತ್ತಾರೆ || ೨೩ ||

ಪರಮ ಅವಿನಾಶಿ, ಅನುಪಮ ಆದ ನನ್ನ ಸ್ವರೂಪವನ್ನು ಅರಿಯದ ಬುದ್ಧಿಹೀನರು ಇಂದ್ರಿಯಾತೀತನಾದ ನನ್ನನ್ನು ಇಂದ್ರಿಯಗಮ್ಯನೆಂದು ಭಾವಿಸುತ್ತಾರೆ || ೨೪ ||

ನನ್ನ ಯೋಗಮಾಯೆಯಿಂದ ಮುಚ್ಚಿಕೊಂಡಿರುವ ನಾನು ಎಲ್ಲರಿಗೂ ಪ್ರಕಟನಾಗಿಲ್ಲ. ಈ ಮೂಢ ಜಗತ್ತು ಅಜನ್ಮನೂ ಅವ್ಯಕ್ತನೂ ಆದ ನನ್ನನ್ನು ಸರಿಯಾಗಿ ತಿಳಿಯುವುದಿಲ್ಲ. || ೨೫ ||

ಟಿಪ್ಪಣಿ—ಈ ಗೋಚರ ಜಗತ್ತನ್ನು ಸೃಷ್ಟಿಸುವ ಶಕ್ತಿ ಇದ್ದರೂ ಅಲಿಪ್ತನಾಗಿರುವುದರಿಂದ ಪರಮಾತ್ಮ ಅದೃಶ್ಯನಾಗಿದಾನೆ. ಇದೇ ಆತನ ಯೋಗಮಾಯೆ

ಹಿಂದೆ ಆಗಿಹೋದ, ಈಗಿರುವ, ಮುಂದೆ ಆಗುವ ಸಕಲ ಭೂತಗಳನ್ನೂ ನಾನು ಬಲ್ಲೆ ಆದರೆ ನನ್ನನ್ನು ಯಾರೂ ಅರಿತಿಲ್ಲ || ೨೬ ||

---

**ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ ।**
**ದೇವಾನ್ ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ || ೨೩ ||**

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।**
**ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಮ್ || ೨೪ ||**

**ನಾಹಂ ಪ್ರಕಾಶಸ್ಸರ್ವಸ್ಯ ಯೋಗಮಾಯಾಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್ || ೨೫ ||**

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ || ೨೬ ||**

ಪರಂತಪ! ಇಚ್ಛೆ–ದ್ವೇಷಗಳಿಂದ ಹುಟ್ಟುವ ಸುಖದುಃಖಾದಿ ದ್ವಂದ್ವಗಳ ಮೋಹದಿಂದ ಪ್ರಾಣಿಮಾತ್ರಗಳು ಈ ಜಗತ್ತಿನಲ್ಲಿ ಮೋಹಗ್ರಸ್ತವಾಗಿರುತ್ತವೆ. || ೨೭ ||

ಆದರೆ ಯಾರ ಪಾಪಗಳು ನಾಶವಾಗಿವೆಯೋ ಆ ಸದಾಚಾರಿಗಳೂ, ದ್ವಂದ್ವಮೋಹದಿಂದ ಮುಕ್ತರಾದವರೂ ದೃಢವ್ರತದಿಂದ ನನ್ನ ಭಜನೆ ಮಾಡುತ್ತಾರೆ || ೨೮ ||

ನನ್ನ ಆಶ್ರಯವನ್ನು ಹೊಂದಿ, ಜರಾ–ಮರಣಗಳಿಂದ ಮುಕ್ತರಾಗಲು ಪ್ರಯತ್ನಿಸುವವರು ಪೂರ್ಣಬ್ರಹ್ಮವನ್ನೂ ಅಧ್ಯಾತ್ಮವನ್ನೂ ಅಖಿಲ ಕರ್ಮವನ್ನೂ ತಿಳಿಯುತ್ತಾರೆ || ೨೯ ||

ಅಧಿಭೂತ, ಅಧಿದೈವ, ಅಧಿಯಜ್ಞ ರೂಪದಲ್ಲಿ ನನ್ನನ್ನು ತಿಳಿದವರು ಸಮತ್ವವನ್ನೈದಿ ಮರಣಸಮಯದಲ್ಲಿ ಕೂಡ ನನ್ನನ್ನು ಅರಿಯುತ್ತಾರೆ ||೩೦||

ಟಿಪ್ಪಣಿ—ಅಧಿಭೂತಾದಿಗಳ ಅರ್ಥ ಎಂಟನೆಯ ಅಧ್ಯಾಯದಲ್ಲಿದೆ 'ಈ ಜಗತ್ತಿನಲ್ಲಿ ಈಶ್ವರನ ವಿನಾ ಬೇರೆ ಯಾವುದೂ ಇಲ್ಲ, ಸಕಲ ಕರ್ಮಗಳ ಕರ್ತನೂ ಅವನೇ, ಭೋಕ್ತನೂ ಅವನೇ' ಎಂದು ತಿಳಿದು ಮರಣಸಮಯದಲ್ಲಿ ಶಾಂತರಾಗಿದ್ದು, ಆಗ ಯಾವ ಬಗೆಯ ವಾಸನೆಯನ್ನೂ ಇಟ್ಟುಕೊಳ್ಳದೆ ಈಶ್ವರನಲ್ಲಿಯೆ ತನ್ಮಯನಾಗಿರುವಂತಹವರು ಈಶ್ವರನನ್ನು ತಿಳಿದವರು, ಅವರೇ ಮೋಕ್ಷ ಪಡೆದವರು ಎಂಬುದೇ ಈ ಶ್ಲೋಕದ ಅಭಿಪ್ರಾಯ

---

**ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।**
**ಸರ್ವಭೂತಾನಿ ಸಮ್ಮೋಹಂ ಸರ್ಗೇ ಯಾಂತಿ ಪರಂತಪ || ೨೭ ||**

**ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ ।**
**ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ ||೨೮||**

**ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ ।**
**ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್ ||೨೯||**

**ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।**
**ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ || ೩೦ ||**

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ ಜ್ಞಾನವಿಜ್ಞಾನಯೋಗವೆಂಬ ಏಳನೆಯ ಅಧ್ಯಾಯ

---

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಜ್ಞಾನವಿಜ್ಞಾನಯೋಗೋ ನಾಮ ಸಪ್ತಮೋಽಧ್ಯಾಯಃ ॥**

# ಅಧ್ಯಾಯ ೮

## ಅಕ್ಷರಬ್ರಹ್ಮಯೋಗ

**[ಈ ಅಧ್ಯಾಯದಲ್ಲಿ ಈಶ್ವರತತ್ತ್ವವನ್ನು ವಿಶೇಷರೂಪದಿಂದ ತಿಳಿಸಲಾಗಿದೆ.]**

**ಅರ್ಜುನ :**

ಪುರುಷೋತ್ತಮ ! ಈ ಬ್ರಹ್ಮದ ಸ್ವರೂಪವೆಂತಹುದು ? ಅಧ್ಯಾತ್ಮ ಎಂದರೇನು ? ಕರ್ಮವೆಂದರೇನು ? ಅಧಿಭೂತ ಯಾವುದು ? ಅಧಿದೈವ ಎಂಬುದು ಯಾವುದು ? ॥ ೧ ॥

ಮಧುಸೂದನ, ಈ ದೇಹದಲ್ಲಿ ಅಧಿಯಜ್ಞ ಎಂದರೇನು ? ಅದು ಹೇಗಿದೆ ? ಮರಣಸಮಯದಲ್ಲಿ ಸಂಯಮಿಗಳು ನಿನ್ನನ್ನು ಹೇಗೆ ಅರಿತುಕೊಳ್ಳುತ್ತಾರೆ ? ॥ ೨ ॥

---

## ಅಥಾಷ್ಟಮೋಽಧ್ಯಾಯಃ

**ಅರ್ಜುನ ಉವಾಚ**

**ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥ ೧ ॥**

**ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ ಮಧುಸೂದನ ।**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥ ೨ ॥**

**ಶ್ರೀ ಭಗವಂತ :**

ಯಾವುದು ಸರ್ವೋತ್ತಮವೋ ಅವಿನಾಶಿಯೋ ಅದು ಬ್ರಹ್ಮ, ಪ್ರಾಣಿಮಾತ್ರದಲ್ಲಿ ಯಾವುದು ತನ್ನ ಬಲದಿಂದ ಇರುತ್ತದೆಯೋ ಅದು ಅಧ್ಯಾತ್ಮ, ಪ್ರಾಣಿಮಾತ್ರಗಳನ್ನು ಉತ್ಪನ್ನಮಾಡುವ ಸೃಷ್ಟಿವ್ಯಾಪಾರವೇ ಕರ್ಮ ॥ ೩ ॥

ನನ್ನ ನಾಶವಂತ ಸ್ವರೂಪವೆ ಅಧಿಭೂತ, ಅದರಲ್ಲಿರುವ ನನ್ನ ಜೀವ ಸ್ವರೂಪವೇ ಅಧಿದೈವತ. ಈ ದೇಹದಲ್ಲಿ ಇರುವ, ಯಜ್ಞದ ಮೂಲಕ ಶುದ್ಧವಾದ ಜೀವಸ್ವರೂಪ ಅಧಿಯಜ್ಞ. ॥ ೪ ॥

ಟಿಪ್ಪಣಿ—ಎಂದರೆ ಅವ್ಯಕ್ತಬ್ರಹ್ಮನಿಂದ ಮೊದಲ್ಗೊಂಡು ನಾಶವಂತವಾದ ದೃಶ್ಯ ಪದಾರ್ಥಮಾತ್ರವೆಲ್ಲವೂ ಪರಮಾತ್ಮನೇ. ಎಲ್ಲವೂ ಅವನ ಕೃತಿ ಇಂತಹ ಪರಿಸ್ಥಿತಿಯಲ್ಲಿ ಮನುಷ್ಯಪ್ರಾಣಿ ತನ್ನ ಕರ್ತೃತ್ವದ ಅಭಿಮಾನ ತಳೆಯುವುದಕ್ಕೆ ಬದಲಾಗಿ ಪರಮಾತ್ಮನ ದಾಸನಾಗಿ ಸಕಲವನ್ನೂ ಆತನಿಗೆ ಅರ್ಪಣಮಾಡಬಾರದೇಕೆ ?

ಯಾರು ಅಂತ್ಯಸಮಯದಲ್ಲಿ ನನ್ನ ಸ್ಮರಣೆಯನ್ನೆ ಮಾಡುತ್ತ ದೇಹವನ್ನು ಬಿಡುತ್ತಾರೋ ಅವರು ನನ್ನ ಸ್ವರೂಪವನ್ನು ಪಡೆಯುತ್ತಾರೆ, ಸ್ವಲ್ಪವೂ ಸಂಶಯವಿಲ್ಲ. ॥ ೫ ॥

ಅಥವಾ ಮನುಷ್ಯ ನಿತ್ಯವೂ ಯಾವ ಯಾವ ಸ್ವರೂಪವನ್ನು ಧ್ಯಾನ ಮಾಡುತ್ತಾನೋ ಅದೇ ಸ್ವರೂಪವನ್ನು ಮರಣಸಮಯದಲ್ಲಿಯೂ ಸ್ಮರಿಸುತ್ತ

---

**ಶ್ರೀ ಭಗವಾನುವಾಚ**

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ ।**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥ ೩ ॥**

**ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।**
**ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ॥ ೪ ॥**

**ಅಂತಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಳೇಬರಮ್ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥ ೫ ॥**

**ಯಂ ಯಂ ವಾಽಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಳೇಬರಮ್ ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥ ೬ ॥**

ದೇಹವನ್ನು ಬಿಡುತ್ತಾನೆ ಆದರಿಂದ ಅವನು ಆಯಾ ಸ್ವರೂಪಗಳನ್ನು ಹೊಂದುತ್ತಾನೆ ॥ ೬ ॥

ಆದುದರಿಂದ ಯಾವಾಗಲೂ ನನ್ನ ಸ್ಮರಣೆಯನ್ನೇ ಮಾಡುತ್ತ ಯುದ್ಧ ಮಾಡುತ್ತಿರು ಹೀಗೆ ನನ್ನಲ್ಲಿ ಮನಸ್ಸು-ಬುದ್ಧಿಗಳನ್ನು ಅರ್ಪಿಸಿದರೆ ಸಂದೇಹವಿಲ್ಲದೆ ನನ್ನನ್ನು ಹೊಂದುತ್ತೀಯೆ ॥ ೭ ॥

ಪಾರ್ಥ, ಅಭ್ಯಾಸದ ಮೂಲಕ ಚಿತ್ತವನ್ನು ಸ್ಥಿರಗೊಳಿಸಿ ಅದು ಎತ್ತಲೂ ಚದರದಂತೆ ಮಾಡಿ, ಏಕಾಗ್ರನಾಗುವವನು ದಿವ್ಯನಾದ ಪರಮಪುರುಷನನ್ನು ಹೊಂದುತ್ತಾನೆ. ॥ ೮ ॥

ಯಾವ ಮನುಷ್ಯ ಮರಣಸಮಯದಲ್ಲಿ ಅಚಲಮನಸ್ಸಿನಿಂದ, ಭಕ್ತಿಪೂರ್ಣನಾಗಿ, ಯೋಗಬಲದಿಂದ ಹುಬ್ಬಿನ ಮಧ್ಯೆ ಪ್ರಾಣವನ್ನು ಚೆನ್ನಾಗಿ ಪ್ರತಿಷ್ಠಿಸಿ, ಸರ್ವಜ್ಞ, ಪುರಾತನ, ನಿಯಂತ, ಸೂಕ್ಷ್ಮತಮ, ಸಕಲಾಧಾರ, ಅಚಿಂತ್ಯ, ಸೂರ್ಯನಂತೆ ತೇಜಸ್ವಿ, ಅಜ್ಞಾನರೂಪದ ಅಂಧಕಾರದಿಂದ ಬೇರೆ

---

**ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ ।**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಮ್ ॥ ೭ ॥**

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ॥ ೮ ॥**

**ಕವಿಂ ಪುರಾಣಮನುಶಾಸಿತಾರಮ್**
**ಅಣೋರಣೀಯಾಂಸಮನುಸ್ಮರೇದ್ಯಃ ।**
**ಸರ್ವಸ್ಯ ಧಾತಾರಮಚಿಂತ್ಯರೂಪಮ್**
**ಆದಿತ್ಯವರ್ಣಂ ತಮಸಃ ಪರಸ್ತಾತ್ ॥ ೯ ॥**

**ಪ್ರಯಾಣಕಾಲೇ ಮನಸಾಽಚಲೇನ**
**ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ।**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್**
**ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥ ೧೦ ॥**

ಯಾದ ಸ್ವರೂಪವುಳ್ಳ ಅವನನ್ನು ಚೆನ್ನಾಗಿ ಸ್ಮರಿಸುವವನು ದಿವ್ಯವಾದ ಪರಮ ಪುರುಷನನ್ನೈದುತ್ತಾನೆ. || ೯–೧೦ ||

ಯಾವುದನ್ನು ವೇದವಿದರು ಅಕ್ಷರವೆಂದು ವರ್ಣಿಸುವರೊ, ಯಾವುದರಲ್ಲಿ ವೀತರಾಗಿಗಳಾದ ಮುನಿಗಳು ಪ್ರವೇಶಿಸುತ್ತಾರೊ, ಯಾವುದನ್ನು ಪಡೆವ ಇಚ್ಛೆಯಿಂದ ಜನರು ಬ್ರಹ್ಮಚರ್ಯಪಾಲನೆ ಮಾಡುತ್ತಾರೊ, ಆ ಪದದ ಸಂಕ್ಷಿಪ್ತ ವರ್ಣನೆಯನ್ನು ನಾನು ನಿನಗೆ ಹೇಳುತ್ತೇನೆ || ೧೧ ||

ಇಂದ್ರಿಯಗಳ ಸರ್ವದ್ವಾರಗಳನ್ನು ತಡೆದು, ಮನಸ್ಸನ್ನು ಹೃದಯದಲ್ಲಿ ಸ್ಥಿರಗೊಳಿಸಿ, ಪ್ರಾಣಗಳನ್ನು ಮಸ್ತಕಕ್ಕೆ ಏರಿಸಿ, ಸಮಾಧಿಸ್ಥನಾಗಿ ಓಂ ಎಂಬ ಏಕಾಕ್ಷರ ಬ್ರಹ್ಮದ ಉಚ್ಚಾರಣೆ ಮಾಡುತ್ತ, ನನ್ನನ್ನು ಸ್ಮರಿಸುತ್ತ ಯಾವ ಮಾನವ ದೇಹತ್ಯಾಗಮಾಡುತ್ತಾನೋ ಅವನಿಗೆ ಪರಮಗತಿ ಸಿಗುತ್ತದೆ. || ೧೨–೧೩ ||

ಪಾರ್ಥ, ಚಿತ್ತವನ್ನು ಮತ್ತೆಲ್ಲಿಯೂ ಇಡದೆ ಯಾರು ನಿತ್ಯನಿರಂತರ ನನ್ನ ಸ್ಮರಣೆ ಮಾಡುತ್ತಾನೋ ಆ ನಿತ್ಯಯುಕ್ತ ಯೋಗಿ ನನ್ನನ್ನು ಸಹಜವಾಗಿ ಪಡೆಯುತ್ತಾನೆ. || ೧೪ ||

---

**ಯದಕ್ಷರಂ ವೇದವಿದೋ ವದಂತಿ**
**ವಿಶಂತಿ ಯದ್ಯತಯೋ ವೀತರಾಗಾಃ ।**
**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ**
**ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ || ೧೧ ||**

**ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಮ್ || ೧೨ ||**

**ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ದೇಹಂ ಸ ಯಾತಿ ಪರಮಾಂ ಗತಿಮ್ || ೧೩ ||**

**ಅನನ್ಯಚೇತಾಸ್ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ || ೧೪ ||**

ನನ್ನನ್ನು ಸೇರಿ ಪರಮಗತಿಯೆನ್ನು ಪಡೆದ 'ಮಹಾತ್ಮರು ದುಃಖದ ಮನೆಯೂ ಅಶಾಶ್ವತವೂ ಆದ ಪುನರ್ಜನ್ಮವನ್ನು ಮತ್ತೆ ಹೊಂದರು ॥ ೧೫ ॥

ಕೌಂತೇಯ, ಬ್ರಹ್ಮಲೋಕ ಮೊದಲ್ಗೊಂಡು ಸಕಲ ಲೋಕಗಳೂ ಮತ್ತೆ ಮತ್ತೆ ಲಭಿಸುವಂಥವು ಆದರೆ ನನ್ನನ್ನು ಸೇರಿದ ಬಳಿಕ ಮನುಷ್ಯ ಮತ್ತೆ ಜನ್ಮತಾಳಬೇಕಾಗಿಲ್ಲ. ॥ ೧೬ ॥

ಬ್ರಹ್ಮನಿಗೆ ಸಾವಿರ ಯುಗ ಒಂದು ಹಗಲು, ಸಾವಿರ ಯುಗ ಒಂದು ರಾತ್ರಿ, ಇದನ್ನು ತಿಳಿದವರು 'ಅಹೋರಾತ್ರಿವಿದರು' ॥ ೧೭ ॥

ಟಿಪ್ಪಣಿ—ಸಾರಾಂಶವೇನೆಂದರೆ, ನಮ್ಮ ಹಗಲಿರುಳುಗಳ ೨೪ ಗಂಟೆ ಸಮಯ ಕಾಲಚಕ್ರದಲ್ಲಿ ಒಂದು ಕ್ಷಣಕ್ಕಿಂತಲೂ ಸೂಕ್ಷ್ಮವಾದುದು ಆದುದರಿಂದ ಅಷ್ಟು ಸಮಯದಲ್ಲಿ ಲಭಿಸುವ ಭೋಗಗಳನ್ನು ಆಕಾಶಕುಸುಮಸಮಾನವೆಂದು ಭಾವಿಸಿ ನಾವು ಅವುಗಳಲ್ಲಿ ಉದಾಸೀನರಾಗಿರಬೇಕು, ನಮಗೆ ಲಭಿಸಿರುವ ಆ ಸಮಯವನ್ನು ಭಗವದ್ ಭಕ್ತಿಯಲ್ಲಿ, ಸೇವೆಯಲ್ಲಿ ಕಳೆದು ಸಾರ್ಥಕಗೊಳಿಸಬೇಕು ಈಗಲೇ ಆತ್ಮದರ್ಶನವಾಗ ದಿದ್ದರೆ ತಾಳ್ಮೆ ತಳೆಯಬೇಕು.

(ಬ್ರಹ್ಮನ) ದಿನ ಹುಟ್ಟುತ್ತಲೇ ಅವ್ಯಕ್ತದಿಂದ ಎಲ್ಲವೂ ವ್ಯಕ್ತವಾಗುತ್ತವೆ. ರಾತ್ರಿಯಾದ ಕೂಡಲೆ ಅವುಗಳ ಪ್ರಳಯವಾಗುತ್ತದೆ, ಎಂದರೆ ಅವ್ಯಕ್ತದಲ್ಲಿ ಲೀನವಾಗುತ್ತವೆ. ॥ ೧೮ ॥

---

**ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।**
**ನಾಪ್ನುವಂತಿ ಮಹಾತ್ಮಾನಸ್ಸಂಸಿದ್ಧಿಂ ಪರಮಾಂ ಗತಾಃ ॥ ೧೫ ॥**

**ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ ೧೬ ॥**

**ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ ॥೧೭॥**

**ಅವ್ಯಕ್ತಾದ್ವ್ಯಕ್ತಯಸ್ಸರ್ವಾಃ ಪ್ರಭವಂತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯಂತೆ ತತ್ರೈವಾವ್ಯಕ್ತಸಂಜ್ಞಕೇ ॥ ೧೮ ॥**

ಟಿಪ್ಪಣಿ—ಇದನ್ನರಿತಾದರೂ ಮನುಷ್ಯ ತನ್ನ ಕೈಯಲ್ಲಿ ಬಹಳ ಕಡಮೆ ಅಧಿಕಾರ ಇದೆಯೆಂದು ತಿಳಿಯಬೇಕು ಉತ್ಪತ್ತಿ, ನಾಶಗಳೆರಡೂ ಒಟ್ಟಿಗೆ ನಡೆಯುತ್ತವೆ.

ಪಾರ್ಥ, ಪ್ರಾಣಿಗಳ ಈ ಸಮುದಾಯ ಹೀಗೆ ಹುಟ್ಟಿ ಹುಟ್ಟಿ ರಾತ್ರಿ ಆದೊಡನೆ ವಿವಶವಾಗಿ ಲಯವಾಗುತ್ತದೆ ಹಗಲಾಗುತ್ತಲೆ ಮತ್ತೆ ಹುಟ್ಟು ತ್ತದೆ ॥ ೧೯ ॥

ಈ ಅವ್ಯಕ್ತಕ್ಕೆ ಅತೀತವಾದ ಮತ್ತೊಂದು ಸನಾತನ ಅವ್ಯಕ್ತಭಾವವಿದೆ ಸಕಲ ಪ್ರಾಣಿಗಳ ನಾಶವಾದರೂ ಈ ಸನಾತನ ಅವ್ಯಕ್ತಭಾವ ನಾಶವಾಗದು. ॥ ೨೦ ॥

ಅವ್ಯಕ್ತವೂ ಅಕ್ಷರ(ಅವಿನಾಶ)ವೂ ಆದುದಕ್ಕೆ ಪರಮಗತಿಯೆನ್ನುತ್ತಾರೆ. ಯಾವುದನ್ನು ಪಡೆದಮೇಲೆ ಪುನರ್ಜನ್ಮ ಇಲ್ಲವೊ ಅದೇ ನನ್ನ ಪರಮಧಾಮ ॥ ೨೧ ॥

ಪಾರ್ಥ, ಈ ಉತ್ತಮ ಪುರುಷನ ದರ್ಶನ ಅನನ್ಯಭಕ್ತಿಯಿಂದ ಲಭಿಸು ತ್ತದೆ ಭೂತಮಾತ್ರವೆಲ್ಲವೂ ಅವನಲ್ಲಿ ಇದೆ ಇದೆಲ್ಲವೂ ಅವನಿಂದ ವ್ಯಾಪ್ತ. ॥ ೨೨ ॥

---

**ಭೂತಗ್ರಾಮಸ್ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।**
**ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥ ೧೯ ॥**

**ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।**
**ಯಸ್ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥ ೨೦ ॥**

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ ।**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೨೧ ॥**

**ಪುರುಷಸ್ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಸ್ಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥ ೨೨ ॥**

ಯಾವ ಸಮಯದಲ್ಲಿ ಗತಿಸಿ ಯೋಗಿಗಳು ಮೋಕ್ಷ ಪಡೆಯುತ್ತಾರೋ, ಯಾವ ಸಮಯದಲ್ಲಿ ಮರಣವಾದರೆ ಅವರಿಗೆ ಪುನರ್ಜನ್ಮ ಬರುತ್ತದೋ, ಆ ಸಮಯವನ್ನು ನಿನಗೆ ತಿಳಿಸುತ್ತೇನೆ ॥ ೨೩ ॥

ಉತ್ತರಾಯಣದ ಆರು ತಿಂಗಳು ಶುಕ್ಲಪಕ್ಷದ ಹಗಲಲ್ಲಿ ಅಗ್ನಿಜ್ವಾಲೆ ಪ್ರಜ್ವಲಿಸುತ್ತಿರುವಾಗ ಮರಣಹೊಂದಿದ ಬ್ರಹ್ಮವಿದರು ಬ್ರಹ್ಮವನ್ನೈದುತ್ತಾರೆ. ॥ ೨೪ ॥

ದಕ್ಷಿಣಾಯಣದ ಆರು ತಿಂಗಳು ಕೃಷ್ಣಪಕ್ಷದ ರಾತ್ರಿಯಲ್ಲಿ, ಹೊಗೆ ಆಡುತ್ತಿರುವಾಗ ಮರಣಿಸಿದವರು ಚಂದ್ರಲೋಕವನ್ನು ಸೇರಿ ಮತ್ತೆ ಹುಟ್ಟುತ್ತಾರೆ. ॥ ೨೫ ॥

ಟಿಪ್ಪಣಿ—ಇವೆರಡು (೨೪–೨೫) ಶ್ಲೋಕಗಳು ನನಗೆ ಸರಿಯಾಗಿ ತಿಳಿದಿಲ್ಲ. ಇವುಗಳ ಶಬ್ದಾರ್ಥ ಗೀತೆಯ ಶಿಕ್ಷಣಕ್ಕೆ ಹೊಂದದು ಆ ಶಿಕ್ಷಣಾನುಸಾರ, ಭಕ್ತಿಪೂರ್ಣನಾಗಿ, ಸೇವಾಮಾರ್ಗದ ಉಪಾಸನೆ ಮಾಡುವವನಿಗೆ, ಜ್ಞಾನ ಪ್ರಾಪ್ತವಾದವನಿಗೆ, ಯಾವಾಗ ಸತ್ತರೂ ಮೋಕ್ಷ ಸಿಗಲೇಬೇಕು ಈ ಶ್ಲೋಕಗಳ ಶಬ್ದಾರ್ಥ ಇದಕ್ಕೆ ವಿರೋಧವಾಗಿದೆ. ಯಜ್ಞ ಮಾಡುವವನಿಗೆ, ಜ್ಞಾನಪ್ರಾಪ್ತಿಯಾದವನಿಗೆ, ಬ್ರಹ್ಮವಿದನಿಗೆ ಎಂದರೆ ಜ್ಞಾನಿಯಾದವನಿಗೆ ಸಾಯುವಾಗಲೂ ಅದೇ ಸ್ಥಿತಿಯಿದ್ದರೆ ಮೋಕ್ಷ ಲಭಿಸುತ್ತದೆ ಎಂಬ ಭಾವಾರ್ಥವೂ ಆಗಬಹುದು ಅದಕ್ಕೆ ಬದಲಾಗಿ ಯಜ್ಞಮಾಡದವನು, ಜ್ಞಾನ ಲಭಿಸದವನು, ಭಕ್ತಿಯ ಅರಿವಿಲ್ಲದವನು, ಚಂದ್ರಲೋಕವನ್ನು ಅಥವಾ ಕ್ಷಣಿಕ ಲೋಕವನ್ನು ಪಡೆದು, ಪುನಃ ಭವಚಕ್ರದಲ್ಲಿ ಸುತ್ತುತ್ತಾನೆ ಚಂದ್ರನಿಗೆ ಸ್ವಂತ ಜ್ಯೋತಿಯಿಲ್ಲ.

---

ಯತ್ರ ಕಾಲೇತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।
ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥ ೨೩ ॥

ಅಗ್ನಿರ್ಜ್ಯೋತಿರಹಶ್ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ ೨೪ ॥

ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।
ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥ ೨೫ ॥

ಜಗತ್ತಿನಲ್ಲಿ ಜ್ಞಾನ, ಅಜ್ಞಾನ—ಎರಡು ಪರಂಪರಾಗತ ಮಾರ್ಗ ಇವೆ ಒಂದರಿಂದ, ಜ್ಞಾನಮಾರ್ಗದಿಂದ ಮನುಷ್ಯ ಮೋಕ್ಷ ಪಡೆಯುತ್ತಾನೆ, ಮತ್ತೊಂದರಿಂದ, ಅಜ್ಞಾನಮಾರ್ಗದಿಂದ ಪುನರ್ಜನ್ಮ ಹೊಂದುತ್ತಾನೆ. ||೨೬||

ಪಾರ್ಥ, ಈ ಎರಡೂ ಮಾರ್ಗಗಳನ್ನರಿತ ಯಾವ ಯೋಗಿಯೂ ಮೋಹವಶನಾಗನು. ಆದುದರಿಂದ ನೀನು ಯಾವಾಗಲೂ ಯೋಗಯುಕ್ತನಾಗಿರಬೇಕು. || ೨೭ ||

ಟಿಪ್ಪಣಿ—ಎರಡು ಮಾರ್ಗಗಳನ್ನೂ ಅರಿತವನು, ಸಮತ್ವಭಾವವುಳ್ಳನು, ಕತ್ತಲೆಯ ಅಜ್ಞಾನದ ಮಾರ್ಗವನ್ನು ತುಳಿಯನು, ಮೋಹವಶನಾಗನೆಂದರೆ ಇದೇ ಅರ್ಥ

ಇದನ್ನರಿತ ಬಳಿಕ ವೇದ, ಯಜ್ಞ, ತಪಸ್ಸು, ದಾನಗಳಲ್ಲಿ ಹೇಳಿರುವ ಪುಣ್ಯಫಲಗಳನ್ನು ದಾಟಿ ಯೋಗಿ ಉತ್ತಮವಾದ ಆದಿಸ್ಥಾನವನ್ನು ಹೊಂದುತ್ತಾನೆ || ೨೮ ||

ಟಿಪ್ಪಣಿ—ಎಂದರೆ ಜ್ಞಾನ, ಭಕ್ತಿ, ಸೇವಾಕಾರ್ಯಗಳ ಮೂಲಕ ಸಮಭಾವ ಪಡೆದವನಿಗೆ ಸಕಲ ಪುಣ್ಯಗಳ ಫಲವೂ ಸಿಗುತ್ತದೆ ಅಷ್ಟು ಮಾತ್ರವಲ್ಲದೆ ಅವನಿಗೆ ಪರಮ ಮೋಕ್ಷಪದವೂ ಲಭಿಸುತ್ತದೆ.

---

**ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಶ್ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿಮನ್ಯಯಾಽಽವರ್ತತೇ ಪುನಃ || ೨೬ ||**

**ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ || ೨೭ ||**

**ವೇದೇಷು ಯಜ್ಞೇಷು ತಪಸ್ಸು ಚೈವ**
**ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂಸ್ಥಾನಮುಪೈತಿ ಚಾದ್ಯಮ್ || ೨೮ ||**

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ಅಕ್ಷರಬ್ರಹ್ಮಯೋಗವೆಂಬ ಎಂಟನೆಯ ಅಧ್ಯಾಯ

---

---

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ಅಕ್ಷರಬ್ರಹ್ಮಯೋಗೋ ನಾಮ ಅಷ್ಟಮೋಽಧ್ಯಾಯಃ ॥**

---

## ಅಧ್ಯಾಯ ೯

### ರಾಜವಿದ್ಯಾ-ರಾಜಗುಹ್ಯಯೋಗ

**[ಇದರಲ್ಲಿ ಭಕ್ತಿಮಹಿಮೆಯನ್ನು ವರ್ಣಿಸಿದೆ.]**

**ಶ್ರೀ ಭಗವಂತ :**

ನೀನು ದ್ವೇಷರಹಿತ. ಆದುದರಿಂದ ಗುಹ್ಯಕ್ಕಿಂತ ಗುಹ್ಯವಾದ ಅನುಭವ ಪೂರ್ಣ ಜ್ಞಾನವನ್ನು ನಾನು ನಿನಗೆ ನೀಡುತ್ತೇನೆ ಅದನ್ನರಿತು ನೀನು ಅಕಲ್ಯಾಣದಿಂದ ಮುಕ್ತನಾಗುತ್ತೀ || ೧ ||

ವಿದ್ಯೆಗಳಲ್ಲೆಲ್ಲ, ಗೂಢಗಳಿಗೆಲ್ಲ ಇದು ರಾಜ ಈ ವಿದ್ಯೆ ಪವಿತ್ರ, ಪ್ರತ್ಯಕ್ಷಾನುಭವಕ್ಕೆ ಯೋಗ್ಯ, ಧಾರ್ಮಿಕ ಆಚರಿಸಲು ಸುಲಭ, ಅವಿನಾಶಿ. || ೨ ||

ಯಾರಿಗೆ ಈ ಧರ್ಮದಲ್ಲಿ ಶ್ರದ್ಧೆ ಇಲ್ಲವೋ ಅವರು ನನ್ನನ್ನು ಪಡೆಯದೆ ಮೃತ್ಯುಮಯ ಸಂಸಾರಮಾರ್ಗಕ್ಕೆ ಬಾರಿಬಾರಿಗೂ ಬರುತ್ತಾರೆ || ೩ ||

---

### ಅಥ ನವಮೋಽಧ್ಯಾಯಃ

**ಶ್ರೀ ಭಗವಾನುವಾಚ**

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ |**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ || ೧ ||**

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ |**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ || ೨ ||**

**ಅಶ್ರದ್ಧಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ |**
**ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ || ೩ ||**

ಈ ಸಮಗ್ರ ಜಗತ್ತು ನನ್ನ ಅವ್ಯಕ್ತಸ್ವರೂಪದಿಂದ ತುಂಬಿದೆ ನನ್ನಲ್ಲಿ—ನನ್ನ ಆಧಾರದ ಮೇಲೆ—ಎಲ್ಲ ಪ್ರಾಣಿಗಳೂ ಇವೆ ನಾನು ಅವುಗಳ ಆಧಾರದ ಮೇಲಿಲ್ಲ || ೪ ||

ಆದರೂ ಪ್ರಾಣಿಗಳು ನನ್ನಲ್ಲಿಲ್ಲವೆನ್ನಬಹುದು. ನನ್ನ ಈ ಯೋಗಬಲವನ್ನು ನೀನು ನೋಡು ನಾನು ಜೀವಗಳನ್ನು ಪೋಷಣೆಮಾಡುವವನು, ಆದರೂ ನಾನು ಅವುಗಳಲ್ಲಿ ಇಲ್ಲ. ಆದರೆ ಅವುಗಳ ಉತ್ಪತ್ತಿಗೆ ನಾನು ಕಾರಣ || ೫ ||

ಟಿಪ್ಪಣಿ—'ನನ್ನಲ್ಲಿ ಸಕಲ ಭೂತಗಳೂ ಇವೆ, ಇಲ್ಲ, ಅವುಗಳಲ್ಲಿ ನಾನು ಇದೇನೆ, ಇಲ್ಲ' ಇದು ಈಶ್ವರನ ಯೋಗಬಲ, ಅವನ ಮಾಯೆ, ಅವನ ಚಮತ್ಕಾರ ಭಗವಂತ ಕೂಡ ಮನುಷ್ಯರ ಭಾಷೆಯಲ್ಲಿಯೇ ಈಶ್ವರನ ವರ್ಣನೆ ಮಾಡಬೇಕಾಯಿತು ಅದರಿಂದ ಅನೇಕ ಪ್ರಕಾರದ ಭಾಷೆಯ ಪ್ರಯೋಗಮಾಡಿ ಆತ ಮನುಷ್ಯನನ್ನು ಸಂತುಷ್ಟಿಗೊಳಿಸಿದಾನೆ ಎಲ್ಲವೂ ಈಶ್ವರಮಯ; ಆದ್ದರಿಂದ ಎಲ್ಲವೂ ಅವನಲ್ಲಿವೆ ಅವನು ಅಲಿಪ್ತ, ಅವನು ಪ್ರಾಕೃತ ಕರ್ತನಾಗಿಲ್ಲ, ಆದ್ದರಿಂದ ಲವನಲ್ಲಿ ಜೀವ ಇಲ್ಲವೆನ್ನಬಹುದು ಆದರೆ ಅವನ ಭಕ್ತರಲ್ಲಿ ಇದ್ದೇ ಇದಾನೆ ನಾಸ್ತಿಕರಲ್ಲಿ ಅವರ ದೃಷ್ಟಿಯಿಂದ ಅವನು ಇಲ್ಲ ಇದಕ್ಕೆ ಅವನ ಚಮತ್ಕಾರವಲ್ಲದಿದ್ದರೆ ಮತ್ತೇನೆನ್ನಬೇಕು ?

ಸರ್ವತ್ರ ಸಂಚರಿಸುವ ಮಹಾವಾಯು ಆಕಾಶದಲ್ಲಿ ಇರುವಂತೆ ಎಲ್ಲ ಪ್ರಾಣಿಗಳೂ ನನ್ನಲ್ಲಿ ಇವೆ ಎಂಬುದನ್ನು ತಿಳಿದುಕೊ || ೬ ||

---

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ |**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ || ೪ ||**

**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ |**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ || ೫ ||**

**ಯಥಾಽಽಕಾಶಸ್ಥಿತೋ ನಿತ್ಯಂ ವಾಯುಸ್ಸರ್ವತ್ರಗೋ ಮಹಾನ್ |**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ || ೬ ||**

ಕೌಂತೇಯ, ಎಲ್ಲಾ ಪ್ರಾಣಿಗಳೂ ಕಲ್ಪದ ಅಂತ್ಯದಲ್ಲಿ ನನ್ನ ಪ್ರಕೃತಿಯಲ್ಲಿ ಲಯವಾಗುತ್ತವೆ ಮತ್ತೆ ಕಲ್ಪದ ಆರಂಭವಾಗುತ್ತಲೇ ಅವುಗಳನ್ನು ಮತ್ತೆ ನಾನು ಸೃಷ್ಟಿಸುತ್ತೇನೆ || ೭ ||

ನನ್ನ ಮಾಯೆಯ ಬಲದಿಂದ ನಾನು ಈ ಪ್ರಕೃತಿಯ ಪ್ರಭಾವದ ಅಧೀನದಲ್ಲಿರುವ ಪ್ರಾಣಿಗಳ ಸಮಸ್ತ ಸಮುದಾಯವನ್ನೂ ಮತ್ತೆ ಮತ್ತೆ ಉತ್ಪನ್ನಮಾಡುತ್ತೇನೆ || ೮ ||

ಧನಂಜಯ, ಈ ಕರ್ಮಗಳು ನನ್ನನ್ನು ಬಂಧಿಸವು ಏಕೆಂದರೆ, ನಾನು ಅವುಗಳಲ್ಲಿ ಉದಾಸೀನನಾಗಿ, ಆಸಕ್ತಿರಹಿತನಾಗಿ ವರ್ತಿಸುತ್ತೇನೆ || ೯ ||

ನನ್ನ ಅಧಿಕಾರದಲ್ಲಿದ್ದು ಸ್ಥಾವರ, ಜಂಗಮ ಜಗತ್ತನ್ನು ಪ್ರಕೃತಿ ಉತ್ಪನ್ನ ಮಾಡುತ್ತದೆ. ಈ ಕಾರಣದಿಂದ ಜಗತ್ತು ಚಕ್ರದಂತೆ ಸುತ್ತುತ್ತಿರುತ್ತದೆ. || ೧೦ ||

ನಾನು ಪ್ರಾಣಿಮಾತ್ರಗಳ ಮಹೇಶ್ವರನೆಂದವರ ಭಾವವನ್ನರಿಯದೆ ಮೂರ್ಖರು ಮನುಷ್ಯರೂಪಧಾರಿಯೆಂದು ನನ್ನನ್ನು ಅವಜ್ಞಗೊಳಿಸುತ್ತಾರೆ. || ೧೧ ||

---

**ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಂ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ || ೭ ||**

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ || ೮ ||**

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು || ೯ ||**

**ಮಯಾಽಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।**
**ಹೇತುನಾಽನೇನ ಕೌಂತೇಯ ಜಗದ್ವಿಪರಿವರ್ತತೇ || ೧೦ ||**

**ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ || ೧೧ ||**

ಟಿಪ್ಪಣಿ—ಏಕೆಂದರೆ, ಈಶ್ವರನ ಸತ್ತೆಯನ್ನು ಮನ್ನಿಸದವರು ದೇಹದಲ್ಲಿರುವ ಅಂತರ್ಯಾಮಿಯನ್ನು ಅರಿಯಲಾರರು ಅದರ ಅಸ್ತಿತ್ವವನ್ನು ತಿರಸ್ಕರಿಸುತ್ತಾ ಜಡವಾದಿಗಳಾಗಿಯೆ ಉಳಿಯುತ್ತಾರೆ

ವ್ಯರ್ಥ ಆಸೆಪಡುವವರು, ವ್ಯರ್ಥ ಕೆಲಸ ಮಾಡುವವರು, ವ್ಯರ್ಥ ಜ್ಞಾನದ ಮೂಢ ಜನರು, ಮೋಹಾಸಕ್ತಿಯಲ್ಲಿ ಕೆಡಹುವ ರಾಕ್ಷಸೀ-ಆಸುರೀ ಪ್ರಕೃತಿಯ ಆಶ್ರಯಹೊಂದುತ್ತಾರೆ || ೧೨ ||

ಆದರೆ, ಪಾರ್ಥ, ಮಹಾತ್ಮರು ದೈವೀಪ್ರಕೃತಿಗೆ ಶರಣುಹೋಗಿ ನನ್ನನ್ನು ಪ್ರಾಣಿಗಳ ಆದಿಕಾರಣವಾದ ಅವಿನಾಶಿ ಎಂದರಿತು ಏಕನಿಷ್ಠೆಯಿಂದ ಭಜಿಸುತ್ತಾರೆ || ೧೩ ||

ದೃಢವ್ರತರು, ಪ್ರಯತ್ನಶೀಲರು ನಿರಂತರವೂ ನನ್ನ ಕೀರ್ತನೆ ಮಾಡುತ್ತಾರೆ, ಭಕ್ತಿಯಿಂದ ನನಗೆ ನಮಿಸುತ್ತಾರೆ ನಿತ್ಯವೂ ನನ್ನನ್ನೇ ಧ್ಯಾನಿಸುತ್ತ ನನ್ನ ಉಪಾಸನೆ ಮಾಡುತ್ತಾರೆ || ೧೪ ||

ಮತ್ತೆ ಕೆಲವರು ಅದ್ವೈತರೂಪದಿಂದಲೋ, ದ್ವೈತರೂಪದಿಂದಲೋ ಅಥವಾ ಅನೇಕ ರೂಪಗಳಲ್ಲಿಯೋ ಸರ್ವತ್ರ ಇರುವ ನನ್ನನ್ನು ಜ್ಞಾನದ ಮೂಲಕ ಪೂಜೆ ಮಾಡುತ್ತಾರೆ || ೧೫ ||

---

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ |**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ || ೧೨ ||**

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ |**
**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ || ೧೩ ||**

**ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ |**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ || ೧೪ ||**

**ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ |**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ || ೧೫ ||**

ಯಜ್ಞದ ಸಂಕಲ್ಪ ನಾನು, ಯಜ್ಞವೂ ನಾನು  ಯಜ್ಞದ ಮೂಲಕ ನಾನು ಪಿತೃಗಳಿಗೂ ಆಧಾರ  ಯಜ್ಞದ ವನಸ್ಪತಿಯೂ ನಾನೆ, ಮಂತ್ರವೂ ನಾನೆ, ಆಹುತಿಯೂ ನಾನೆ, ಅಗ್ನಿಯೂ ನಾನೆ, ಹವನದ್ರವ್ಯವೂ ನಾನೇ ||೧೬||

ಈ ಜಗತ್ತಿನ ತಂದೆ, ತಾಯಿ, ಆಧಾರ, ಅಜ್ಜ, ತಿಳಿಯಲು ಯೋಗ್ಯ, ಪವಿತ್ರ ಓಂಕಾರ, ಋಗ್ವೇದ ಸಾಮವೇದ ಯಜುರ್ವೇದ—ಎಲ್ಲವೂ ನಾನೇ || ೧೭ ||

ಗತಿ ನಾನು, ಸಕಲರ ಪೋಷಕ ನಾನು  ಪ್ರಭು, ಸಾಕ್ಷಿ, ನಿವಾಸ, ಆಶ್ರಯ, ಹಿತೇಚ್ಛು ನಾನು, ಉತ್ಪತ್ತಿ, ನಾಶ, ಸ್ಥಿತಿ, ಭಂಡಾರ, ಅವ್ಯಯ ಬೀಜ—ಎಲ್ಲವೂ ನಾನೇ || ೧೮ ||

ಬಿಸಿಲನ್ನು ನಾನು ಕೊಡುತ್ತೇನೆ, ಮಳೆ ಸುರಿಸುತ್ತೇನೆ, ಅದನ್ನು ತಡೆಯುತ್ತೇನೆ  ನಾನೇ ಅಮರತ್ವ; ಮೃತ್ಯುವೂ ನಾನೇ  ಅರ್ಜುನ! ಸತ್–ಅಸತ್‌ಗಳೂ ನಾನೇ || ೧೯ ||

---

**ಅಹಂ ಕ್ರತುರಹಂ ಯಜ್ಞಃ ಸ್ವಧಾಽಹಮಹಮೌಷಧಮ್ |**
**ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ || ೧೬ ||**

**ಪಿತಾಽಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ |**
**ವೇದ್ಯಂ ಪವಿತ್ರಮೋಂಕಾರಋಕ್ಸಾಮಯಜುರೇವ ಚ || ೧೭ ||**

**ಗತಿರ್ಭರ್ತಾ ಪ್ರಭುಸ್ಸಾಕ್ಷೀ ನಿವಾಸಶ್ಶರಣಂ ಸುಹೃತ್ |**
**ಪ್ರಭವಃ ಪ್ರಲಯಃ ಸ್ಥಾನಂ ನಿದಾನಂ ಬೀಜಮವ್ಯಯಮ್ || ೧೮ ||**

**ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ |**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ || ೧೯ ||**

ಮೂರು ವೇದಗಳಂತೆ (ಋಕ್, ಯಜುಸ್, ಸಾಮಗಳ) ಕರ್ಮಮಾಡುವವರು ಸೋಮರಸ ಕುಡಿದು ನಿಷ್-ಪಾಪ ಯಜ್ಞದ ಮೂಲಕ ನನ್ನನ್ನು ಪೂಜಿಸಿ ಸ್ವರ್ಗವನ್ನು ಇಚ್ಛಿಸುತ್ತಾರೆ ಅವರು ಪವಿತ್ರ ದೇವಲೋಕವನ್ನು ಪಡೆದು ದಿವ್ಯಭೋಗಗಳನ್ನು ಭೋಗಿಸುತ್ತಾರೆ. || ೨೦ ||

ಟಿಪ್ಪಣಿ—ಎಲ್ಲ ವೈದಿಕ ಕ್ರಿಯೆಗಳೂ ಫಲದ ಇಚ್ಛೆಯಿಂದಲೇ ಮಾಡಲ್ಪಡುತ್ತಿದ್ದವು ಅವುಗಳಲ್ಲಿ ಹಲವು ಕ್ರಿಯೆಗಳಲ್ಲಿ ಸೋಮಪಾನ ಮಾಡುತ್ತಿದ್ದರು ಅದರ ಪ್ರಸ್ತಾಪ ಇಲ್ಲಿದೆ ಈ ಕ್ರಿಯೆಗಳಾವುವೋ ಸೋಮರಸವೆಂದರೇನೋ ಇಂದು ಯಾರೂ ಸರಿಯಾಗಿ ವಿವರಿಸಲಾರರು

ಆ ವಿಶಾಲ ಸ್ವರ್ಗವನ್ನು ಉಪಭೋಗಿಸಿ, ಪುಣ್ಯ ಕ್ಷೀಣವಾದ ಬಳಿಕ ಅವರು ಮತ್ತೆ ಮೃತ್ಯುಲೋಕಕ್ಕೆ ಹಿಂದಿರುಗುತ್ತಾರೆ ಮೂರು ವೇದಗಳ ಅನುಸಾರವಾಗಿ ಕರ್ಮ ಮಾಡುವ ಇವರು ಫಲವನ್ನು ಬಯಸುವುದರಿಂದ ಜನನ-ಮರಣಗಳ ಸುಳಿಯಲ್ಲಿ ಸಿಕ್ಕಿರುತ್ತಾರೆ || ೨೧ ||

ಯಾರು ಅನನ್ಯಭಾವದಿಂದ ನನ್ನನ್ನು ಚಿಂತಿಸುತ್ತಾ ನನ್ನನ್ನೇ ಭಜಿಸುತ್ತಾರೊ, ನನ್ನಲ್ಲಿಯೇ ರತವಾಗಿರುವ ಅಂಥವರ ಯೋಗಕ್ಷೇಮವನ್ನು ನಾನು ವಹಿಸಿಕೊಳ್ಳುತ್ತೇನೆ || ೨೨ ||

---

ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ
ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।
ತೇ ಪುಣ್ಯಮಾಸಾದ್ಯ ಸುರೇಂದ್ರಲೋಕ-
ಮಶ್ನಂತಿ ದಿವ್ಯಾನ್ದಿವಿ ದೇವಭೋಗಾನ್ || ೨೦ ||

ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ
ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।
ಏವಂ ತ್ರಯೀ ಧರ್ಮಮನುಪ್ರಪನ್ನಾ
ಗತಾಗತಂ ಕಾಮಕಾಮಾ ಲಭಂತೇ || ೨೧ ||

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ||೨೨||

ಟಿಪ್ಪಣಿ—ಯೋಗಿಗಳನ್ನು ಗುರುತಿಸಲು ಮೂರು ಸೊಗಸಾದ ಲಕ್ಷಣಗಳಿವೆ—ಸಮತ್ವ, ಕರ್ಮವಲ್ಲಿ ಕುಶಲತೆ, ಅನನ್ಯಭಕ್ತಿ ಇವು ಮೂರೂ ಒಂದರಲ್ಲೊಂದು ಓತಪ್ರೋತವಾಗಿರಬೇಕು. ಭಕ್ತಿಯಿಲ್ಲದೆ ಸಮತ್ವ ಬಾರದು, ಸಮತ್ವವಿಲ್ಲದೆ ಭಕ್ತಿ ಹುಟ್ಟದು. ಕರ್ಮಕೌಶಲವಿಲ್ಲದೆ ಭಕ್ತಿ-ಸಮತ್ವಗಳು ಬರೀ ಆಭಾಸವಾಗುವ ಭಯವಿದೆ ಸಿಗದ ವಸ್ತುವನ್ನು ಸಿಗುವಂತೆ ಮಾಡಿಕೊಳ್ಳುವುದೇ ಯೋಗ, ದೊರೆತುದನ್ನು ಸುರಕ್ಷಿತವಾಗಿ ಇಡುವುದೇ ಕ್ಷೇಮ

ಕೌಂತೇಯ, ಯಾರು ಶ್ರದ್ಧಾಪೂರ್ವಕ ಅನ್ಯದೇವತೆಗಳನ್ನು ಪೂಜಿಸುತ್ತಾರೋ ಅವರೂ ಕೂಡ, ವಿಧಿವಿಹೀನವಾಗಿ ಪೂಜಿಸಿದರೂ, ನನ್ನನ್ನೇ ಪೂಜಿಸುತ್ತಾರೆ || ೨೩ ||

ಟಿಪ್ಪಣಿ—ವಿಧಿವಿಹೀನವೆಂದರೆ ಅಜ್ಞಾನವಶರಾಗಿ, ನಾನು ನಿರಂಜನ-ನಿರಾಕಾರ ವಸ್ತು ಎಂದು ತಿಳಿಯದೆ.

ಸಕಲ ಯಜ್ಞಗಳ ಭೋಕ್ತೃವಾದ ಸ್ವಾಮಿ ನಾನು. ಈ ನಿಜವಾದ ಸ್ವರೂಪವನ್ನು ಅರಿಯದೆ ಅವರು ಜಾರಿಬೀಳುತ್ತಾರೆ. || ೨೪ ||

ದೇವತೆಗಳ ಪೂಜೆ ಮಾಡುವವರಿಗೆ ದೇವಲೋಕ. ಪಿತೃಪೂಜೆ ಮಾಡುವವರಿಗೆ ಪಿತೃಲೋಕ ಭೂತಪ್ರೇತಾದಿಗಳನ್ನು ಪೂಜಿಸುವವರಿಗೆ ಆ ಲೋಕಗಳು ನನ್ನನ್ನು ಭಜಿಸುವವರು ನನ್ನನ್ನೇ ಹೊಂದುತ್ತಾರೆ || ೨೫ ||

---

**ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ |**
**ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಮ್ || ೨೩ ||**

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ |**
**ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ || ೨೪ ||**

**ಯಾಂತಿ ದೇವವ್ರತಾ ದೇವಾನ್ ಪಿತೄನ್ ಯಾಂತಿ ಪಿತೃವ್ರತಾಃ |**
**ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾಮ್**
**|| ೨೫ ||**

ಎಲೆ, ಹೂ, ಹಣ್ಣು, ನೀರು ಯಾವುದನ್ನೆ ಆಗಲಿ ಪ್ರಯತ್ನಶೀಲರು ಭಕ್ತಿಪೂರ್ವಕವಾಗಿ ನನಗೆ ಅರ್ಪಿಸಿದರೆ, ಭಕ್ತಿಪೂರ್ವಕ ಸಮರ್ಪಿಸಿದುದನ್ನು ನಾನು ಸೇವಿಸುತ್ತೇನೆ || ೨೬ ||

ಟಿಪ್ಪಣಿ—ಎಂದರೆ ಈಶ್ವರಪ್ರೀತ್ಯರ್ಥವಾಗಿ ಸೇವಾಭಾವದಿಂದ ಏನು ಕೊಟ್ಟರೂ ಅದೆಲ್ಲವನ್ನೂ ಆಯಾ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿರುವ ಭಗವಂತನೇ ಗ್ರಹಣ ಮಾಡುತ್ತಾನೆ.

ಆದುದರಿಂದ, ಕೌಂತೇಯ, ಮಾಡುವುದನ್ನು, ತಿನ್ನುವುದನ್ನು, ಹವನ ದಲ್ಲಿ ಹಾಕುವುದನ್ನು, ದಾನ ನೀಡುವುದನ್ನು, ತಪಸ್ಸು ಗೈಯುವುದನ್ನು ಎಲ್ಲ ವನ್ನೂ ನನಗೆ ಅರ್ಪಿಸಿಯೇ ಮಾಡು. || ೨೭ ||

ಇದರಿಂದ ಶುಭಾಶುಭ ಫಲವೀವ ಕರ್ಮಬಂಧನದಿಂದ ನೀನು ಬಿಡುಗಡೆ ಹೊಂದಿ, ಫಲತ್ಯಾಗರೂಪದ ಸಮತ್ವವನ್ನೈದಿ, ಜನನ–ಮರಣಗಳಿಂದ ಮುಕ್ತನಾಗಿ ನನ್ನನ್ನು ಸೇರುತ್ತೀ || ೨೮ ||

ಸಕಲ ಪ್ರಾಣಿಗಳಲ್ಲಿಯೂ ನಾನು ಸಮಭಾವದಿಂದಿದೇನೆ ನನಗೆ ಅಪ್ರಿಯ, ಪ್ರಿಯ ಯಾವುದೂ ಇಲ್ಲ ಯಾರು ಭಕ್ತಿಪೂರ್ವಕವಾಗಿ ನನ್ನನ್ನು ಭಜಿಸುತ್ತಾರೋ ಅವರು ನನ್ನಲ್ಲಿ ಇರುತ್ತಾರೆ ನಾನೂ ಅವರಲ್ಲಿರುತ್ತೇನೆ || ೨೯ ||

---

**ಪುತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ || ೨೬ ||**

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ || ೨೭ ||**

**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ || ೨೮ ||**

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್**
**|| ೨೯ ||**

ಅತ್ಯಂತ ದುರಾಚಾರಿ ಕೂಡ ಅನನ್ಯಭಾವದಿಂದ ನನ್ನ ಭಜನೆ ಮಾಡಿದರೆ ಅವನು ಸಾಧುವಾದನೆಂತಲೇ ತಿಳಿಯಬೇಕು. ಏಕೆಂದರೆ, ಈಗ ಅವನದು ಶುಭಸಂಕಲ್ಪ ॥ ೩೦ ॥

ಟಿಪ್ಪಣಿ—ಏಕೆಂದರೆ ಅನನ್ಯಭಕ್ತಿ ದುರಾಚಾರವನ್ನು ನಾಶಗೊಳಿಸುತ್ತದೆ

ಅವನು ಬಹು ಬೇಗ ಧರ್ಮಾತ್ಮನಾಗಿ ನಿರಂತರ ಶಾಂತಿಹೊಂದುತ್ತಾನೆ. ಕೌಂತೇಯ, ನನ್ನ ಭಕ್ತನಿಗೆ ಎಂದಿಗೂ ನಾಶವಿಲ್ಲ, ತಿಳಿದುಕೊ. ॥ ೩೧ ॥

ಪಾಪಯೋನಿಗಳೂ ಹೆಂಗಸರೂ ವೈಶ್ಯರೂ ಶೂದ್ರರೂ ನನಗೆ ಶರಣು ಬಂದರೆ ಪರಮಗತಿಯನ್ನು ಹೊಂದುತ್ತಾರೆ ॥ ೩೨ ॥

ಹೀಗಿರುವಾಗ, ನನ್ನ ಭಕ್ತರಾದ ಪುಣ್ಯಶಾಲಿ ಬ್ರಾಹ್ಮಣರ, ರಾಜಋಷಿಗಳ ವಿಚಾರ ಹೇಳಲೇನು? ಆದುದರಿಂದ ಅನಿತ್ಯ, ಸುಖರಹಿತ ಲೋಕದಲ್ಲಿ ಜನ್ಮವೆತ್ತಿ, ನೀನು ನನ್ನನ್ನು ಭಜಿಸು. ॥ ೩೩ ॥

---

ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ ೩೦ ॥

ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।
ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥ ೩೧ ॥

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್
॥ ೩೨ ॥

ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।
ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ॥ ೩೩ ॥

ನನ್ನಲ್ಲಿ ಮನಸ್ಸಿಡು, ನನ್ನ ಭಕ್ತನಾಗು, ನನ್ನ ನಿಮಿತ್ತ ಯಜ್ಞಮಾಡು, ನನ್ನನ್ನು ನಮಸ್ಕರಿಸು, ನನ್ನಲ್ಲಿ ಪರಾಯಣನಾಗಿ ನನ್ನೊಂದಿಗೆ ಆತ್ಮವನ್ನು ಸೇರಿಸು, ನೀನು ನನ್ನನ್ನೇ ಹೊಂದುತ್ತೀಯೆ. ॥ ೩೪ ॥

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ರಾಜವಿದ್ಯಾ-ರಾಜಗುಹ್ಯಯೋಗವೆಂಬ ಒಂಬತ್ತನೆಯ ಅಧ್ಯಾಯ

---

---

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥ ೩೪ ॥**

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ರಾಜವಿದ್ಯಾರಾಜಗುಹ್ಯಯೋಗೋ ನಾಮ ನವಮೋಽಧ್ಯಾಯಃ ॥**

---

## ಅಧ್ಯಾಯ ೧೦

## ವಿಭೂತಿಯೋಗ

[ಏಳು, ಎಂಟು, ಒಂಬತ್ತನೆಯ ಅಧ್ಯಾಯಗಳಲ್ಲಿ ಭಕ್ತಿ ಇತ್ಯಾದಿಗಳ ನಿರೂಪಣೆ ಮಾಡಿದನಂತರ ಭಗವಂತ ತನ್ನ ಭಕ್ತರಿಗಾಗಿ ಇಲ್ಲಿ ತನ್ನ ಅನಂತವಿಭೂತಿಗಳ ಕಿಂಚಿತ್ ದಿಗ್‌ದರ್ಶನ ಮಾಡಿಸುತ್ತಾನೆ.]

**ಶ್ರೀ ಭಗವಂತ :**

ಮತ್ತೆ ನನ್ನ ಪರಮವಚನವನ್ನು ಕೇಳು ಈ ವಚನಗಳನ್ನು ನಾನು ನಿನಗೆ, ನನಗೆ ಪ್ರಿಯನಾದವನಿಗೆ, ನಿನ್ನ ಹಿತಕ್ಕೋಸ್ಕರ ಹೇಳುತ್ತೇನೆ || ೧ ||

ದೇವತೆಗಳು, ಮಹರ್ಷಿಗಳು ನನ್ನ ಉತ್ಪತ್ತಿಯನ್ನು ತಿಳಿದಿಲ್ಲ ಏಕೆಂದರೆ, ನಾನೇ ಸರ್ವ ಪ್ರಕಾರದಿಂದ ದೇವತೆಗಳ, ಮಹರ್ಷಿಗಳ ಆದಿಕಾರಣ || ೨ ||

ಮೃತ್ಯುಲೋಕದಲ್ಲಿರುವ ಜ್ಞಾನಿಗಳು ಲೋಕಗಳ ಮಹೇಶ್ವರನಾದ ನನ್ನನ್ನು ಅಜನ್ಮ ಅನಾದಿ ರೂಪದಲ್ಲಿ ತಿಳಿದು ಸಕಲ ಪಾಪಗಳಿಂದ ಮುಕ್ತರಾಗುತ್ತಾರೆ || ೩ ||

---

## ಅಥ ದಶಮೋಽಧ್ಯಾಯಃ

---

**ಶ್ರೀ ಭಗವಾನುವಾಚ**

**ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ |**
**ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ || ೧ ||**

**ನ ಮೇ ವಿದುಸ್ಸುರಗಣಾಃ ಪ್ರಭವಂ ನ ಮಹರ್ಷಯಃ |**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ || ೨ ||**

**ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ |**
**ಅಸಮ್ಮೂಢಸ್ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ || ೩ ||**

ಬುದ್ಧಿ, ಜ್ಞಾನ, ಅಮೂಢತೆ, ಕ್ಷಮೆ, ಸತ್ಯ, ಇಂದ್ರಿಯನಿಗ್ರಹ, ಶಾಂತಿ, ಸುಖ, ದುಃಖ, ಜನ್ಮ, ಮೃತ್ಯು, ಅಭಯ, ಅಹಿಂಸೆ, ಸಮತೆ, ಸಂತೋಷ, ತಪಸ್ಸು, ದಾನ, ಯಶಸ್ಸು, ಅಪಯಶಸ್ಸು—ಹೀಗೆ ಪ್ರಾಣಿಗಳ ಭಿನ್ನಭಿನ್ನ ಭಾವಗಳು ನನ್ನಿಂದಲೇ ಉತ್ಪನ್ನವಾಗುತ್ತವೆ || ೪–೫ ||

ಸಪ್ತಋಷಿಗಳು, ಅವರಿಗೆ ಮುಂಚೆ ನಾಲ್ವರು ಸನಕಾದಿಗಳು, (ಹದಿನಾಲ್ಕು ಜನ) ಮನುಗಳು, ನನ್ನ ಸಂಕಲ್ಪದಿಂದ ಹುಟ್ಟಿದರು ಅವರಿಂದ ಈ ಲೋಕಗಳು ಹುಟ್ಟಿದವು || ೬ ||

ನನ್ನ ಈ ವಿಭೂತಿಯನ್ನೂ ಶಕ್ತಿಯನ್ನೂ ಯಥಾರ್ಥವಾಗಿ ತಿಳಿದವನು ಅವಿಚಲವಾದ ಸಮತೆಯನ್ನು ಹೊಂದುತ್ತಾನೆ || ೭ ||

ಎಲ್ಲದರ ಉತ್ಪತ್ತಿಗೂ ನಾನೇ ಕಾರಣ. ಎಲ್ಲವೂ ನನ್ನ ಮೂಲಕವೇ ಪ್ರವೃತ್ತವಾಗುತ್ತವೆ. ಇದನ್ನು ತಿಳಿದು ಜಾಣರು ಭಾವಪೂರ್ವಕ ನನ್ನನ್ನು ಭಜಿಸುತ್ತಾರೆ. || ೮ ||

---

ಬುದ್ಧಿರ್ಜ್ಞಾನಮಸಮ್ಮೋಹಃ ಕ್ಷಮಾ ಸತ್ಯಂ ದಮಃ ಶಮಃ ।
ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ ||೪||

ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।
ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ || ೫ ||

ಮಹರ್ಷಯಸ್ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।
ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ || ೬ ||

ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।
ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ || ೭ ||

ಅಹಂ ಸರ್ವಸ್ಯ ಪ್ರಭವೋ ಮತ್ತಸ್ಸರ್ವಂ ಪ್ರವರ್ತತೇ ।
ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ || ೮ ||

ನನ್ನಲ್ಲಿಯೇ ಚಿತ್ತವಿಟ್ಟು ನನ್ನಲ್ಲಿಯೇ ಪ್ರಾಣಾರ್ಪಣೆ ಮಾಡಿದವರು ಪರಸ್ಪರ ಉಪದೇಶಮಾಡುತ್ತ ನಿತ್ಯವೂ ನನ್ನ ಕೀರ್ತನೆ ಮಾಡುತ್ತಾರೆ, ಸಂತೋಷ–ಆನಂದಗಳಿಂದ ಜೀವನ ನಡೆಸುತ್ತಾರೆ || ೯ ||

ನನ್ನಲ್ಲಿ ಈ ರೀತಿ ತನ್ಮಯರಾದವರಿಗೆ, ಪ್ರೇಮಪೂರ್ವಕ ನನ್ನ ಭಜನೆ ಮಾಡುವವರಿಗೆ, ನಾನು ಜ್ಞಾನವನ್ನು ಕೊಡುತ್ತೇನೆ ಅದರಿಂದ ಅವರು ನನ್ನನ್ನು ಹೊಂದುತ್ತಾರೆ. || ೧೦ ||

ಅವರಲ್ಲಿ ದಯೆಯಿಟ್ಟು ಅವರ ಹೃದಯದಲ್ಲಿ ವಾಸಿಸುವ ನಾನು ಜ್ಞಾನ ರೂಪದ ಪ್ರಕಾಶಮಯ ದೀಪದಿಂದ ಅವರ ಅಜ್ಞಾನಾಂಧಕಾರವನ್ನು ನಾಶ ಗೊಳಿಸುತ್ತೇನೆ. || ೧೧ ||

**ಅರ್ಜುನ :**

ಭಗವಂತ! ನೀನು ಪರಬ್ರಹ್ಮ, ಪರಮಧಾಮ, ಪರಮ ಪವಿತ್ರ. ಎಲ್ಲ ಋಷಿಗಳು, ದೇವಋಷಿ ನಾರದ, ಅಸಿತ, ದೇವಲ, ವ್ಯಾಸಾದಿಗಳು ನಿನ್ನನ್ನು ಅವಿನಾಶಿ, ದಿವ್ಯಪುರುಷ, ಆದಿದೇವ, ಅಜನ್ಮ, ಈಶ್ವರರೂಪ ಎಂದು ತಿಳಿದಿದಾರೆ. ನೀನೂ ಅದನ್ನೇ ಹೇಳುತ್ತಿದೀಯೆ. || ೧೨–೧೩ ||

---

**ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಮ್ ।**
**ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ || ೯ ||**

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ||೧೦||**

**ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ || ೧೧ ||**

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ || ೧೨ ||**

**ಆಹುಸ್ತ್ವಾಮೃಷಯಸ್ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ || ೧೩ ||**

ಕೇಶವ! ನೀನು ಹೇಳಿದುದು ಸತ್ಯವೆಂದು ನಾನು ತಿಳಿದಿದೇನೆ. ಭಗವಂತ! ದೇವತೆಗಳಾಗಲಿ ದಾನವರಾಗಲಿ ನಿನ್ನ ಸ್ವರೂಪವನ್ನು ತಿಳಿಯರು ॥ ೧೪ ॥

ಪುರುಷೋತ್ತಮ, ಜೀವಗಳ ಪಿತ, ಜೀವೇಶ್ವರ, ದೇವದೇವ, ಜಗದೀಶ್ವರ, ನಿನ್ನನ್ನು ನೀನೇ ಬಲ್ಲೆ ॥ ೧೫ ॥

ಯಾವ ವಿಭೂತಿಗಳ ದ್ವಾರ ನೀನು ಈ ಲೋಕಗಳಲ್ಲಿ ವ್ಯಾಪಿಸಿ ಕೊಂಡಿದೀಯೋ ಆ ನಿನ್ನ ದಿವ್ಯ ವಿಭೂತಿಗಳನ್ನು ನನಗೆ ಪೂರ್ಣವಾಗಿ ತೋರಿಸು ॥ ೧೬ ॥

ಯೋಗಿ, ನಿತ್ಯವೂ ನಿನ್ನ ಚಿಂತನೆ ಮಾಡುತ್ತ ನಿನ್ನನ್ನು ಹೇಗೆ ಮರೆಯ ಬಲ್ಲೆ? ಭಗವನ್, ಯಾವ ಯಾವ ರೂಪದಲ್ಲಿ ನಿನ್ನ ಚಿಂತನೆ ಮಾಡಲಿ? ॥ ೧೭ ॥

ಜನಾರ್ದನ! ನಿನ್ನ ಶಕ್ತಿ–ವಿಭೂತಿಗಳ ವರ್ಣನೆಯನ್ನು ವಿಸ್ತಾರವಾಗಿ ಮತ್ತೆ ಹೇಳು ನಿನ್ನ ಅಮೃತಮಯ ವಾಣಿಯನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯೇ ಇಲ್ಲ ॥ ೧೮ ॥

---

ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।
ನ ಹಿ ತೇ ಭಗವನ್ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥ ೧೪ ॥

ಸ್ವಯಮೇವಾತ್ಮನಾಽತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।
ಭೂತಭಾವನ ಭೂತೇಶ ದೇವದೇವ ಜಗತ್ಪತೇ ॥ ೧೫ ॥

ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।
ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥ ೧೬ ॥

ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿಂತಯನ್ ।
ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ ॥ ೧೭ ॥

ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।
ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ ॥ ೧೮ ॥

**ಶ್ರೀ ಭಗವಂತ :**

ಕುರುಶ್ರೇಷ್ಠ ! ನನ್ನ ಮುಖ್ಯ ಮುಖ್ಯ ದಿವ್ಯ ವಿಭೂತಿಗಳನ್ನು ಹೇಳುತ್ತೇನೆ. ಅವುಗಳ ವಿಸ್ತಾರಕ್ಕಂತೂ ಅಂತವೇ ಇಲ್ಲ || ೧೯ ||

ನಾನು ಸಕಲ ಪ್ರಾಣಿಗಳ ಹೃದಯದಲ್ಲಿರುವ ಆತ್ಮ ಭೂತಮಾತ್ರಗಳ ಆದಿಯೂ ಮಧ್ಯವೂ ಅಂತವೂ ನಾನೇ. || ೨೦ ||

ಆದಿತ್ಯರಲ್ಲಿ ವಿಷ್ಣು ನಾನು, ಜ್ಯೋತಿಗಳಲ್ಲಿ ಪ್ರಕಾಶಮಾನ ಸೂರ್ಯ ನಾನು. ವಾಯುಗಳಲ್ಲಿ ಮರೀಚಿ, ನಕ್ಷತ್ರಗಳಲ್ಲಿ ಚಂದ್ರ ನಾನು || ೨೧ ||

ವೇದಗಳಲ್ಲಿ ಸಾಮವೇದ, ದೇವತೆಗಳಲ್ಲಿ ಇಂದ್ರ, ಇಂದ್ರಿಯಗಳಲ್ಲಿ ಮನಸ್ಸು, ಪ್ರಾಣಿಗಳಲ್ಲಿ ಚೇತನ ನಾನು. || ೨೨ ||

ರುದ್ರರಲ್ಲಿ ಶಂಕರ ನಾನು, ಯಕ್ಷರಾಕ್ಷಸರಲ್ಲಿ ಕುಬೇರ ನಾನು, ವಸುಗಳಲ್ಲಿ ಅಗ್ನಿ, ಪರ್ವತಗಳಲ್ಲಿ ಮೇರು ನಾನೇ. || ೨೩ ||

---

**ಶ್ರೀ ಭಗವಾನುವಾಚ**

ಹಂತ ತೇ ಕಥಯಿಷ್ಯಾಮಿ ದಿವ್ಯಾಹ್ಯಾತ್ಮವಿಭೂತಯಃ |
ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ || ೧೯ ||

ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ |
ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ || ೨೦ ||

ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ |
ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ || ೨೧ ||

ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ |
ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ || ೨೨ ||

ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ |
ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ || ೨೩ ||

ಪಾರ್ಥ, ಪುರೋಹಿತರಲ್ಲಿ ಮುಖ್ಯನಾದ ಬೃಹಸ್ಪತಿ ನಾನೆಂದು ತಿಳಿ. ಸೇನಾಪತಿಗಳಲ್ಲಿ ಕಾರ್ತಿಕಸ್ವಾಮಿ ನಾನು ಸರೋವರಗಳಲ್ಲಿ ಸಾಗರ ನಾನು. || ೨೪ ||

ಮಹರ್ಷಿಗಳಲ್ಲಿ ಭೃಗು ನಾನು, ವಚನಗಳಲ್ಲಿ ಏಕಾಕ್ಷರಿಯಾದ 'ಓಂ' ಕಾರ ನಾನೇ, ಯಜ್ಞಗಳಲ್ಲಿ ಜಪಯಜ್ಞ, ಸ್ಥಾವರಗಳಲ್ಲಿ ಹಿಮಾಲಯ ನಾನು. || ೨೫ ||

ವೃಕ್ಷಗಳಲ್ಲಿ ಅಶ್ವತ್ಥ, ದೇವಋಷಿಗಳಲ್ಲಿ ನಾರದ, ಗಂಧರ್ವರಲ್ಲಿ ಚಿತ್ರರಥ, ಸಿದ್ಧರಲ್ಲಿ ಕಪಿಲಮುನಿಯೂ ನಾನೇ. || ೨೬ ||

ಅಶ್ವಗಳಲ್ಲಿ ಅಮೃತದಿಂದ ಹುಟ್ಟಿದ ಉಚ್ಚೈಶ್ರವ ನಾನೆಂದು ತಿಳಿ ಆನೆಗಳಲ್ಲಿ ಐರಾವತ, ನರರಲ್ಲಿ ನರಪತಿ ನಾನು || ೨೭ ||

ಆಯುಧಗಳಲ್ಲಿ ನಾನು ವಜ್ರ, ಗೋವುಗಳಲ್ಲಿ ಕಾಮಧೇನು ಪ್ರಜೋತ್ಪತ್ತಿಯ ಕಾರಣವಾದ ಕಾಮದೇವ ನಾನು, ಸರ್ಪಗಳಲ್ಲಿ ವಾಸುಕಿ ನಾನು || ೨೮ ||

---

ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ ।
ಸೇನಾನೀನಾಮಹಂ ಸ್ಕಂಧಃ ಸರಸಾಮಸ್ಮಿ ಸಾಗರಃ || ೨೪ ||

ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।
ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ||೨೫||

ಅಶ್ವತ್ಥಸ್ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।
ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ || ೨೬ ||

ಉಚ್ಚೈಶ್ಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।
ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಮ್ || ೨೭ ||

ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।
ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ || ೨೮ ||

ನಾಗಗಳಲ್ಲಿ ಆದಿಶೇಷ, ಜಲಚರಗಳಲ್ಲಿ ವರುಣ, ಪಿತೃಗಳಲ್ಲಿ ಅರ್ಯಮ, ಶಾಸಿಸುವವರಲ್ಲಿ ಯಮ ನಾನೇ || ೨೯ ||

ದೈತ್ಯರಲ್ಲಿ ಪ್ರಹ್ಲಾದ ನಾನು, ಎಣಿಸುವವರಲ್ಲಿ ಕಾಲ ನಾನು. ಪಶುಗಳಲ್ಲಿ ಸಿಂಹ, ಪಕ್ಷಿಗಳಲ್ಲಿ ಗರುಡ || ೩೦ ||

ಪಾವನಮಾಡುವವರಲ್ಲಿ ಪವನ, ಶಸ್ತ್ರಧಾರಿಗಳಲ್ಲಿ ಪರಶುರಾಮ, ಮೀನುಗಳಲ್ಲಿ ಮೊಸಳೆ, ನದಿಗಳಲ್ಲಿ ಗಂಗೆ ನಾನು || ೩೧ ||

ಅರ್ಜುನ, ಸೃಷ್ಟಿಯ ಆರಂಭ, ಮಧ್ಯ, ಅಂತ ನಾನು. ವಿದ್ಯೆಗಳಲ್ಲಿ ಅಧ್ಯಾತ್ಮ ವಿವಾದಮಾಡುವಲ್ಲಿ ವಾದ || ೩೨ ||

ಅಕ್ಷರಗಳಲ್ಲಿ 'ಅ'ಕಾರ, ಸಮಾಸಗಳಲ್ಲಿ ದ್ವಂದ್ವ ನಾನು. ಅವಿನಾಶಿಯಾದ ಕಾಲ ನಾನು, ಸರ್ವವ್ಯಾಪಕತ್ವವನ್ನು ಧರಿಸುವವನೂ ನಾನೇ ||೩೩||

---

**ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।**
**ಪಿತೄಣಾಮರ್ಯಮಾ ಚಾಸ್ಮಿ ಯಮಸ್ಸಂಯಮತಾಮಹಮ್ ॥೨೯॥**

**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ ।**
**ಮೃಗಾಣಾಂ ಚ ಮೃಗೇಂದ್ರೋಽಹಂ ವೈನತೇಯಶ್ಚ ಪಕ್ಷಿಣಾಮ್॥೩೦॥**

**ಪವನಃ ಪವತಾಮಸ್ಮಿ ರಾಮಶ್ಶಸ್ತ್ರಭೃತಾಮಹಮ್ ।**
**ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥ ೩೧ ॥**

**ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ ।**
**ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥ ೩೨ ॥**

**ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಸ್ಸಾಮಾಸಿಕಸ್ಯ ಚ ।**
**ಅಹಮೇವಾಕ್ಷಯಃ ಕಾಲೋ ಧಾತಾಽಹಂ ವಿಶ್ವತೋಮುಖಃ ॥೩೩॥**

ಸಕಲವನ್ನೂ ಸಂಹರಿಸುವ ಮೃತ್ಯು ನಾನು, ಭವಿಷ್ಯದಲ್ಲಿ ಉತ್ಪನ್ನವಾಗುವುದರ ಉತ್ಪತ್ತಿಕಾರಣವೂ ನಾನೇ ಸ್ತ್ರೀಯರಲ್ಲಿ ಕೀರ್ತಿ, ಲಕ್ಷ್ಮಿ, ವಾಣಿ, ಸ್ಮೃತಿ, ಮೇಧಾ (ಬುದ್ಧಿ), ಧೃತಿ (ಧೈರ್ಯ), ಕ್ಷಮೆ—ಇವು ನಾನು || ೩೪ ||

ಸಾಮಗಳಲ್ಲಿ ಬೃಹತ್ (ದೊಡ್ಡ) ಸಾಮ, ಛಂದಸ್ಸುಗಳಲ್ಲಿ ಗಾಯತ್ರಿ ನಾನು ತಿಂಗಳಲ್ಲಿ ಮಾರ್ಗಶೀರ್ಷ, ಋತುಗಳಲ್ಲಿ ವಸಂತ. || ೩೫ ||

ವಂಚಕರಲ್ಲಿ ದ್ಯೂತ ನಾನು. ಪ್ರತಾಪಶಾಲಿಗಳಲ್ಲಿ ಪ್ರತಾಪ, ಜಯ, ನಿಶ್ಚಯ. ಸಾತ್ತ್ವಿಕಭಾವವುಳ್ಳವರ ಸತ್ತ್ವ ನಾನು || ೩೬ ||

ಟಿಪ್ಪಣಿ—ವಂಚಕರಲ್ಲಿ ದ್ಯೂತ ನಾನು ಎಂದು ಹೇಳಿರುವುದರಿಂದ ಗಾಬರಿಯಾಗುವ ಕಾರಣವಿಲ್ಲ ಇಲ್ಲಿ ಸಾರಾಸಾರದ ನಿರ್ಣಯವಿಲ್ಲ ಆಗುವುದೆಲ್ಲವೂ ಈಶ್ವರನ ಆಜ್ಞೆ ಇಲ್ಲದೆ ಆಗಲಾರದೆಂಬುದನ್ನು ತೋರಲಾಗಿದೆ ಎಲ್ಲವೂ ಈಶ್ವರಾಧೀನ ಎಂಬುದನ್ನು ತಿಳಿದರೆ ವಂಚಕನೂ ತನ್ನ ಅಭಿಮಾನವನ್ನು ಬಿಟ್ಟು ಮೋಸವನ್ನು ತ್ಯಜಿಸುತ್ತಾನೆ.

ವೃಷ್ಣಿಕುಲದಲ್ಲಿ ವಾಸುದೇವ, ಪಾಂಡವರಲ್ಲಿ ಧನಂಜಯ, ಮುನಿಗಳಲ್ಲಿ ವ್ಯಾಸ, ಕವಿಗಳಲ್ಲಿ ಉಶನ ನಾನು || ೩೭ ||

---

ಮೃತ್ಯುಸ್ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ ।
ಕೀರ್ತಿಶ್ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ||೩೪||

ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಮ್ ।
ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ
|| ೩೫ ||

ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।
ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಮ್ || ೩೬ ||

ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ ।
ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ || ೩೭ ||

ರಾಜ್ಯಕರ್ತರ ದಂಡ, ಜಯ ಬಯಸುವವನ ನೀತಿ ನಾನು, ಗುಹ್ಯಗಳ ಮೌನ, ಜ್ಞಾನಿಗಳ ಜ್ಞಾನ ನಾನು || ೩೮ ||

ಅರ್ಜುನ, ಸಕಲ ಪ್ರಾಣಿಗಳ ಉತ್ಪತ್ತಿಕಾರಣ ನಾನು, ಸ್ಥಾವರ-ಜಂಗಮಗಳಲ್ಲಿ ನನ್ನ ಹೊರತು ಯಾವುದೂ ಇಲ್ಲ || ೩೯ ||

ಪರಂತಪ, ನನ್ನ ದಿವ್ಯವಿಭೂತಿಗಳಿಗೆ ಪಾರವೇ ಇಲ್ಲ ವಿಭೂತಿಗಳ ಈ ವಿಸ್ತಾರವನ್ನು ನಾನು ಕೇವಲ ದೃಷ್ಟಾಂತಕ್ಕಾಗಿ ಹೇಳಿದೆ || ೪೦ ||

ಯಾವುದು ವಿಭೂತಿಮಂತ, ಲಕ್ಷ್ಮೀಯುತ, ಪ್ರಭಾವಶಾಲಿಯೋ ಅದೆಲ್ಲವೂ ನನ್ನ ತೇಜಸ್ಸಿನ ಅಂಶದಿಂದಲೇ ಆಯಿತು, ತಿಳಿ || ೪೧ ||

ಅಥವಾ ಅರ್ಜುನ, ಇದನ್ನು ವಿಸ್ತಾರವಾಗಿ ತಿಳಿದು ಏನು ಮಾಡುತ್ತೀ? ನನ್ನ ಒಂದು ಅಂಶಮಾತ್ರದಿಂದ ಈ ಸಮಗ್ರ ಜಗತ್ತನ್ನೆಲ್ಲಾ ಧಾರಣೆ ಮಾಡಿದೇನೆ. || ೪೨ ||

---

**ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಂ || ೩೮ ||**

**ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।**
**ನ ತದಸ್ತಿ ವಿನಾ ಯತ್ಸ್ಯಾತ್ ಮಾಯಾ ಭೂತಂ ಚರಾಚರಮ್ ||೩೯||**

**ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।**
**ಏಷತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ||೪೦||**

**ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛತ್ವಂ ಮಮ ತೇಜೋಂಶಸಂಭವಂ || ೪೧ ||**

**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ || ೪೨ ||**

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ವಿಭೂತಿಯೋಗವೆಂಬ ಹತ್ತನೆಯ ಅಧ್ಯಾಯ

---

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ವಿಭೂತಿಯೋಗೋ ನಾಮ ದಶಮೋಽಧ್ಯಾಯಃ ||**

# ಅಧ್ಯಾಯ ೧೧

## ವಿಶ್ವರೂಪದರ್ಶನಯೋಗ

[ಈ ಅಧ್ಯಾಯದಲ್ಲಿ ಭಗವಂತ ಅರ್ಜುನನಿಗೆ ತನ್ನ ವಿರಾಟ್ ಸ್ವರೂಪವನ್ನು ತೋರುತ್ತಾನೆ. ಭಕ್ತರಿಗೆ ಈ ಅಧ್ಯಾಯ ಬಹು ಪ್ರಿಯ. ಇದರಲ್ಲಿ ವಾದವಿಲ್ಲ, ಬರೀ ಕಾವ್ಯ. ಈ ಅಧ್ಯಾಯವನ್ನು ಪಠಿಸುವಾಗ ಮನುಷ್ಯನಿಗೆ ಆಯಾಸವಾಗದು.]

**ಅರ್ಜುನ :**

ನನ್ನಲ್ಲಿ ಕೃಪೆಯಿಟ್ಟು ನೀನು ಈ ಆಧ್ಯಾತ್ಮಿಕ ಪರಮರಹಸ್ಯವನ್ನು ಹೇಳಿದೆ. ನೀನು ಹೇಳಿದ ಈ ವಚನಗಳಿಂದ ನನ್ನ ಮೋಹ ದೂರವಾಯಿತು. ॥ ೧ ॥

ಪ್ರಾಣಿಗಳ ಉತ್ಪತ್ತಿ, ನಾಶದ ವಿಚಾರದಲ್ಲಿ ವಿಸ್ತಾರವಾಗಿ ನಿನ್ನಿಂದ ಕೇಳಿದೆ ಕಮಲಪತ್ರಾಕ್ಷ! ಅದೇ ರೀತಿ ನಿನ್ನ ಅವಿನಾಶಿ ಮಹಾತ್ಮ್ಯವನ್ನೂ ಕೇಳಿದೆ. ॥ ೨ ॥

---

## ಅಥೈಕಾದಶೋಽಧ್ಯಾಯಃ

---

**ಅರ್ಜುನ ಉವಾಚ**

**ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥ ೧ ॥**

**ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್ ॥ ೨ ॥**

ಪರಮೇಶ್ವರ, ನೀನು ನಿನ್ನ ಪರಿಚಯವನ್ನು ಹೇಗೆ ಮಾಡಿಸುತ್ತೀಯೋ ಹಾಗೆ, ಪುರುಷೋತ್ತಮ, ನಿನ್ನ ಈಶ್ವರೀ ರೂಪದ ದರ್ಶನಮಾಡಲು ನನಗೆ ಬಯಕೆಯಾಗುತ್ತದೆ || ೩ ||

ಪ್ರಭೋ, ನನ್ನಂಥವನಿಗೆ ಈ ದರ್ಶನ ಶಕ್ಯವೆಂದು ನೀನು ತಿಳಿದರೆ, ಆ ಅವ್ಯಯರೂಪದ ದರ್ಶನಮಾಡಿಸು || ೪ ||

**ಶ್ರೀ ಭಗವಾನ್ :**

ಪಾರ್ಥ, ನನಗೆ ನೂರಾರು ಸಾವಿರಾರು ರೂಪಗಳಿವೆ ದಿವ್ಯ, ಭಿನ್ನ ಭಿನ್ನ ಆಕೃತಿಗಳ ವಿವಿಧ ರೂಪ ಅವು. || ೫ ||

ಭಾರತ! ಆದಿತ್ಯ, ವಸು, ರುದ್ರ, ಅಶ್ವಿನಿಗಳನ್ನು ಮರುತರನ್ನು ನೋಡು. ಹಿಂದೆ ನೋಡದೆ ಇದ್ದ ಅನೇಕ ಆಶ್ಚರ್ಯಗಳನ್ನೂ ನೋಡು || ೬ ||

ನನ್ನೀದೇಹದಲ್ಲಿ ಏಕರೂಪದಲ್ಲಿ ಅಡಗಿರುವ ಸಕಲ ಸ್ಥಾವರ-ಜಂಗಮ ಜಗತ್ತನ್ನೂ, ಯಾವುದನ್ನು ನೀನು ನೋಡಲು ಅಪೇಕ್ಷಿಸುತ್ತಿದ್ದೆಯೋ ಅದನ್ನೂ ಈಗ ನೋಡು || ೭ ||

---

**ಏವಮೇತದ್ಯಥಾಽಽತ್ಥ ತ್ವಮಾತ್ಮಾನಂ ಪರಮೇಶ್ವರ ।**
**ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ || ೩ ||**

**ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಂ || ೪ ||**

**ಶ್ರೀ ಭಗವಾನುವಾಚ**

**ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ || ೫ ||**

**ಪಶ್ಯಾದಿತ್ಯಾನ್ ವಸೂನ್ ರುದ್ರಾನಶ್ವಿನೌ ಮರುತಸ್ತಥಾ ।**
**ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ || ೬ ||**

**ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ ।**
**ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ || ೭ ||**

ನೀನು ಈ ಚರ್ಮದ ಕಣ್ಣುಗಳಿಂದ ನನ್ನನ್ನು ನೋಡಲಾರೆ ನಿನಗೆ ದಿವ್ಯಚಕ್ಷುಗಳನ್ನು ಕೊಡುತ್ತೇನೆ ನನ್ನ ಈಶ್ವರೀಯೋಗವನ್ನು ನೋಡು ॥ ೮ ॥

**ಸಂಜಯ :**

ರಾಜ! ಇಷ್ಟು ಹೇಳಿ ಯೋಗೀಶ್ವರ ಕೃಷ್ಣ ಪಾರ್ಥನಿಗೆ ತನ್ನ ಪರಮ ಈಶ್ವರೀರೂಪವನ್ನು ತೋರಿಸಿದ ॥ ೯ ॥

ಅನೇಕ ಮುಖ–ನೇತ್ರ, ಅನೇಕ ಅದ್ಭುತ ನೋಟ, ಅನೇಕ ದಿವ್ಯ ಭೂಷಣ, ಕೈಗಳಲ್ಲಿ ಅನೇಕ ದಿವ್ಯಶಸ್ತ್ರ—ಅದಕ್ಕೆ ॥ ೧೦ ॥

ಅನೇಕ ದಿವ್ಯಮಾಲೆಗಳನ್ನೂ ವಸ್ತ್ರಗಳನ್ನೂ ಧರಿಸಿತ್ತು. ಶರೀರದ ಮೇಲೆ ದಿವ್ಯ ಸುಗಂಧಿತ ಲೇಪ. ಹೀಗೆ ಸರ್ವಪ್ರಕಾರದಿಂದಲೂ ಆಶ್ಚರ್ಯಮಯ, ಅನಂತ, ಸರ್ವವ್ಯಾಪಿ ಆ ದೇವಸ್ವರೂಪ ॥ ೧೧ ॥

ಆಕಾಶದಲ್ಲಿ ಸಾವಿರಾರು ಸೂರ್ಯರ ತೇಜಸ್ಸು ಒಂದೇ ಸಲ ಬೆಳಗಿದರೆ ಅದನ್ನು ಈ ಮಹಾತ್ಮನ ತೇಜಸ್ಸಿನೊಂದಿಗೆ ಹೋಲಿಸಬಹುದು. ॥ ೧೨ ॥

---

**ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ॥ ೮ ॥**

**ಸಂಜಯ ಉವಾಚ**

**ಏವಮುಕ್ತ್ವಾ ತತೋ ರಾಜನ್ ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥ ೯ ॥**

**ಅನೇಕವಕ್ತ್ರನಯನಮನೇಕಾದ್ಭುತದರ್ಶನಮ್ ।**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥ ೧೦ ॥**

**ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಂ ॥ ೧೧ ॥**

**ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।**
**ಯದಿ ಭಾಸ್ಸದೃಶೀಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥ ೧೨ ॥**

ಆ ದೇವದೇವನ ಶರೀರದಲ್ಲಿ ಅನೇಕ ಪ್ರಕಾರವಾಗಿ ವಿಭಾಗಿಸಿದ್ದ ಸಮಗ್ರ ಜಗತ್ತನ್ನೂ ಅರ್ಜುನ ಏಕತ್ರ ನೋಡಿದ || ೧೩ ||

ಆಶ್ಚರ್ಯಚಕಿತ, ಪುಲಕಿತ ಆದ ಧನಂಜಯ ತಲೆಬಾಗಿ ಕೈಜೋಡಿಸಿ ಹೀಗೆ ಹೇಳಿದ || ೧೪ ||

**ಅರ್ಜುನ :**

ದೇವ, ನಿನ್ನ ದೇಹದಲ್ಲಿ ನಾನು ದೇವತೆಗಳನ್ನೂ, ಭಿನ್ನ ಭಿನ್ನ ಪ್ರಕಾರದ ಸಕಲ ಪ್ರಾಣಿಸಮುದಾಯವನ್ನೂ, ಕಮಲಾಸನದ ಮೇಲೆ ವಿರಾಜಮಾನ ಬ್ರಹ್ಮನನ್ನೂ, ಸಕಲ ಋಷಿಗಳನ್ನೂ, ದಿವ್ಯಸರ್ಪಗಳನ್ನೂ ನೋಡುತ್ತಿದೇನೆ. || ೧೫ ||

ಅನೇಕ ಕೈಗಳೂ, ಹೊಟ್ಟೆಗಳೂ, ಕಣ್ಣುಗಳೂ ಉಳ್ಳ ನಿನ್ನ ಅನಂತ ರೂಪವನ್ನು ನಾನು ನೋಡುತ್ತಿದೇನೆ ನಿನಗೆ ಅಂತವೂ ಇಲ್ಲ, ಮಧ್ಯವೂ ಇಲ್ಲ, ಆದಿಯೂ ಇಲ್ಲ ವಿಶ್ವೇಶ್ವರ! ನಾನು ನಿನ್ನ ವಿಶ್ವರೂಪದರ್ಶನ ಮಾಡುತ್ತಿದೇನೆ || ೧೬ ||

---

**ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ |**
**ಅಪಶ್ಯದ್ದೇವದೇವಸ್ಯ ಶರೀರೇ ಪಾಂಡವಸ್ತದಾ || ೧೩ ||**

**ತತಸ್ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ |**
**ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ || ೧೪ ||**

**ಅರ್ಜುನ ಉವಾಚ**

**ಪಶ್ಯಾಮಿ ದೇವಾಂಸ್ತವ ದೇವ ದೇಹೇ**
**ಸರ್ವಾಂಸ್ತಥಾ ಭೂತವಿಶೇಷ ಸಂಘಾನ್ |**
**ಬ್ರಹ್ಮಾಣಮೀಶಂ ಕಮಲಾಸನಸ್ಥ-**
**ಮೃಷೀಂಶ್ಚ ಸರ್ವಾನುರಗಾಂಶ್ಚ —ವ್ಯಾನ್ || ೧೫ ||**

**ಅನೇಕಬಾಹೂದರವಕ್ತ್ರನೇತ್ರಂ**
**ಪಶ್ಯಾಮಿ ತ್ವಾಂ ಸರ್ವತೋಽನಂತ ರೂಪಮ್ |**
**ನಾಂತಂ ನ ಮಧ್ಯಂ ನ ಪುನಸ್ತವಾದಿಂ**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪಂ || ೧೬ ||**

ಮುಕುಟಧಾರಿ, ಗದಾಧಾರಿ, ಚಕ್ರಧಾರಿ, ತೇಜಃಪುಂಜ, ಸುತ್ತಲೂ ಹೊಳೆಯುತ್ತಿರುವೆ, ಅಪರಿಮಿತ, ನೋಡಲು ಅಸಾಧ್ಯ, ಪ್ರಜ್ವಲಿತ ಅಗ್ನಿ ಅಥವಾ ಸೂರ್ಯನಂತೆ ಸಕಲ ದಿಕ್ಕುಗಳಲ್ಲಿಯೂ ಜಗಜಗಿಸುತ್ತಿರುವೆ ಇಂಥ ನಿನ್ನ ರೂಪನ್ನು ನಾನು ನೋಡುತ್ತಿದೇನೆ. || ೧೭ ||

ನೀನು ಅರಿಯಲು ಯೋಗ್ಯನಾದ ಪರಮ ಅಕ್ಷರರೂಪ, ಈ ಜಗತ್ತಿನ ಅಂತಿಮ ಆಧಾರ, ಸನಾತನಧರ್ಮದ ಅವಿನಾಶಿಯಾದ ರಕ್ಷಕ, ಸನಾತನ ಪುರುಷ ಎಂದು ತಿಳಿದಿದೇನೆ || ೧೮ ||

ಯಾರಿಗೆ ಆದಿ-ಮಧ್ಯಾಂತಗಳಿಲ್ಲವೋ, ಯಾರ ಶಕ್ತಿ ಅನಂತವೋ, ಯಾರಿಗೆ ಅನಂತ ಭುಜಗಳಿವೆಯೋ, ಯಾರಿಗೆ ಸೂರ್ಯ-ಚಂದ್ರ ರೂಪದ ಕಣ್ಣೋ, ಯಾರ ಮುಖ ಪ್ರಜ್ವಲಿತ ಅಗ್ನಿಯಂತಿದೆಯೋ, ಯಾರು ತನ್ನ ತೇಜಸ್ಸಿನಿಂದ ಈ ಜಗತ್ತನ್ನು ತಪಿಸುತ್ತಿದಾನೋ ಅಂಥ ನಿನ್ನನ್ನು ನಾನು ನೋಡುತ್ತಿದೇನೆ. || ೧೯ ||

---

ಕಿರೀಟಿನಂ ಗದಿನಂ ಚಕ್ರಿಣಂ ಚ
ತೇಜೋರಾಶಿಂ ಸರ್ವತೋ ದೀಪ್ತಿಮಂತಮ್ |
ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾ-
ದ್ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ || ೧೭ ||

ತ್ವಮಕ್ಷರಂ ಪರಮಂ ವೇದಿತವ್ಯಂ
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ |
ತ್ವಮವ್ಯಯಶ್ಶಾಶ್ವತಧರ್ಮಗೋಪ್ತಾ
ಸನಾತನಸ್ತ್ವಂ ಪುರುಷೋ ಮತೋ ಮೇ || ೧೮ ||

ಅನಾದಿಮಧ್ಯಾಂತಮನಂತವೀರ್ಯ-
ಮನಂತಬಾಹುಂ ಶಶಿಸೂರ್ಯನೇತ್ರಮ್ |
ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ
ಸ್ವತೇಜಸಾ ವಿಶ್ವಮಿದಂ ತಪಂತಮ್ || ೧೯ ||

ಆಕಾಶ, ಪೃಥ್ವಿಗಳ ಮಧ್ಯೆ ಈ ಅಂತರದಲ್ಲಿ, ಸಕಲ ದಿಕ್ಕುಗಳಲ್ಲಿ ನೀನು ವ್ಯಾಪ್ತನಾಗಿದೀಯೆ. ಮಹಾತ್ಮ, ನಿನ್ನ ಈ ಅದ್ಭುತ ಉಗ್ರರೂಪವನ್ನು ನೋಡಿ ಮೂರು ಲೋಕಗಳೂ ಗಡಗಡ ನಡುಗುತ್ತಿವೆ || ೨೦ ||

ಮತ್ತೆ ಈ ದೇವಗಣ ನಿನ್ನಲ್ಲಿ ಪ್ರವೇಶ ಮಾಡುತ್ತಿದೆ ಕೆಲವರು ಭಯಭೀತರಾಗಿ ಕೈಜೋಡಿಸಿ ನಿನ್ನ ಸ್ತುತಿ ಮಾಡುತ್ತಿದಾರೆ. ಮಹರ್ಷಿಗಳ, ಸಿದ್ಧರ ಸಮುದಾಯ 'ಜಗತ್ತಿಗೆ ಕಲ್ಯಾಣವಾಗಲಿ' ಎನ್ನುತ್ತ ಅನೇಕ ವಿಧ ದಿಂದ ನಿನ್ನ ಯಶೋಗಾನ ಮಾಡುತ್ತಿದೆ || ೨೧ ||

ರುದ್ರ, ಆದಿತ್ಯ, ವಸು, ಸಾಧ್ಯ, ವಿಶ್ವದೇವ, ಅಶ್ವಿನೀಕುಮಾರ, ಮರುತ, ಬಿಸಿಯನ್ನೆ ಕುಡಿವ ಪಿತೃಗಳು, ಗಂಧರ್ವ, ಯಕ್ಷ, ಅಸುರ, ಸಿದ್ಧರ ಸಮುದಾಯಗಳೆಲ್ಲವೂ ಬೆರಗಾಗಿ ನಿನ್ನನ್ನು ನೋಡುತ್ತಿವೆ || ೨೨ ||

---

ದ್ಯಾವಾಪೃಥಿವ್ಯೋರಿದಮಂತರಂ ಹಿ
ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ |
ದೃಷ್ಟ್ವಾಽದ್ಭುತಂ ರೂಪಮಿದಂ ತವೋಗ್ರಂ
ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ || ೨೦ ||

ಅಮೀ ಹಿ ತ್ವಾಂ ಸುರಸಂಘಾ ವಿಶಂತಿ
ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ |
ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ
ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ || ೨೧ ||

ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ
ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ |
ಗಂಧರ್ವಯಕ್ಷಾಸುರಸಿದ್ಧಸಂಘಾ
ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ || ೨೨ ||

ಮಹಾಬಾಹು, ಅನೇಕ ಮುಖ, ಕಣ್ಣು, ಕೈ, ತೊಡೆ, ಕಾಲು, ಹೊಟ್ಟೆ, ದವಡೆಗಳಿಂದ ವಿಕರಾಳವಾಗಿ ಕಾಣುವ ನಿನ್ನ ವಿಶಾಲ ರೂಪವನ್ನು ನೋಡಿ ಜನರು ವ್ಯಾಕುಲರಾಗಿದಾರೆ ನಾನೂ ವ್ಯಾಕುಲನಾಗಿದೇನೆ. || ೨೩ ||

ಆಕಾಶವನ್ನು ಮುಟ್ಟುತ್ತಿರುವ, ಜಗಜಗಿಸುವ, ಅನೇಕ ಬಣ್ಣಗಳ, ತೆರೆದ ಬಾಯಿಯ, ದೊಡ್ಡ ದೊಡ್ಡ ತೇಜಸ್ವಿ ನೇತ್ರಗಳ ನಿನ್ನನ್ನು ನೋಡಿ, ವಿಷ್ಣು, ನನ್ನ ಅಂತಃಕರಣದಲ್ಲಿ ವ್ಯಾಕುಲವಾಗಿದೆ. ಧೈರ್ಯ, ಶಾಂತಿ ತಳೆಯಲಾರೆ || ೨೪ ||

ಪ್ರಳಯಕಾಲದ ಅಗ್ನಿಯಂತಿರುವ ವಿಕರಾಳ ದವಡೆಗಳ ನಿನ್ನ ಮುಖ ನೋಡಿ ನನಗೆ ದಿಕ್ಕು ತಿಳಿಯದು, ಶಾಂತಿಯೂ ಸಿಗದು. ದೇವೇಶ, ಪ್ರಸನ್ನನಾಗು || ೨೫ ||

---

ರೂಪಂ ಮಹತ್ತೇ ಬಹುವಕ್ತ್ರನೇತ್ರಂ
ಮಹಾಬಾಹೋ ಬಹುಬಾಹೂರುಪಾದಮ್ ।
ಬಹೂದರಂ ಬಹುದಂಷ್ಟ್ರಾಕರಾಲಂ
ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಽಹಮ್ || ೨೩ ||

ನಭಸ್ಪೃಶಂ ದೀಪ್ತಮನೇಕವರ್ಣಂ
ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ ।
ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ
ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ || ೨೪ ||

ದಂಷ್ಟ್ರಾಕರಾಲಾನಿ ಚ ತೇ ಮುಖಾನಿ
ದೃಷ್ಟ್ವೈವ ಕಾಲಾನಲಸನ್ನಿಭಾನಿ ।
ದಿಶೋ ನ ಜಾನೇ ನ ಲಭೇ ಚ ಶರ್ಮ
ಪ್ರಸೀದ ದೇವೇಶ ಜಗನ್ನಿವಾಸ || ೨೫ ||

ಸಕಲ ರಾಜಸಮುದಾಯಸಹಿತರಾಗಿ ಧೃತರಾಷ್ಟ್ರನ ಮಕ್ಕಳೂ ಭೀಷ್ಮ, ದ್ರೋಣಾಚಾರ್ಯ, ಸೂತಪುತ್ರ ಕರ್ಣ, ನಮ್ಮ ಮುಖ್ಯ ಯೋಧರು, ಎಲ್ಲರೂ ವಿಕರಾಳ ದವಡೆಯ ನಿನ್ನ ಭಯಂಕರ ಮುಖದಲ್ಲಿ ವೇಗದಿಂದ ಪ್ರವೇಶಿಸುತ್ತಿದಾರೆ ಕೆಲವರ ತಲೆಗಳು ಚೂರುಚೂರಾಗಿ ನಿನ್ನ ಹಲ್ಲುಗಳ ಮಧ್ಯೆ ಸಿಲುಕಿಕೊಂಡಂತೆ ಕಾಣುತ್ತಿವೆ || ೨೬-೨೭ ||

ನದಿಗಳ ದೊಡ್ಡ ದೊಡ್ಡ ಪ್ರವಾಹಗಳು ಸಮುದ್ರದ ಕಡೆಗೆ ಓಡುವಂತೆ ಲೋಕನಾಯಕರು ಉರಿಯುತ್ತಿರುವ ನಿನ್ನ ಮುಖದಲ್ಲಿ ಪ್ರವೇಶಿಸುತ್ತಿದಾರೆ || ೨೮ ||

ಹಾರಿ ಬಂದು ಉರಿವ ದೀಪದಲ್ಲಿ ಬೀಳುವ ಪತಂಗಗಳಂತೆ ಇವರೆಲ್ಲರೂ ವೇಗದಿಂದ ನಿನ್ನ ಬಾಯಲ್ಲಿ ನುಗ್ಗುತ್ತಿದಾರೆ || ೨೯ ||

---

ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ
ಸರ್ವೇ ಸಹೈವಾವನಿಪಾಲ ಸಂಘೈಃ ।
ಭೀಷ್ಮೋ ದ್ರೋಣಸ್ಸೂತಪುತ್ರಸ್ತಥಾಸೌ
ಸಹಾಸ್ಮದೀಯೈರಪಿ ಯೋಧಮುಖ್ಯೈಃ || ೨೬ ||

ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ
ದಂಷ್ಟ್ರಾಕರಾಲಾನಿ ಭಯಾನಕಾನಿ ।
ಕೇಚಿದ್ವಿಲಗ್ನಾ ದಶನಾಂತರೇಷು
ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ || ೨೭ ||

ಯಥಾ ನದೀನಾಂ ಬಹವೋಽಂಬುವೇಗಾಃ
ಸಮುದ್ರಮೇವಾಭಿಮುಖಾ ದ್ರವಂತಿ ।
ತಥಾ ತವಾಮೀ ನರಲೋಕವೀರಾ
ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ || ೨೮ ||

ಯಥಾ ಪ್ರದೀಪ್ತಂ ಜ್ವಲನಂ ಪತಂಗಾ
ವಿಶಂತಿ ನಾಶಾಯ ಸಮೃದ್ಧವೇಗಾಃ ।
ತಥೈವ ನಾಶಾಯ ವಿಶಂತಿ ಲೋಕಾ-
ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ || ೨೯ ||

ಎಲ್ಲಾ ಲೋಕಗಳನ್ನೂ ಗ್ರಾಸವಾಗಿ ತೆಗೆದುಕೊಳ್ಳುತ್ತಾ, ಉರಿಯುತ್ತಿರುವ ಮುಖದಿಂದ ನೀನು ನೆಕ್ಕುತ್ತಿದೀಯೆ. ಸರ್ವವ್ಯಾಪಿ ವಿಷ್ಣು, ನಿನ್ನ ಉಗ್ರ ಪ್ರಕಾಶ ಸಮಗ್ರ ಜಗತ್ತನ್ನು ಬೆಳಗಿ ತಪಿಸುತ್ತಿದೆ || ೩೦ ||

ಉಗ್ರರೂಪ! ನೀನು ಯಾರು? ಹೇಳು. ಪ್ರಸನ್ನನಾಗು ಆದಿಕಾರಣನಾದ ನಿನ್ನನ್ನು ಅರಿಯಲಿಚ್ಛಿಸುತ್ತೇನೆ, ನಿನ್ನ ಪ್ರವೃತ್ತಿಯನ್ನು ನಾನರಿಯೆ || ೩೧ ||

**ಶ್ರೀ ಭಗವಂತ :**

ಲೋಕಗಳನ್ನು ನಾಶಮಾಡಲು ಹೊರಟಿರುವ ಕಾಲ ನಾನು ಲೋಕಗಳನ್ನೆಲ್ಲಾ ನಾಶಗೊಳಿಸಲೆಂದೇ ಇಲ್ಲಿಗೆ ಬಂದಿದೇನೆ. ಈ ಸೇನೆಗಳಲ್ಲಿ ಯುದ್ಧಕ್ಕಾಗಿ ಬಂದಿರುವ ಈ ಯೋಧರೆಲ್ಲರೂ, ನೀನು ಯುದ್ಧಮಾಡದೆಂದರೂ, ಬದುಕುವವರಲ್ಲ. || ೩೨ ||

---

ಲೇಲಿಹ್ಯಸೇ ಗ್ರಸಮಾನಸ್ಸಮಂತಾ-
ಲ್ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ |
ತೇಜೋಭಿರಾಪೂರ್ಯ ಜಗತ್ಸಮಗ್ರಂ
ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ || ೩೦ ||

ಆಖ್ಯಾಹಿ ಮೇ ಕೋ ಭವಾನುಗ್ರರೂಪೋ
ನಮೋಽಸ್ತು ತೇ ದೇವವರ ಪ್ರಸೀದ |
ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ
ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ || ೩೧ ||

ಶ್ರೀ ಭಗವಾನುವಾಚ

ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ
ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ |
ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ
ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ || ೩೨ ||

ಆದುದರಿಂದ ಏಳು, ಕೀರ್ತಿ ಗಳಿಸು. ಶತ್ರುಗಳನ್ನು ಗೆದ್ದು ಧನಧಾನ್ಯ ಸಮೃದ್ಧವಾದ ರಾಜ್ಯವನ್ನು ಭೋಗಿಸು ಇವರನ್ನೆಲ್ಲಾ ನಾನು ಮೊದಲೇ ಸಂಹರಿಸಿದೇನೆ ಸವ್ಯಸಾಚಿ! ನೀನು ಕೇವಲ ನಿಮಿತ್ತರೂಪನಾಗು. || ೩೩ ||

ದ್ರೋಣ, ಭೀಷ್ಮ, ಜಯದ್ರಥ, ಕರ್ಣ ಇತರ ಯೋಧರನ್ನು ನಾನು ಕೊಂದೇ ಇದೇನೆ ಅವರನ್ನೆ ನೀನು ಕೊಲ್ಲು. ಹೆದರಬೇಡ, ಯುದ್ಧಮಾಡು ಶತ್ರುಗಳನ್ನು ಗೆಲ್ಲುತ್ತೀ || ೩೪ ||

**ಸಂಜಯ :**

ಕೇಶವನ ಈ ಮಾತನ್ನು ಕೇಳಿ ಮುಕುಟಧಾರಿ ಅರ್ಜುನ ಗಡಗಡನೆ ನಡುಗುತ್ತ ಕೈಜೋಡಿಸಿ, ಬಾರಿಬಾರಿಗೂ ನಮಸ್ಕರಿಸುತ್ತಾ ಅಂಜುತಂಜುತ್ತ ಪ್ರಣಾಮ ಮಾಡಿ ಗದ್ಗದಿತ ಕಂಠನಾಗಿ ಹೀಗೆಂದ. || ೩೫ ||

---

**ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ**
**ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃದ್ಧಮ್ ।**
**ಮಯೈವೈತೇ ನಿಹತಾಃ ಪೂರ್ವಮೇವ**
**ನಿಮಿತ್ತಮಾತ್ರಂ ಭವ ಸವ್ಯಸಾಚಿನ್ || ೩೩ ||**

**ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ**
**ಕರ್ಣಂ ತಥಾಽನ್ಯಾನಪಿ ಯೋಧವೀರಾನ್ ।**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ**
**ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ || ೩೪ ||**

**ಸಂಜಯ ಉವಾಚ**

**ಏತಚ್ಛ್ರುತ್ವಾ ವಚನಂ ಕೇಶವಸ್ಯ**
**ಕೃತಾಂಜಲಿರ್ವೇಪಮಾನಃ ಕಿರೀಟೀ ।**
**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ**
**ಸಗದ್ಗದಂ ಭೀತಭೀತಃ ಪ್ರಣಮ್ಯ || ೩೫ ||**

**ಅರ್ಜುನನ :**

ಹೃಷೀಕೇಶ! ನಿನ್ನ ಕೀರ್ತನೆ ಮಾಡುತ್ತ ಲೋಕಕ್ಕೆ ಆಗುತ್ತಿರುವ ಹರ್ಷ, ನಿನ್ನಲ್ಲಿ ಹುಟ್ಟುವ ಪ್ರೀತಿ ಉಚಿತವಾಗಿದೆ ಭಯಭೀತರಾದ ರಾಕ್ಷಸರು ದಿಕ್ಕುದಿಕ್ಕಿಗೆ ಓಡುತ್ತಿದಾರೆ ಸಿದ್ಧಗಣಗಳು ನಿನಗೆ ನಮಸ್ಕಾರ ಮಾಡುತ್ತಿವೆ || ೩೬ ||

ಮಹಾತ್ಮ, ಅವರು ನಿಮಗೆ ನಮಸ್ಕರಿಸದಿರುವುದು ಹೇಗೆ? ನೀನು ಬ್ರಹ್ಮನಿಗಿಂತ ಶ್ರೇಷ್ಠ ಆದಿಕರ್ತ. ಅನಂತ, ದೇವೇಶ, ಜಗನ್ನಿವಾಸ! ನೀನು ಅಕ್ಷರ, ನೀನು ಸತ್, ಅಸತ್ ಇವಕ್ಕೆ ಅತೀತವಾದುದೂ ನೀನೇ || ೩೭ ||

ನೀನು ಆದಿದೇವ, ಪುರಾಣಪುರುಷ ನೀನು ಈ ವಿಶ್ವಕ್ಕೆ ಪರಮ ಆಶ್ರಯಸ್ಥಾನ ನೀನು ತಿಳಿದವನು, ತಿಳಿಯಲು ಯೋಗ್ಯನಾದವನು ನೀನು ಪರಮಧಾಮ ಅನಂತರೂಪ! ನೀನು ಜಗತ್ತಿನಲ್ಲಿ ವ್ಯಾಪ್ತನಾಗುತ್ತಿದೀಯೆ. || ೩೮ ||

---

**ಅರ್ಜುನ ಉವಾಚ**

ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ
ಜಗತ್ಪ್ರಹೃಷ್ಯತ್ಯನುರಜ್ಯತೇ ಚ ।
ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ
ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ || ೩೬ ||

ಕಸ್ಮಾಚ್ಚ ತೇ ನ ನಮೇರನ್ಮಹಾತ್ಮನ್
ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ।
ಅನಂತ ದೇವೇಶ ಜಗನ್ನಿವಾಸ
ತ್ವಮಕ್ಷರಂ ಸದಸತ್ತತ್ಪರಂ ಯತ್ || ೩೭ ||

ತ್ವಮಾದಿದೇವಃ ಪುರುಷಃ ಪುರಾಣ-
ಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।
ವೇತ್ತಾಽಸಿ ವೇದ್ಯಂ ಚ ಪರಂ ಚ ಧಾಮ
ತ್ವಯಾ ತತಂ ವಿಶ್ವಮನಂತರೂಪ || ೩೮ ||

ವಾಯು, ಯಮ, ಅಗ್ನಿ, ವರುಣ, ಚಂದ್ರ, ಪ್ರಜಾಪತಿ, ಪ್ರಪಿತಾಮಹನೂ ನೀನೇ ಸಾವಿರ ಬಾರಿ ನಿನಗೆ ನಮಸ್ಕಾರ ಮತ್ತೆ ಮತ್ತೆ ನಿನಗೆ ನಮಸ್ಕಾರ || ೩೯ ||

ಸರ್ವನೆ, ಮುಂದೆ ಹಿಂದೆ ಎಲ್ಲ ಕಡೆಯಿಂದಲೂ ನಿನಗೆ ನಮಸ್ಕಾರ. ನಿನ್ನ ವೀರ್ಯ ಅನಂತ, ಶಕ್ತಿ ಅಪಾರ. ಎಲ್ಲವನ್ನೂ ಧಾರಣೆಮಾಡಿ ನೀನೇ ಸರ್ವನಾಗಿದೀಯೆ || ೪೦ ||

ಈ ನಿನ್ನ ಮಹಿಮೆಯನ್ನರಿಯದೆ, ಮಿತ್ರನೆಂದು ತಿಳಿದು, ಮರವಿನಿಂದಲೋ ಪ್ರೇಮವಶನಾಗಿಯೋ ನಾನು ನಿನ್ನನ್ನು 'ಕೃಷ್ಣ, ಯಾದವ, ಸಖ' ಎಂದು ಕರೆದು ಅವಿವೇಕವನ್ನೇನಾದರೂ ಮಾಡಿದ್ದರೆ, ವಿನೋದವಾಗಿ ಆಟ

---

ವಾಯುರ್ಯಮೋಽಗ್ನಿರ್ವರುಣಶ್ಶಶಾಂಕಃ
ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।
ನಮೋ ನಮಸ್ತೇಽಸ್ತು ಸಹಸ್ರಕೃತ್ವಃ
ಪುನಶ್ಚ ಭೂಯೋಽಪಿ ನಮೋ ನಮಸ್ತೇ || ೩೯ ||

ನಮಃ ಪುರಸ್ತಾದಥಪೃಷ್ಠತಸ್ತೇ
ನಮೋಽಸ್ತು ತೇ ಸರ್ವತ ಏವ ಸರ್ವ ।
ಅನಂತವೀರ್ಯಾಮಿತವಿಕ್ರಮಸ್ತ್ವಂ
ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ || ೪೦ ||

ಸಖೇತಿ ಮತ್ವಾ ಪ್ರಸಭಂ ಯದುಕ್ತಂ
ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।
ಅಜಾನತಾ ಮಹಿಮಾನಂತವೇದಂ
ಮಯಾ ಪ್ರಮಾದಾತ್ಪ್ರಣಯೇನವಾಽಪಿ || ೪೧ ||

ಯಚ್ಚಾಪಹಾಸಾರ್ಥಮಸತ್ಕೃತೋಽಸಿ
ವಿಹಾರಶಯ್ಯಾಸನಭೋಜನೇಷು ।
ಏಕೋಽಥವಾಽಪ್ಯಚ್ಯುತ ತತ್ಸಮಕ್ಷಂ
ತತ್ ಕ್ಷಾಮಯೇತ್ವಾಮಹಮಪ್ರಮೇಯಮ್ || ೪೨ ||

ವಾಡುವಾಗಲೋ, ಊಟಮಾಡುವಾಗಲೋ, ಮಲಗಿದಾಗಲೋ, ಅಂತೂ ನಿನ್ನೊಟ್ಟಿಗಿದ್ದಾಗ ನನ್ನಿಂದ ಏನಾದರೂ ನಿನಗೆ ಅವಮಾನವಾಗಿದ್ದರೆ ಅದನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ || ೪೧–೪೨ ||

ಸ್ಥಾವರ–ಜಂಗಮ ಜಗತ್ತುಗಳಿಗೆ ನೀನು ತಂದೆ ನೀನು ಅವಕ್ಕೆ ಪೂಜ್ಯ, ಶ್ರೇಷ್ಠ, ಗುರು ನಿನಗೆ ಸಮಾನರಾರೂ ಇಲ್ಲ ನಿನಗಿಂತ ಹೆಚ್ಚಿನವರು ಹೇಗೆ ಸಾಧ್ಯ? ಮೂರು ಲೋಕಗಳಲ್ಲಿಯೂ ನಿನ್ನ ಸಾಮರ್ಥ್ಯಕ್ಕೆ ಸಾಟಿಯಿಲ್ಲ. || ೪೩ ||

ಆದುದರಿಂದ ಸಾಷ್ಟಾಂಗ ನಮಸ್ಕಾರಮಾಡಿ, ಪೂಜ್ಯನಾದ ಈಶ್ವರನನ್ನು, ನಿನ್ನನ್ನು ಪ್ರಸನ್ನನಾಗೆಂದು ಬೇಡುತ್ತೇನೆ. ತಂದೆ ಮಗನನ್ನೂ ಗೆಳೆಯ ಗೆಳೆಯನನ್ನೂ ಸೈರಿಸುವಂತೆ, ನೀನು ನನಗೆ ಪ್ರಿಯನಾದುದರಿಂದ ನನ್ನ ಕಲ್ಯಾಣಕ್ಕಾಗಿ ನನ್ನಲ್ಲಿ ಸಹನೆ ತೋರು ನಿನಗೆ ಅದು ಯೋಗ್ಯ. || ೪೪ ||

ನಿನ್ನ ಯಾವ ರೂಪವನ್ನು ಮೊದಲು ನೋಡಿರಲಿಲ್ಲವೋ ಅದನ್ನು ನೋಡಿ ನನ್ನ ರೋಮುಗಳು ಎದ್ದುನಿಂತಿವೆ ಭಯದಿಂದ ನನ್ನ ಮನಸ್ಸು

---

**ಪಿತಾಽಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ**
**ಲೋಕತ್ರಯೇಽಪ್ಯಪ್ರತಿಮಪ್ರಭಾವಃ || ೪೩ ||**

**ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ**
**ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ**
**ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ || ೪೪ ||**

**ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ**
**ಭಯೇನ ಚ ಪ್ರವ್ಯಥಿತಂ ಮನೋ ಮೇ ।**
**ತದೇವ ಮೇ ದರ್ಶಯ ದೇವ ರೂಪಂ**
**ಪ್ರಸೀದ ದೇವೇಶ ಜಗನ್ನಿವಾಸ || ೪೫ ||**

ವ್ಯಾಕುಲವಾಗಿದೆ. ಆದುದರಿಂದ, ದೇವ! ನಿನ್ನ ಮೊದಲಿನ ರೂಪವನ್ನು ತೋರಿಸು ದೇವೇಶ! ಜಗನ್ನಿವಾಸ! ಪ್ರಸನ್ನನಾಗು. || ೪೫ ||

ಮೊದಲಿನಂತೆ ಮುಕುಟಗದಾಚಕ್ರಧಾರಿಯಾದ ನಿನ್ನನ್ನು ನೋಡಲು ಇಚ್ಛಿಸುತ್ತೇನೆ ಸಹಸ್ರಬಾಹು, ವಿಶ್ವಮೂರ್ತಿ, ನಿನ್ನ ಚತುರ್ಭುಜರೂಪವನ್ನು ಧಾರಣೆಮಾಡು || ೪೬ ||

**ಶ್ರೀ ಭಗವಂತ :**

ಅರ್ಜುನ, ನಿನ್ನಲ್ಲಿ ಪ್ರಸನ್ನನಾಗಿ ನನ್ನ ಶಕ್ತಿಯ ಮೂಲಕ ತೇಜೋಮಯವೂ, ವಿಶ್ವವ್ಯಾಪಿಯೂ, ಅನಂತವೂ, ಪರಮವೂ, ಆದಿಯೂ ಆದ ರೂಪವನ್ನು ತೋರಿದೆ ನಿನ್ನನ್ನು ಬಿಟ್ಟು ಮತ್ತಾರೂ ಇದನ್ನು ಮೊದಲು ನೋಡಿಲ್ಲ. || ೪೭ ||

ಕುರುಪ್ರವೀರ! ವೇದಾಭ್ಯಾಸದಿಂದ, ಯಜ್ಞದಿಂದ, ಬೇರೆ ಶಾಸ್ತ್ರಗಳ ಅಭ್ಯಾಸದಿಂದ, ದಾನದಿಂದ, ಕ್ರಿಯೆಗಳಿಂದ ಅಥವಾ ಉಗ್ರ ತಪಸ್ಸಿನಿಂದ—

---

ಕಿರೀಟಿನಂ ಗದಿನಂ ಚಕ್ರಹಸ್ತಮಿಚ್ಛಾಮಿ ತ್ವಾಂ
ದ್ರಷ್ಟುಮಹಂ ತಥೈವ ।
ತೇನೈವ ರೂಪೇಣ ಚತುರ್ಭುಜೇನ
ಸಹಸ್ರಬಾಹೋ ಭವ ವಿಶ್ವಮೂರ್ತೇ || ೪೬ ||

ಶ್ರೀ ಭಗವಾನುವಾಚ

ಮಯಾ ಪ್ರಸನ್ನೇನ ತವಾರ್ಜುನೇದಂ
ರೂಪಂ ಪರಂ ದರ್ಶಿತಮಾತ್ಮಯೋಗಾತ್ ।
ತೇಜೋಮಯಂ ವಿಶ್ವಮನಂತಮಾದ್ಯಂ
ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ || ೪೭ ||

ನಿನ್ನನ್ನು ಬಿಟ್ಟು—ಯಾರೂ ಈ ನನ್ನ ರೂಪವನ್ನು ನೋಡಲು ಸಮರ್ಥರಾಗಿಲ್ಲ. || ೪೮ ||

ಈ ನನ್ನ ಭಯಂಕರ ರೂಪವನ್ನು ಕಂಡು ಹೆದರಬೇಡ, ದಿಙ್ಮೂಢನಾಗಬೇಡ. ಹೆದರಿಕೆ ಬಿಟ್ಟು ಶಾಂತಚಿತ್ತನಾಗಿ ನನ್ನ ಈ ಪರಿಚಿತ ರೂಪವನ್ನು ಮತ್ತೆ ನೋಡು || ೪೯ ||

**ಸಂಜಯ :**

ಈ ರೀತಿ ಹೇಳಿ ವಾಸುದೇವ ಮತ್ತೆ ಶಾಂತರೂಪವನ್ನು ಧಾರಣೆಮಾಡಿ ಭಯಭೀತನಾದ ಅರ್ಜುನನನ್ನು ಸಮಾಧಾನಗೊಳಿಸಿದ || ೫೦ ||

---

**ನ ವೇದಯಜ್ಞಾಧ್ಯಯನೈರ್ನ ದಾನೈ-**
**ರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ।**
**ಏವಂ ರೂಪಃ ಶಕ್ಯ ಅಹಂ ನೃಲೋಕೇ**
**ದ್ರಷ್ಟುಂ ತ್ವದನ್ಯೇನ ಕುರುಪ್ರವೀರ || ೪೮ ||**

**ಮಾ ತೇ ವ್ಯಥಾ ಮಾ ಚ ವಿಮೂಢಭಾವೋ**
**ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಮ್ ।**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ**
**ತದೇವ ಮೇ ರೂಪಮಿದಂ ಪ್ರಪಶ್ಯ || ೪೯ ||**

**ಸಂಜಯ ಉವಾಚ**

**ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ**
**ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।**
**ಆಶ್ವಾಸಯಾಮಾಸ ಚ ಭೀತಮೇನಂ**
**ಭೂತ್ವಾ ಪುನಸ್ಸೌಮ್ಯವಪುರ್ಮಹಾತ್ಮಾ || ೫೦ ||**

**ಅರ್ಜುನ :**

ಜನಾರ್ದನ, ನಿನ್ನ ಈ ಸೌಮ್ಯ ಮನುಷ್ಯರೂಪವನ್ನು ನೋಡಿ ಈಗ ನಾನು ಶಾಂತನಾದೆ ನಿಜಭಾವಕ್ಕೆ ಬಂದೆ || ೫೧ ||

**ಶ್ರೀ ಭಗವಂತ :**

ನೀನು ನನ್ನ ಯಾವ ರೂಪವನ್ನು ನೋಡಿದೆಯೋ ಅದರ ದರ್ಶನ ಬಹಳ ದುರ್ಲಭ ದೇವತೆಗಳು ಕೂಡ ಅದನ್ನು ನೋಡಬೇಕೆಂದು ಚಡಪಡಿಸುತ್ತಿರುತ್ತಾರೆ || ೫೨ ||

ನೀನು ಪಡೆದ ನನ್ನ ದರ್ಶನ ವೇದ, ತಪಸ್ಸು, ದಾನ, ಯಜ್ಞಗಳಿಂದ ಲಭಿಸಲಾರದು. ಅಂದರೆ, ಅರ್ಜುನ! ನನ್ನ ಬಗ್ಗೆ ಈ ಜ್ಞಾನ, ನನ್ನ ಈ ದರ್ಶನ, ನನ್ನಲ್ಲಿ ನಿಜವಾದ ಪ್ರವೇಶ, ಕೇವಲ ಅನನ್ಯಭಕ್ತಿಯಿಂದಲೇ ಸಾಧ್ಯ. ||೫೩–೫೪||

---

**ಅರ್ಜುನ ಉವಾಚ**

**ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।**
**ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ || ೫೧ ||**

**ಶ್ರೀ ಭಗವಾನುವಾಚ**

**ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ || ೫೨ ||**

**ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂ ವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ || ೫೩ ||**

**ಭಕ್ತ್ಯಾ ತ್ವನನ್ಯಯಾ ಶಕ್ಯಃ ಅಹಮೇವಂ ವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ || ೫೪ ||**

ಪಾಂಡವ! ಯಾರು ಸರ್ವಕರ್ಮಗಳನ್ನು ನನಗೆ ಸಮರ್ಪಿಸುತ್ತಾರೋ, ನನ್ನಲ್ಲಿ ಪರಾಯಣರಾಗಿರುತ್ತಾರೋ, ನನ್ನ ಭಕ್ತರಾಗುತ್ತಾರೋ, ಆಸಕ್ತಿಯನ್ನು ಬಿಡುತ್ತಾರೋ, ಸಕಲ ಭೂತಗಳಲ್ಲಿ ದ್ವೇಷಗಳನ್ನು ತ್ಯಜಿಸುತ್ತಾರೋ ಅವರು ನನ್ನನ್ನು ಹೊಂದುತ್ತಾರೆ || ೫೫ ||

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ವಿಶ್ವರೂಪದರ್ಶನಯೋಗವೆಂಬ ಹನ್ನೊಂದನೆಯ ಅಧ್ಯಾಯ

---

---

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಸ್ಸಂಗವರ್ಜಿತಃ ।**
**ನಿರ್ವೈರಸ್ಸರ್ವಭೂತೇಷು ಯಸ್ಸ ಮಾಮೇತಿ ಪಾಂಡವ || ೫೫ ||**

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ವಿಶ್ವರೂಪದರ್ಶನಯೋಗೋ ನಾಮ ಏಕಾದಶೋಽಧ್ಯಾಯಃ ||**

---

# ಅಧ್ಯಾಯ ೧೨

## ಭಕ್ತಿಯೋಗ

[ಪುರುಷೋತ್ತಮನ ದರ್ಶನ ಅನನ್ಯಭಕ್ತಿಯಿಂದಲೇ ಲಭಿಸಬಲ್ಲದೆಂದು ಭಗವಂತ ಹೇಳಿದ ತರುವಾಯ ಭಕ್ತಿಯ ಸ್ವರೂಪವೇ ಮುಂದೆ ಬರಬೇಕು. ಈ ಹನ್ನೆರಡನೆಯ ಅಧ್ಯಾಯವನ್ನು ಎಲ್ಲರೂ ಬಾಯಿಪಾಠ ಮಾಡಬೇಕು. ಇದು ಗೀತೆಯ ಅಧ್ಯಾಯಗಳಲ್ಲಿ ಎಲ್ಲಕ್ಕೂ ಚಿಕ್ಕದು. ಇದರಲ್ಲಿ ಹೇಳಿರುವ ಭಕ್ತನ ಲಕ್ಷಣಗಳು ನಿತ್ಯವೂ ಮನನ ಮಾಡಲು ಯೋಗ್ಯವಾಗಿವೆ.]

**ಅರ್ಜುನ :**

ಸತತವೂ ನಿನ್ನ ಧ್ಯಾನ ಮಾಡುತ್ತಾ ನಿನ್ನ ಉಪಾಸನೆ ಮಾಡುವವರು, ನಿನ್ನ ಅವಿನಾಶಿ–ಅವ್ಯಕ್ತರೂಪದ ಧ್ಯಾನಮಾಡುವ ಭಕ್ತರು—ಇವರಲ್ಲಿ ಯಾರು ಶ್ರೇಷ್ಠ ಯೋಗಿಗಳು ? || ೧ ||

**ಶ್ರೀ ಭಗವಂತ :**

ಯಾರು ನನ್ನಲ್ಲಿ ಮನಸ್ಸನ್ನು ನೆಲೆಗೊಳಿಸಿ, ಶ್ರದ್ಧಾಪೂರ್ವಕ ನನ್ನ ಉಪಾಸನೆ ಮಾಡುತ್ತಾರೋ ಅವರೇ ಶ್ರೇಷ್ಠ ಯೋಗಿಗಳೆಂದು ನಾನು ತಿಳಿಯುತ್ತೇನೆ || ೨ ||

---

ಅಥ ದ್ವಾದಶೋऽಧ್ಯಾಯಃ

**ಅರ್ಜುನ ಉವಾಚ**

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ || ೧ ||**

**ಶ್ರೀ ಭಗವಾನುವಾಚ**

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ || ೨ ||**

ಸಕಲ ಇಂದ್ರಿಯಗಳನ್ನೂ ವಶದಲ್ಲಿಟ್ಟುಕೊಂಡು ಸರ್ವತ್ರ ಸಮಬುದ್ಧಿಯುಳ್ಳವರಾಗಿ ದೃಢ, ಅಚಲ, ಧ್ರುವ, ಅಚಿಂತ್ಯ, ಸರ್ವವ್ಯಾಪಿ, ಅವ್ಯಕ್ತ, ಅವರ್ಣನೀಯ, ಅವಿನಾಶಿ ಆದ ಸ್ವರೂಪದ ಉಪಾಸನೆ ಮಾಡುವವರು ಸಕಲ ಪ್ರಾಣಿಗಳ ಹಿತದಲ್ಲಿ ಮಗ್ನರಾಗಿ ನನ್ನನ್ನೇ ಹೊಂದುತ್ತಾರೆ || ೩-೪ ||

ಯಾರ ಚಿತ್ತ ಅವ್ಯಕ್ತದಲ್ಲಿ ಮಗ್ನವಾಗಿದೆಯೋ ಅವರಿಗೆ ಕಷ್ಟ ಹೆಚ್ಚು. ದೇಹಧಾರಿಗಳು ಅವ್ಯಕ್ತ ಗತಿಯನ್ನು ಕಷ್ಟದಿಂದಲೆ ಹೊಂದಬಲ್ಲರು || ೫ ||

ಟಿಪ್ಪಣಿ—ದೇಹಧಾರಿಯಾದ ಮನುಷ್ಯ ಅಮೂರ್ತಸ್ವರೂಪದ ಕಲ್ಪನೆ ಮಾತ್ರ ಮಾಡಬಲ್ಲ ಆದರೆ ಅವನಲ್ಲಿ ಅಮೂರ್ತಸ್ವರೂಪಕ್ಕಾಗಿ ಒಂದೂ ನಿಶ್ಚಯಾತ್ಮಕ ಶಬ್ದವಿಲ್ಲ ಆದುದರಿಂದ ನಿಷೇಧಾತ್ಮಕ 'ನೇತಿ' ಶಬ್ದದಿಂದ ತೃಪ್ತನಾಗಿರಬೇಕು ಈ ದೃಷ್ಟಿಯಿಂದ ಮೂರ್ತಿಪೂಜೆಯನ್ನು ನಿಷೇಧಿಸುವವರೂ ಕೂಡ, ಸೂಕ್ಷ್ಮ ರೀತಿಯಿಂದ ವಿಚಾರಮಾಡಿದರೆ, ಮೂರ್ತಿಪೂಜಕರೇ ಪುಸ್ತಕವನ್ನು ಪೂಜಿಸುವುದು, ಮಂದಿರಗಳಿಗೆ ಹೋಗಿ ಪೂಜೆ ಮಾಡುವುದು, ಒಂದೇ ದಿಕ್ಕಿಗೆ ಮುಖಮಾಡಿ ಪೂಜೆಮಾಡುವುದು—ಇವೆಲ್ಲವೂ ಸಾಕಾರ ಪೂಜೆಯ ಲಕ್ಷಣಗಳು. ನಿರಾಕಾರದ ಅಚಿಂತ್ಯ ಸ್ವರೂಪ ಈ ಸಾಕಾರಕ್ಕೆ ಅತೀತ. ಇದನ್ನು ಅರಿಯುವುದೇ ಮುಕ್ತಿ ಭಕ್ತ ಭಗವಂತನಲ್ಲಿ ಬೆರೆತು, ಕೊನೆಯಲ್ಲಿ ಅದ್ವಿತೀಯ, ಅರೂಪಿ ಭಗವಂತ ಒಬ್ಬನೇ ಉಳಿದರೆ ಅದು ಭಕ್ತಿಯ ಪರಾಕಾಷ್ಠೆ. ಆದರೆ ಈ ಸ್ಥಿತಿಯನ್ನು ಸಾಕಾರದ ಮೂಲಕ ಸುಲಭವಾಗಿ ಹೊಂದಬಹುದು ಆದುದರಿಂದ ನೇರವಾಗಿ ನಿರಾಕಾರವನ್ನು ಸೇರಲು ಯತ್ನಿಸುವ ದಾರಿ ಕಷ್ಟಸಾಧ್ಯವೆಂದು ತೋರಿಸಲಾಗಿದೆ

---

**ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ |**
**ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ || ೩ ||**

**ಸಂನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ |**
**ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ || ೪ ||**

**ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ |**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ || ೫ ||**

ಆದರೆ ಪಾರ್ಥ, ಯಾರು ನನ್ನಲ್ಲಿ ಪರಾಯಣರಾಗಿ ಸಕಲ ಕರ್ಮಗಳನ್ನೂ ನನಗೆ ಅರ್ಪಣೆಮಾಡಿ ಒಂದೇ ನಿಷ್ಠೆಯಿಂದ ನನ್ನನ್ನೇ ಧ್ಯಾನಿಸುತ್ತಾ, ನನ್ನ ಉಪಾಸನೆ ಮಾಡುತ್ತಾರೋ, ಯಾರ ಚಿತ್ತ ನನ್ನಲ್ಲಿಯೆ ನೆಲೆಗೊಂಡಿದೆಯೋ ಅವರನ್ನು ಮೃತ್ಯುರೂಪದ ಸಂಸಾರಸಾಗರದಿಂದ ಒಡನೆಯೆ ಪಾರುಮಾಡುತ್ತೇನೆ ॥ ೬–೭ ॥

ನಿನ್ನ ಮನಸ್ಸನ್ನು ನನ್ನಲ್ಲಿ ನೆಲೆಗೊಳಿಸು, ನಿನ್ನ ಬುದ್ಧಿಯನ್ನು ನನ್ನಲ್ಲಿಡು, ಹಾಗೆ ಮಾಡಿದರೆ ಇದರ(ಜನ್ಮದ)ನಂತರ ನಿಃಸಂಶಯವಾಗಿ ನನ್ನನ್ನೇ ಸೇರುತ್ತೀ. ॥ ೮ ॥

ನನ್ನಲ್ಲಿ ಮನಸ್ಸನ್ನು ಸ್ಥಿರಗೊಳಿಸಲು ಅಸಮರ್ಥನಾದರೆ, ಅಭ್ಯಾಸ ಯೋಗದ ಮೂಲಕ ನನ್ನನ್ನು ಸೇರುವ ಇಚ್ಛೆ ತಳೆ. ಅಂಥ ಅಭ್ಯಾಸಕ್ಕೂ ನೀನು ಅಸಮರ್ಥನಾದರೆ ಸಕಲ ಕರ್ಮಗಳನ್ನೂ ನನಗೆ ಅರ್ಪಣೆ ಮಾಡು ಹೀಗೆ ನನ್ನ ನಿಮಿತ್ತವಾಗಿ ಕರ್ಮಮಾಡಿ ನೀನು ಮೋಕ್ಷ ಪಡೆಯುತ್ತೀಯೆ. ॥ ೯–೧೦ ॥

---

**ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥ ೬ ॥**

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಮ್ ॥ ೭ ॥**

**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥ ೮ ॥**

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥ ೯ ॥**

**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥ ೧೦ ॥**

ನನ್ನ ನಿಮಿತ್ತ ಕರ್ಮಮಾಡುವಷ್ಟು ಶಕ್ತಿಯೂ ಇಲ್ಲದಿದ್ದರೆ ಯತ್ನ ಪೂರ್ವಕ ಸಕಲ ಕರ್ಮಗಳ ಫಲವನ್ನು ತ್ಯಜಿಸು. || ೧೧ ||

ಅಭ್ಯಾಸಮಾರ್ಗಕ್ಕಿಂತ ಜ್ಞಾನಮಾರ್ಗ ಶ್ರೇಯಸ್ಕರ. ಜ್ಞಾನ ಮಾರ್ಗಕ್ಕಿಂತ ಧ್ಯಾನಮಾರ್ಗ ವಿಶೇಷ ಧ್ಯಾನಮಾರ್ಗಕ್ಕಿಂತ ಕರ್ಮಫಲ ತ್ಯಾಗಮಾರ್ಗ ಶ್ರೇಷ್ಠ. ಏಕೆಂದರೆ ಈ ತ್ಯಾಗದ ಪರಿಣಾಮವಾಗಿ ಒಡನೆಯೆ ಶಾಂತಿ ಸಿಗುತ್ತದೆ || ೧೨ ||

ಟಿಪ್ಪಣಿ—ಅಭ್ಯಾಸವೆಂದರೆ ಚಿತ್ತವೃತ್ತಿ ನಿರೋಧದ ಸಾಧನೆ, ಜ್ಞಾನ ಎಂದರೆ ಶ್ರವಣಮನನಾದಿ, ಧ್ಯಾನವೆಂದರೆ ಉಪಾಸನೆ, ಇವೆಲ್ಲದರ ಪರಿಣಾಮವಾಗಿ ಫಲತ್ಯಾಗ ಲಭಿಸದಿದ್ದರೆ ಅದು ಅಭ್ಯಾಸವೂ ಅಲ್ಲ, ಜ್ಞಾನವೂ ಅಲ್ಲ, ಧ್ಯಾನವೂ ಅಲ್ಲ

ಪ್ರಾಣಿಮಾತ್ರಗಳಲ್ಲಿ ದ್ವೇಷರಹಿತ, ಸಕಲರಿಗೂ ಮಿತ್ರ, ದಯಾವಂತ, ಮಮತಾರಹಿತ, ಅಹಂಕಾರರಹಿತ, ಸುಖದುಃಖಗಳಲ್ಲಿ ಸಮಾನ, ಕ್ಷಮಾವಂತ, ಸದಾ ಸಂತೋಷಿ, ಯೋಗಯುಕ್ತ, ಇಂದ್ರಿಯನಿಗ್ರಹಿ, ದೃಢನಿಶ್ಚಯ ಆಗಿ, ತನ್ನ ಬುದ್ಧಿಮನಸ್ಸುಗಳನ್ನು ನನಗೆ ಅರ್ಪಣಮಾಡಿದ ಭಕ್ತ ನನಗೆ ಪ್ರಿಯ.

---

**ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ || ೧೧ ||**

**ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಮ್ || ೧೨ ||**

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಸ್ಸಮದುಃಖಸುಖಃ ಕ್ಷಮೀ || ೧೩ ||**

**ಸಂತುಷ್ಟಸ್ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತ ಮನೋಬುದ್ಧಿರ್ಯೋ ಮದ್ಭಕ್ತಸ್ಸ ಮೇ ಪ್ರಿಯಃ || ೧೪ ||**

**ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಸ್ಸ ಚ ಮೇ ಪ್ರಿಯಃ || ೧೫ ||**

ಯಾರಿಂದ ಜನರು ಉದ್ವೇಗ ಹೊಂದರೋ, ಯಾರು ಜನರಿಂದ ಉದ್ವಿಗ್ನ ನಾಗನೋ, ಯಾರು ಹರ್ಷ, ಕ್ರೋಧ, ಈರ್ಷ್ಯೆ, ಭಯ, ಉದ್ವೇಗಗಳಿಂದ ಮುಕ್ತನೋ ಅವನು ನನಗೆ ಪ್ರಿಯ || ೧೩–೧೫ ||

ಯಾರು ಇಚ್ಛಾರಹಿತ, ಪವಿತ್ರ, ದಕ್ಷ (ಸಾವಧಾನ), ತಟಸ್ಥ, ಚಿಂತಾ ರಹಿತನೋ, ಸಂಕಲ್ಪಮಾತ್ರವನ್ನು ತ್ಯಾಗಮಾಡಿದಾನೋ ಅವನೇ ನನ್ನ ಭಕ್ತ, ಅವನೇ ನನಗೆ ಪ್ರಿಯ || ೧೬ ||

ಯಾರು ಹರ್ಷಗೊಳ್ಳನೋ, ದ್ವೇಷ ಮಾಡನೋ, ಚಿಂತೆ ಮಾಡನೋ, ಆಸೆಪಡನೋ, ಶುಭಾಶುಭಗಳನ್ನು ತ್ಯಾಗಮಾಡಿದಾನೋ ಆ ಭಕ್ತಿಪರಾಯಣ ನನಗೆ ಪ್ರಿಯ || ೧೭ ||

ಶತ್ರು–ಮಿತ್ರರಲ್ಲಿ, ಮಾನಾವಮಾನ, ಶೀತೋಷ್ಣ, ಸುಖದುಃಖಗಳಲ್ಲಿ ಸಮತಾವಂತ, ಆಸಕ್ತಿ ಬಿಟ್ಟ, ನಿಂದಾಸ್ತುತಿಗಳಲ್ಲಿ ಏಕರೀತಿ ವರ್ತಿಸುವ, ಮೌನಧಾರಿ, ಸಿಕ್ಕಿದ್ದರಲ್ಲಿಯೆ ಸಂತುಷ್ಟನಾದ, ತನ್ನದೆಂಬ ನೆಲೆ ಇಲ್ಲದ, ಸ್ಥಿರ ಚಿತ್ತನಾದ ಮುನಿ—ಆ ಭಕ್ತ ನನಗೆ ಪ್ರಿಯ || ೧೮–೧೯ ||

---

**ಅನಪೇಕ್ಷಶ್ಶುಚಿರ್ದಕ್ಷ ಉದಾಸೀನೋ ಗತವ್ಯಥಃ |**
**ಸರ್ವಾರಂಭಪರಿತ್ಯಾಗೀ ಭಕ್ತಿಮಾನ್ ಯಸ್ಸ ಮೇ ಪ್ರಿಯಃ || ೧೬ ||**

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ |**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಸ್ಸ ಮೇ ಪ್ರಿಯಃ || ೧೭ ||**

**ಸಮಶ್ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ |**
**ಶೀತೋಷ್ಣಸುಖದುಃಖೇಷು ಸಮಸ್ಸಂಗವಿವರ್ಜಿತಃ || ೧೮ ||**

**ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ |**
**ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ಮೇ ಪ್ರಿಯೋ ನರಃ || ೧೯ ||**

ಈ ಪವಿತ್ರ ಅಮೃತರೂಪದ ಜ್ಞಾನವನ್ನು ನನ್ನಲ್ಲಿ ಪರಾಯಣರಾಗಿ ಶ್ರದ್ಧೆಯಿಂದ ಸೇವನೆ ಮಾಡುವವರು ನನ್ನ ಅತ್ಯಂತ ಪ್ರಿಯಭಕ್ತರು ॥ ೨೦ ॥

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ಭಕ್ತಿಯೋಗವೆಂಬ ಹನ್ನೆರಡನೆಯ ಅಧ್ಯಾಯ.

---

**ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥ ೨೦ ॥**

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ಭಕ್ತಿಯೋಗೋ ನಾಮ ದ್ವಾದಶೋಽಧ್ಯಾಯಃ ॥**

# ಅಧ್ಯಾಯ ೧೩

## ಕ್ಷೇತ್ರ–ಕ್ಷೇತ್ರಜ್ಞವಿಭಾಗಯೋಗ

**[ಈ ಅಧ್ಯಾಯದಲ್ಲಿ ಶರೀರ, ಶರೀರಿಯ ಭೇದವನ್ನು ತೋರಿಸಲಾಗಿದೆ.]**

**ಶ್ರೀ ಭಗವಂತ :**

ಕೌಂತೇಯ, ಈ ಶರೀರದ ಹೆಸರು ಕ್ಷೇತ್ರ  ಇದನ್ನರಿತ ತತ್ತ್ವಜ್ಞಾನಿ ಕ್ಷೇತ್ರಜ್ಞ. ॥ ೧ ॥

ಸರ್ವಕ್ಷೇತ್ರ–ಶರೀರಗಳಲ್ಲಿರುವ ನನ್ನನ್ನು ಕ್ಷೇತ್ರಜ್ಞನೆಂದು ತಿಳಿ  ಕ್ಷೇತ್ರ–ಕ್ಷೇತ್ರಜ್ಞ ಭೇದದ ಜ್ಞಾನವೇ ಜ್ಞಾನವೆಂದು ನನ್ನ ಮತ ॥ ೨ ॥

---

## ಅಥ ತ್ರಯೋದಶೋಽಧ್ಯಾಯಃ

---

**ಅರ್ಜುನ ಉವಾಚ**

**( ಪ್ರಕೃತಿಂ ಪುರುಷಂ ಚೈವ ಕ್ಷೇತ್ರಂ ಕ್ಷೇತ್ರಜ್ಞಮೇವ ಚ ।**
**ಏತದ್ವೇದಿತುಮಿಚ್ಛಾಮಿ ಜ್ಞಾನಂ ಜ್ಞೇಯಂ ಚ ಕೇಶವ ॥ )**

**ಶ್ರೀ ಭಗವಾನುವಾಚ**

**ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।**
**ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥ ೧ ॥**

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ॥ ೨ ॥**

ಈ ಕ್ಷೇತ್ರ ಯಾವುದು, ಹೇಗಿದೆ, ಅದರ ವಿಕಾರವೆಂಥದು, ಎಲ್ಲಿಂದ ಬಂತು, ಕ್ಷೇತ್ರಜ್ಞ ಯಾರು, ಅವನ ಶಕ್ತಿ ಎಂಥದು—ಸಂಕ್ಷೇಪವಾಗಿ ಕೇಳು ॥ ೩ ॥

ವಿವಿಧ ಛಂದಸ್ಸುಗಳಲ್ಲಿ, ಭಿನ್ನಭಿನ್ನ ಪ್ರಕಾರದಿಂದ, ದೃಷ್ಟಾಂತ ವಾದಗಳ ಮೂಲಕ ನಿಶ್ಚಯಾತ್ಮಕ, ಬ್ರಹ್ಮಸೂಚಕ ವಾಕ್ಯಗಳಿಂದ ಋಷಿಗಳು ಇದನ್ನು ಬಹುವಾಗಿ ಹಾಡಿದಾರೆ ॥ ೪ ॥

ಮಹಾಭೂತಗಳು, ಅಹಂಕಾರ, ಬುದ್ಧಿ, ಪ್ರಕೃತಿ, (ಸೂಕ್ಷ್ಮ) ಇಂದ್ರಿಯಗಳು, ಮನಸ್ಸು, ಐದು ವಿಷಯಗಳು, ಇಚ್ಛೆ, ದ್ವೇಷ, ಸುಖ, ದುಃಖ, ಸಂಘಾತ, ಚೇತನಶಕ್ತಿ, ಧೃತಿ—ಇದು ವಿಕಾರಸಹಿತವಾದ ಕ್ಷೇತ್ರವೆಂದು ಸಂಕ್ಷೇಪವಾಗಿ ಹೇಳಿದೆ ॥ ೫–೬ ॥

ಟಿಪ್ಪಣಿ—ಮಹಾಭೂತಗಳು ಐದು—ಪೃಥ್ವಿ, ಜಲ, ವಾಯು, ತೇಜಸ್ಸು, ಆಕಾಶ ಅಹಂಕಾರ ಎಂದರೆ ಶರೀರಸಂಬಂಧದ ಅಹಂಕಾರ ಅವ್ಯಕ್ತ ಎಂದರೆ ಅದೃಶ್ಯ ಮಾಯೆ, ಪ್ರಕೃತಿ ಹತ್ತು ಇಂದ್ರಿಯಗಳಲ್ಲಿ ಐದು ಜ್ಞಾನೇಂದ್ರಿಯ ಮೂಗು, ಕಿವಿ, ಕಣ್ಣು, ನಾಲಗೆ, ಚರ್ಮ, ಕರ್ಮೇಂದ್ರಿಯಗಳು ಐದು ಕೈ, ಕಾಲು, ಮುಖ, ಎರಡು ಗುಹ್ಯೇಂದ್ರಿಯಗಳು ಐದು ಗೋಚರ ಅಥವಾ ಐದು ಜ್ಞಾನೇಂದ್ರಿಯಗಳಿಗೆ ಐದು ವಿಷಯ ಮೂಸುವುದು, ಕೇಳುವುದು, ನೋಡುವುದು, ಅಗಿಯುವುದು, ಸ್ಪರ್ಶಿಸುವುದು.

---

**ತತ್ ಕ್ಷೇತ್ರಂ ಯಚ್ಚ ಯಾದೃಕ್ಚ ಯದ್ವಿಕಾರಿ ಯತಶ್ಚ ಯತ್ ।**
**ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥ ೩ ॥**

**ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್ ।**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥ ೪ ॥**

**ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।**
**ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ ॥ ೫ ॥**

**ಇಚ್ಛಾದ್ವೇಷಸ್ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।**
**ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥ ೬ ॥**

ಸಂಘಾತ ಎಂದರೆ ಶರೀರದ ತತ್ತ್ವಗಳು ಪರಸ್ಪರ ಸಹಕರಿಸುವ ಶಕ್ತಿ, ಧೃತಿ ಎಂದರೆ ಧೈರ್ಯರೂಪವಾದ ಸೂಕ್ಷ್ಮ ಗುಣವಲ್ಲ, ಈ ಶರೀರದ ಪರಮಾಣುಗಳು ಪರಸ್ಪರ ಸೆಟೆದು ನಿಲ್ಲುವ ಗುಣ ಈ ಗುಣ ಅಹಂಭಾವದಿಂದ ಹುಟ್ಟುತ್ತದೆ ಈ ಅಹಂತನ ಅವ್ಯಕ್ತ ಪ್ರಕೃತಿಯಲ್ಲಿ ವಿದ್ಯಮಾನವಾಗಿದೆ ಮೋಹವಿಲ್ಲದ ಮನುಷ್ಯ ಈ ಅಹಂತನವನ್ನು ಜ್ಞಾನದಿಂದ ತ್ಯಜಿಸುತ್ತಾನೆ ಈ ಕಾರಣದಿಂದ ಮರಣಸಮಯದಲ್ಲಾಗಲಿ ಬೇರೆ ಆಘಾತಗಳಿಂದಾಗಲಿ ಅವನಿಗೆ ದುಃಖವಾಗದು ಜ್ಞಾನಿ-ಅಜ್ಞಾನಿ ಎಲ್ಲರೂ ಕೊನೆಗೆ ಈ ವಿಕಾರ ಕ್ಷೇತ್ರವನ್ನು ತ್ಯಜಿಸಲೇಬೇಕು

ಮಾನವನ್ನು ಭಾವಿಸದಿರುವುದು, ದಂಭವಿಲ್ಲದಿರುವುದು, ಅಹಿಂಸೆ, ಕ್ಷಮೆ, ಸರಳತೆ, ಆಚಾರ್ಯಸೇವೆ, ಶುಚಿತ್ವ, ಸ್ಥಿರತೆ, ಆತ್ಮಸಂಯಮ, ಇಂದ್ರಿಯವಿಷಯಗಳಲ್ಲಿ ವಿರಕ್ತಿ, ಅಹಂಕಾರವಿಲ್ಲದಿರುವಿಕೆ, ಜನ್ಮ, ಮರಣ, ಜರಾ, ವ್ಯಾಧಿ, ದುಃಖ, ದೋಷಗಳ ನಿರಂತರ ತಿಳುವಳಿಕೆ, ಹೆಣ್ಣು, ಮನೆಗಳ ಮೋಹಮಮತೆಗಳ ಅಭಾವ, ಪ್ರಿಯ-ಅಪ್ರಿಯ ವಿಚಾರಗಳಲ್ಲಿ ನಿತ್ಯಸಮಭಾವ, ನನ್ನಲ್ಲಿ ಅನನ್ಯಧ್ಯಾನಪೂರ್ವಕ ಏಕನಿಷ್ಠ ಭಕ್ತಿ, ಏಕಾಂತಸ್ಥಳದ ಸೇವನೆ, ಜನಸಮೂಹದಲ್ಲಿ ಬೆರೆಯಲು ಅರುಚಿ, ಆಧ್ಯಾತ್ಮಿಕ ಜ್ಞಾನದ ನಿತ್ಯತೆಯ ತಿಳಿವು, ಆತ್ಮದರ್ಶನ—ಇದೆಲ್ಲವೂ ಜ್ಞಾನ ಇದಕ್ಕೆ ವಿರೋಧವಾದುದೆಲ್ಲಾ ಅಜ್ಞಾನ. ‖ ೭-೧೧ ‖

---

ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಮ್ ।
ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ‖ ೭ ‖

ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।
ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ‖ ೮ ‖

ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।
ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ‖ ೯ ‖

ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।
ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ‖ ೧೦ ‖

ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।
ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ‖ ೧೧ ‖

ಯಾವುದನ್ನು ತಿಳಿದು ಮನುಷ್ಯ ಮೋಕ್ಷಹೊಂದುತ್ತಾನೋ ಆ ಜ್ಞೇಯ ಏನೆಂಬುದನ್ನು ಹೇಳುತ್ತೇನೆ ಅದು ಅನಾದಿಯಾದ ಪರಬ್ರಹ್ಮ ಅದು ಸತ್ ಅಲ್ಲ, ಅಸತ್ತೂ ಅಲ್ಲ ॥ ೧೨ ॥

ಟಿಪ್ಪಣಿ—ಪರಮೇಶ್ವರನನ್ನು 'ಸತ್' ಎಂದಾಗಲಿ 'ಅಸತ್' ಎಂದಾಗಲಿ ಹೇಳಲಾಗದು. ಅವನ ಸ್ವರೂಪ ಗುಣಾತೀತ. ಒಂದು ಶಬ್ದದಿಂದ ಅದರ ವ್ಯಾಖ್ಯೆ ಅಥವಾ ಪರಿಚಯ ಸಾಧ್ಯವಲ್ಲ

ಎಲ್ಲಿ ನೋಡಿದರಲ್ಲಿ ಅದರ ಕೈಕಾಲು, ಕಣ್ಣು, ತಲೆ, ಮುಖ, ಕಿವಿ ಇವೆ ಅದು ಸರ್ವತ್ರ ವ್ಯಾಪ್ತವಾಗಿ ಈ ಲೋಕದಲ್ಲಿದೆ.

ಅದರಲ್ಲಿ ಸಕಲ ಇಂದ್ರಿಯಗಳ ಗುಣಗಳ ಆಭಾಸ ಇದ್ದರೂ ಅದರ ಸ್ವರೂಪ ಇಂದ್ರಿಯರಹಿತ, ಎಲ್ಲದರಿಂದಲೂ ಅಲಿಪ್ತ ಆದರೂ ಎಲ್ಲವನ್ನೂ ಧಾರಣೆ ಮಾಡುವಂಥದು ಅದು ಗುಣರಹಿತವಾದರೂ ಗುಣಭೋಕ್ತೃ. ॥ ೧೩—೧೪ ॥

ಅದು ಭೂತಗಳ ಹೊರಗೂ ಇದೆ, ಒಳಗೂ ಇದೆ ಅದು ಚಲಿಸುತ್ತಲೂ ಇದೆ, ಸ್ಥಿರವಾಗಿಯೂ ಇದೆ ಸೂಕ್ಷ್ಮವಾದುದರಿಂದ ಅದು ಅವಿಜ್ಞೇಯ ದೂರದಲ್ಲಿಯೂ ಇದೆ, ಸಮೀಪದಲ್ಲಿಯೂ ಇದೆ ॥ ೧೫ ॥

---

ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಽಮೃತಮಶ್ನುತೇ ।
ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ ೧೨ ॥

ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಮ್ ।
ಸರ್ವತಶ್ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೧೩ ॥

ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಮ್ ।
ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥ ೧೪ ॥

ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ ।
ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ॥ ೧೫ ॥

ಟಿಪ್ಪಣಿ—ಅದನ್ನು ಅರಿತವನು ಅದರೊಳಗೇ ಇರುತ್ತಾನೆ ನಾವು ಚಲನ-ಸ್ಥಿರತೆ, ಶಾಂತಿ-ಅಶಾಂತಿಯ ಅನುಭವ ಪಡೆಯುತ್ತೇವೆ ಈ ಭಾವಗಳೆಲ್ಲ ಅದರಿಂದ ಹುಟ್ಟುತ್ತವೆ ಆದುದರಿಂದ ಅದು ಗತಿವಂತವಾಗಿಯೂ ಸ್ಥಿರವಾಗಿಯೂ ಇದೆ.

ಅದು ಭೂತಗಳಲ್ಲಿ ಅವಿಭಕ್ತವಾಗಿಯೂ ಇದೆ, ವಿಭಕ್ತವಾಗಿಯೂ ಇದೆ ಅದು ತಿಳಿಯಲು ಯೋಗ್ಯ(ಬ್ರಹ್ಮ), ಪ್ರಾಣಿಪಾಲಕ, ನಾಶಕ, ಕರ್ತೃ ಸಹ ಆಗಿದೆ ಅದು ಜ್ಯೋತಿಗಳಿಗೆಲ್ಲಾ ಜ್ಯೋತಿ, ಅಂಧಕಾರಕ್ಕೆ ಮೀರಿದುದು. ಜ್ಞಾನವೂ ಅದೇ, ತಿಳಿಯಲು ಯೋಗ್ಯವೂ ಅದೇ, ಜ್ಞಾನಗಮ್ಯವೂ ಅದೇ, ಅದು ಎಲ್ಲರ ಹೃದಯದಲ್ಲಿಯೂ ಇದೆ. ॥ ೧೬-೧೭ ॥

ಹೀಗೆ ಕ್ಷೇತ್ರ, ಜ್ಞಾನ, ಜ್ಞೇಯಗಳನ್ನು ಸಂಕ್ಷೇಪವಾಗಿ ವಿವರಿಸಿ ಹೇಳಿದೇನೆ ಇದನ್ನರಿತು ನನ್ನ ಭಕ್ತ ನನ್ನ ಭಾವವನ್ನು ಹೊಂದಲು ಯೋಗ್ಯನಾಗುತ್ತಾನೆ ॥ ೧೮ ॥

ಪ್ರಕೃತಿ, ಪುರುಷ—ಎರಡೂ ಅನಾದಿ. ವಿಕಾರ, ಗುಣಗಳು ಪ್ರಕೃತಿಯಿಂದ ಹುಟ್ಟುತ್ತವೆ, ತಿಳಿ ॥ ೧೯ ॥

ಪ್ರಕೃತಿ ಕಾರ್ಯಕಾರಣಗಳ ಹೇತು ಎನ್ನುತ್ತಾರೆ ಪುರುಷ ಸುಖ ದುಃಖಗಳ ಭೋಗಕ್ಕೆ ಹೇತು ಎನ್ನುತ್ತಾರೆ. ॥ ೨೦ ॥

---

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ ।**
**ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥ ೧೬ ॥**
**ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಂ ॥ ೧೭ ॥**
**ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥ ೧೮ ॥**
**ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥ ೧೯ ॥**
**ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।**
**ಪುರುಷಸ್ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥ ೨೦ ॥**

ಪ್ರಕೃತಿಯಲ್ಲಿರುವ ಪುರುಷ ಪ್ರಕೃತಿಯಿಂದ ಹುಟ್ಟಿದ ಗುಣಗಳನ್ನು ಭೋಗಿಸುತ್ತಾನೆ ಈ ಗುಣಸಂಗವೇ ಒಳ್ಳೆಯ ಅಥವಾ ಕೆಟ್ಟ ಯೋನಿಗಳಲ್ಲಿ ಅವನ ಜನ್ಮಕ್ಕೆ ಕಾರಣ. || ೨೧ ||

ಟಿಪ್ಪಣಿ—ಲೌಕಿಕ ಭಾಷೆಯಲ್ಲಿ ಪ್ರಕೃತಿಯನ್ನು ಮಾಯೆಯೆಂದು ಕರೆಯುತ್ತೇವೆ ಜೀವನೇ ಪುರುಷ ಮಾಯೆಗೆ ಎಂಪರೆ ಮೂಲಸ್ವಭಾವಕ್ಕೆ ವಶವಾಗಿ ಜೀವಸತ್ತ್ವ, ರಜಸ್ ಅಥವಾ ತಮಸ್ಸಿನಿಂದ ಆಗುವ ಕೆಲಸಗಳ ಫಲವನ್ನು ಭೋಗಿಸುತ್ತಾನೆ ಈ ಕಾರಣದಿಂದ ಕರ್ಮಾನುಸಾರವಾಗಿ ಪುನರ್ಜನ್ಮ ಪಡೆಯುತ್ತಾನೆ

ಈ ದೇಹದಲ್ಲಿ ಇರುವವನನ್ನು ಪರಮಪುರುಷ, ಸರ್ವಸಾಕ್ಷಿ, ಅನುಮತಿ ಕೊಡುವವನು, ಭರ್ತ, ಭೋಕ್ತೃ, ಮಹೇಶ್ವರ, ಪರಮಾತ್ಮ ಎನ್ನುತ್ತಾರೆ || ೨೨ ||

ಪುರುಷನನ್ನು, ಗುಣಮಯಿಯಾದ ಪ್ರಕೃತಿಯನ್ನು ಈ ಪ್ರಕಾರ ತಿಳಿದ ಮನುಷ್ಯ ಎಲ್ಲ ಬಗೆಯ ಕೆಲಸ ಮಾಡುತ್ತಿದ್ದರೂ, ಅವನು ಮತ್ತೆ ಹುಟ್ಟುವುದಿಲ್ಲ. || ೨೩ ||

ಟಿಪ್ಪಣಿ—೨, ೯, ೧೨ ಮೊದಲಾದ ಅಧ್ಯಾಯಗಳ ಸಹಾಯದಿಂದ ನಮಗೆ ತಿಳಿಯುತ್ತದೆ· ಈ ಶ್ಲೋಕ ಸ್ವೇಚ್ಛಾಚಾರವನ್ನು ಸಮರ್ಥಿಸದು ; ಭಕ್ತಿಮಹಿಮೆಯನ್ನು ವರ್ಣಿಸುತ್ತದೆ ಜೀವಕ್ಕೆ ಕರ್ಮ ಬಂಧನಕಾರಕ ಆದರೆ ಎಲ್ಲಾ ಕರ್ಮವನ್ನೂ ಭಗವಂತನಿಗೆ ಅರ್ಪಿಸಿದರೆ ಅವನು ಬಂಧನಮುಕ್ತನಾಗುತ್ತಾನೆ ಹೀಗೆ ಅಹಂಭಾವ ಅಳಿದವನು, ೨೪ ಗಂಟೆಯೂ ಅಂತರ್ಯಾಮಿಯನ್ನು ಗುರುತಿಸುವವನು ಪಾಪಕರ್ಮ ಮಾಡಲೇ ಆರ. ಅಭಿಮಾನವೇ ಪಾಪದ ಮೂಲ 'ನಾನು' ಇಲ್ಲದಲ್ಲಿ ಪಾಪವಿಲ್ಲ. ಪಾಪಕರ್ಮ ಮಾಡದಿರುವ ಯುಕ್ತಿಯನ್ನು ಹೇಳುತ್ತದೆ ಈ ಶ್ಲೋಕ

---

**ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್ ।**
**ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು || ೨೧ ||**

**ಉಪದ್ರಷ್ಟಾಽನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ || ೨೨ ||**

**ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಸ್ಸಹ ।**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ || ೨೩ ||**

ಕೆಲವರು ಧ್ಯಾನಮಾರ್ಗದಿಂದ ತಮ್ಮಲ್ಲಿ ಆತ್ಮವನ್ನು ಕಾಣುತ್ತಾರೆ. ಕೆಲವರು ಜ್ಞಾನಮಾರ್ಗ, ಕೆಲವರು ಕರ್ಮಮಾರ್ಗದಿಂದಲೂ ಕಾಣುತ್ತಾರೆ ಕೆಲವರು ಈ ಮಾರ್ಗಗಳನ್ನರಿಯದುದರಿಂದ ಇತರರಿಂದ ಪರಮಾತ್ಮನ ವಿಚಾರವನ್ನು ಕೇಳಿಕೊಳ್ಳುತ್ತಾರೆ ಹಾಗೆ ಕೇಳಿದನಂತರ ಆದರಲ್ಲೇ ಶ್ರದ್ಧೆಯಿಟ್ಟು ಉಪಾಸನೆ ಮಾಡುತ್ತಾರೆ ಈ ರೀತಿ ಅವರೂ ಮೃತ್ಯುವಿನಿಂದ ಪಾರಾಗುತ್ತಾರೆ || ೨೪–೨೫ ||

ಭರತಶ್ರೇಷ್ಠ, ಸ್ಥಾವರ ಅಥವಾ ಜಂಗಮದಿಂದ ಯಾವುದಾದರೊಂದು ವಸ್ತು ಹುಟ್ಟುತ್ತದೆ ಕ್ಷೇತ್ರ–ಕ್ಷೇತ್ರಜ್ಞರ ಎಂದರೆ ಪ್ರಕೃತಿ–ಪುರುಷರ ಸಂಯೋಗದಿಂದಲೇ ಆಗುತ್ತದೆಂದು ನೀನು ತಿಳಿ. || ೨೬ ||

ಸಕಲ ನಾಶವಂತ ಪ್ರಾಣಿಗಳಲ್ಲಿ ಅವಿನಾಶಿ ಪರಮೇಶ್ವರ ಸಮಭಾವದಿಂದಿದಾನೆಂದು ತಿಳಿದವನೇ ತಿಳಿದವನು || ೨೭ ||

ಈಶ್ವರ ಸರ್ವತ್ರ ಸಮಭಾವದಿಂದಿರುವುದನ್ನು ನೋಡುವ ಮನುಷ್ಯ ಆತ್ಮಘಾತಮಾಡಿಕೊಳ್ಳ ಇದರಿಂದ ಪರಮಗತಿಯನ್ನೈದುತ್ತಾನೆ || ೨೮ ||

---

**ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ |**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ || ೨೪ ||**

**ಅನ್ಯೇ ತ್ವೇವಮಜಾನಂತಃ ಶ್ರುತ್ವಾಽನ್ಯೇಭ್ಯ ಉಪಾಸತೇ |**
**ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ || ೨೫ ||**

**ಯಾವತ್ಸಂಜಾಯತೇ ಕಿಂಚಿತ್ಸತ್ತ್ವಂ ಸ್ಥಾವರಜಂಗಮಮ್ |**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ || ೨೬ ||**

**ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್ |**
**ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ || ೨೭ ||**

**ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ |**
**ನಹಿನಸ್ತ್ಯಾತ್ಮನಾಽತ್ಮಾನಂ ತತೋ ಯಾತಿ ಪರಾಂ ಗತಿಂ || ೨೮ ||**

ಟಿಪ್ಪಣಿ—ಈಶ್ವರನನ್ನು ಸಮಭಾವಶೀಲನೆಂದರಿತವನು ಸ್ವಯಂ ಅವನಲ್ಲಿ ಕೂಡಿ ಕೊಳ್ಳುತ್ತಾನೆ ಬೇರೆ ಯಾವುದನ್ನೂ ನೋಡನು ಆದುದರಿಂದ ಅವನು ವಿಕಾರವಶ ನಾಗದೆ ಮೋಕ್ಷಹೊಂದುತ್ತಾನೆ, ತನಗೆ ತಾನೇ ಶತ್ರುವಾಗನು

ಸರ್ವತ್ರ ಪ್ರಕೃತಿಯೇ ಕೆಲಸ ಮಾಡುತ್ತಿದೆ. ಆದುದರಿಂದಲೇ ಆತ್ಮ ಅಕರ್ತ ಎಂದು ತಿಳಿದವನೇ ತಿಳಿದಿದಾನೆ || ೨೯ ||

ಟಿಪ್ಪಣಿ—ಹೇಗೆಂದರೆ, ಮಲಗಿರುವಾಗ ಮನುಷ್ಯನ ಆತ್ಮ ನಿದ್ರೆಯ ಕರ್ತೃವಲ್ಲ. ಪ್ರಕೃತಿ ನಿದ್ರೆಯ ಕೆಲಸ ಮಾಡುತ್ತದೆ ನಿರ್ವಿಕಾರ ಪುರುಷನ ಕಣ್ಣು ಯಾವ ಬಗೆಯ ಕೆಡುಕನ್ನೂ ನೋಡದು. ಪ್ರಕೃತಿ ವ್ಯಭಿಚಾರಿಣಿಯಲ್ಲ ಅಭಿಮಾನಿಯಾದ ಪುರುಷ ಆದರ ಸ್ವಾಮಿಯಾದಾಗ ಈ ಮಿಲನದಿಂದ ವಿಷಯವಿಕಾರ ಹುಟ್ಟುತ್ತದೆ.

ಸರ್ವಭೂತಗಳೂ ಬೇರೆಬೇರೆಯಾಗಿದ್ದರೂ ಒಂದರಲ್ಲಿಯೇ ಇರುವುದನ್ನು ನೋಡಿ, ಸಮಗ್ರ ವಿಸ್ತಾರವೆಲ್ಲಾ ಅದರಿಂದಲೇ ಹುಟ್ಟಿದೆ ಎಂದರಿತಾಗ ಅವನು ಬ್ರಹ್ಮವನ್ನೈದುತ್ತಾನೆ || ೩೦ ||

ಟಿಪ್ಪಣಿ—ಅನುಭವದಿಂದ ಸಕಲವನ್ನೂ ಬ್ರಹ್ಮದಲ್ಲಿಯೆ ನೋಡುವುದೇ ಬ್ರಹ್ಮ ವನ್ನು ಪಡೆಯುವುದು. ಆಗ ಜೀವ ಶಿವನಿಂದ ಬೇರೆ ಆಗಿರದು

ಕೌಂತೇಯ! ಈ ಅವಿನಾಶಿಯಾದ ಪರಮಾತ್ಮ ಅನಾದಿ, ನಿರ್ಗುಣ ಆಗಿರುವುದರಿಂದ ಶರೀರದಲ್ಲಿದ್ದರೂ ಏನನ್ನೂ ಮಾಡ, ಯಾತರಿಂದಲೂ ಲಿಪ್ತನಾಗ. || ೩೧ ||

---

**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ |**
**ಯಃ ಪಶ್ಯತಿ ತಥಾಽತ್ಮಾನಮಕರ್ತಾರಂ ಸ ಪಶ್ಯತಿ || ೨೯ ||**

**ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ |**
**ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ || ೩೦ ||**

**ಅನಾದಿತ್ವಾನ್ನಿರ್ಗುಣತ್ವಾತ್ ಪರಮಾತ್ಮಾಽಯಮವ್ಯಯಃ |**
**ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ || ೩೧ ||**

ಸೂಕ್ಷ್ಮವಾಗಿರುವ ಕಾರಣ ಸರ್ವವ್ಯಾಪಿ ಆಕಾಶಕ್ಕೆ ಹೇಗೆ ಏನೂ ಅಂಟದೋ ಹಾಗೆಯೆ ಎಲ್ಲ ದೇಹದಲ್ಲಿರುವ ಆತ್ಮಕ್ಕೂ ಏನೂ ಅಂಟದು. ||೩೨||

ಭರತ! ಒಬ್ಬನೇ ಸೂರ್ಯ ಈ ಸಮಗ್ರ ಜಗತ್ತಿಗೆಲ್ಲಾ ಪ್ರಕಾಶವನ್ನೀಯುವ ಹಾಗೆ ಕ್ಷೇತ್ರಜ್ಞ ಎಲ್ಲ ಕ್ಷೇತ್ರಗಳನ್ನೂ ಪ್ರಕಾಶಗೊಳಿಸುತ್ತಾನೆ || ೩೩ ||

ಜ್ಞಾನಚಕ್ಷುಗಳಿಂದ ಕ್ಷೇತ್ರ-ಕ್ಷೇತ್ರಜ್ಞ ಭೇದವನ್ನು, ಪ್ರಕೃತಿಯ ಬಂಧನದಿಂದ ಪ್ರಾಣಿಗಳಿಗೆ ಮುಕ್ತಿ ಹೇಗೆ ಸಿಗುವುದೆಂಬುದನ್ನು ಅರಿಯುವವರೇ ಬ್ರಹ್ಮವನ್ನೈದುತ್ತಾರೆ. || ೩೪ ||

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ಕ್ಷೇತ್ರ-ಕ್ಷೇತ್ರಜ್ಞವಿಭಾಗಯೋಗವೆಂಬ ಹದಿಮೂರನೆಯ ಅಧ್ಯಾಯ

---

**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ |**
**ಸರ್ವತ್ರಾವಸ್ಥಿತೋ ದೇಹೇ ತಥಾಽಽತ್ಮಾನೋಪಲಿಪ್ಯತೇ || ೩೨ ||**

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ |**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ || ೩೩ ||**

**ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ |**
**ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಂ || ೩೪ ||**

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ಕ್ಷೇತ್ರ-ಕ್ಷೇತ್ರಜ್ಞವಿಭಾಗಯೋಗೋ ನಾಮ**
**ತ್ರಯೋದಶೋಽಧ್ಯಾಯಃ ||**

# ಅಧ್ಯಾಯ ೧೪

## ಗುಣತ್ರಯವಿಭಾಗಯೋಗ

**[ಗುಣಮಯಿಯಾದ ಪ್ರಕೃತಿಯ ಅಲ್ಪ ಪರಿಚಯ ಮಾಡಿ ಕೊಟ್ಟನಂತರ ಈ ಅಧ್ಯಾಯದಲ್ಲಿ ಸಹಜವಾಗಿ ಮೂರು ಗುಣಗಳ ವರ್ಣನೆ ಬರುತ್ತದೆ. ಇದರಲ್ಲಿ ಭಗವಂತ ಗುಣಾತೀತನ ಲಕ್ಷಣವನ್ನೂ ಸೇರಿಸಿದಾನೆ. ಎರಡನೆಯ ಅಧ್ಯಾಯದಲ್ಲಿ ಸ್ಥಿತಪ್ರಜ್ಞನ ಲಕ್ಷಣ, ಹನ್ನೆರಡನೆಯ ಅಧ್ಯಾಯದಲ್ಲಿ ಭಕ್ತನ ಲಕ್ಷಣ ಹೇಳಿದ ಹಾಗೆ ಇದರಲ್ಲಿ ಗುಣಾತೀತನ ಲಕ್ಷಣ.]**

**ಶ್ರೀ ಭಗವಂತ :**

ಜ್ಞಾನಗಳಲ್ಲಿ ಯಾವ ಉತ್ತಮ ಜ್ಞಾನದ ಅನುಭವ ಪಡೆದು ಸಕಲ ಮುನಿಗಳೂ ದೇಹತ್ಯಾಗಮಾಡಿದನಂತರ ಪರಮಗತಿಯನ್ನೈದಿದರೋ ಅದನ್ನು (ಮತ್ತೆ) ಹೇಳುತ್ತೇನೆ || ೧ ||

ಈ ಜ್ಞಾನದ ಆಶ್ರಯದಿಂದ ಯಾರು ನನ್ನ ಭಾವವನ್ನು ಹೊಂದಿದಾರೋ ಅವರು ಉತ್ಪತ್ತಿಕಾಲದಲ್ಲಿ ಮತ್ತೆ ಹುಟ್ಟಬೇಕಾಗಿಲ್ಲ, ಪ್ರಳಯಕಾಲದಲ್ಲಿ ವ್ಯಥೆ ಪಡಬೇಕಾದುದೂ ಇಲ್ಲ || ೨ ||

---

## ಅಥ ಚತುರ್ದಶೋಽಧ್ಯಾಯಃ

**ಶ್ರೀ ಭಗವಾನುವಾಚ**

**ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ ।**
**ಯಜ್ಜ್ಞಾತ್ವಾ ಮುನಯಸ್ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥ ೧ ॥**

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥ ೨ ॥**

ಭಾರತ! ಮಹದ್ಬ್ರಹ್ಮ ಅಥವಾ ಪ್ರಕೃತಿ ನನ್ನ ಯೋನಿ ಅದರಲ್ಲಿ ನಾನು ಗರ್ಭವಿಡುತ್ತೇನೆ ಅದರಿಂದ ಪ್ರಾಣಿಮಾತ್ರಗಳು ಹುಟ್ಟುತ್ತವೆ. ॥ ೩ ॥

ಕೌಂತೇಯ! ಎಲ್ಲ ಯೋನಿಗಳಲ್ಲಿ ಹುಟ್ಟುವ ಪ್ರಾಣಿಗಳ ಉತ್ಪತ್ತಿಸ್ಥಾನ ನನ್ನ ಪ್ರಕೃತಿಯೇ. ಅದರಲ್ಲಿ ಬೀಜಾರೋಪಣ ಮಾಡುವ ತಂದೆ–ಪುರುಷ— ನಾನೇ. ॥ ೪ ॥

ಸತ್ತ್ವ, ರಜಸ್, ತಮಸ್ ಪ್ರಕೃತಿಯಿಂದ ಹುಟ್ಟುವ ಗುಣಗಳು. ಇವು ಅವಿನಾಶಿ (ಜೀವ) ದೇಹಧಾರಿಯನ್ನು ದೇಹದೊಡನೆ ಬಂಧಿಸುತ್ತವೆ ॥ ೫ ॥

ಇವುಗಳಲ್ಲಿ ಸತ್ತ್ವಗುಣ ನಿರ್ಮಲ, ಅದರಿಂದ ಅದು ಪ್ರಕಾಶಕ, ಆರೋಗ್ಯಪ್ರದ ಅದು ದೇಹಿಯನ್ನು ಸುಖಜ್ಞಾನಗಳಲ್ಲಿ ಬಂಧಿಸುತ್ತದೆ ॥ ೬ ॥

ಕೌಂತೇಯ! ರಜೋಗುಣ ರಾಗರೂಪದ್ದು. ಅದು ತೃಷ್ಣೆ, ಆಸಕ್ತಿಗಳ ಮೂಲ ದೇಹಧಾರಿಯನ್ನು ಅದು ಕರ್ಮಪಾಶದಲ್ಲಿ ಬಂಧಿಸುತ್ತದೆ ॥ ೭ ॥

---

**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಂ ।**
**ಸಂಭವಸ್ಸರ್ವಭೂತಾನಾಂ ತತೋ ಭವತಿ ಭಾರತ ॥ ೩ ॥**

**ಸರ್ವಯೋನಿಷು ಕೌಂತೇಯ ಮೂರ್ತಯಸ್ಸಂಭವಂತಿ ಯಾಃ ।**
**ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥ ೪ ॥**

**ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಂ ॥ ೫ ॥**

**ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್ ।**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥ ೬ ॥**

**ರಜೋರಾಗಾತ್ಮಕಂ ವಿದ್ಧಿ ತೃಷ್ಣಾಽಽಸಂಗಸಮುದ್ಭವಮ್ ।**
**ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಮ್ ॥ ೭ ॥**

ಭರತ! ತಮೋಗುಣ ಅಜ್ಞಾನದ ಮೂಲಕ ಅದು ದೇಹಧಾರಿಯನ್ನು ಮೋಹಕ್ಕೀಡುಮಾಡುತ್ತದೆ ದೇಹಿಯನ್ನು ಅಸಾವಧಾನ, ಆಲಸ್ಯ, ನಿದ್ರೆಯ ಪಾಶಗಳಿಂದ ಬಂಧಿಸುತ್ತದೆ ॥ ೮ ॥

ಭರತ! ಸತ್ತ್ವಗುಣ ಆತ್ಮಕ್ಕೆ ಶಾಂತಿ-ಸುಖಗಳ ಜೊತೆಗೂಡಿಸುತ್ತದೆ. ರಜೋಗುಣ ಕರ್ಮದ ಜೊತೆಗೆ, ತಮೋಗುಣ ಜ್ಞಾನವನ್ನು ಮುಚ್ಚಿ ಪ್ರಮಾದದ ಜೊತೆಗೆ ಸೇರಿಸುತ್ತವೆ ॥ ೯ ॥

ರಜಸ್ಸು-ತಮಸ್ಸು ಅಡಗಿದರೆ ಸತ್ತ್ವಗುಣ ಮೇಲೆ ಬರುತ್ತದೆ. ಸತ್ತ್ವ-ತಮಸ್ಸುಗಳು ಅಡಗಿದರೆ ರಜೋಗುಣ. ಸತ್ತ್ವ-ರಜೋಗುಣ ಅಡಗಿದರೆ ತಮೋಗುಣ ಮೇಲೆ ಬರುತ್ತವೆ. ॥ ೧೦ ॥

ಈ ದೇಹದಲ್ಲಿ ಸಕಲೇಂದ್ರಿಯಗಳ ಮೂಲಕ ಪ್ರಕಾಶವೂ ಜ್ಞಾನವೂ ಉದ್ಭವಿಸಿದಾಗ ಸತ್ತ್ವಗುಣ ಬೆಳೆದಿದೆಯೆಂದು ತಿಳಿಯಬೇಕು ॥ ೧೧ ॥

ರಜೋಗುಣ ವೃದ್ಧಿಗೊಂಡಾಗ ಲೋಭಪ್ರವೃತ್ತಿ, ಕರ್ಮದ ಆರಂಭ, ಅಶಾಂತಿ, ಇಚ್ಛೆಗಳು ಹುಟ್ಟುತ್ತವೆ. ॥ ೧೨ ॥

---

**ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।**
**ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥ ೮ ॥**

**ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ ।**
**ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥ ೯ ॥**

**ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।**
**ರಜಸ್ಸತ್ತ್ವಂ ತಮಶ್ಚೈವ ತಮಸ್ಸತ್ತ್ವಂ ರಜಸ್ತಥಾ ॥ ೧೦ ॥**

**ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ ।**
**ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ ॥ ೧೧ ॥**

**ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ ।**
**ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ ॥ ೧೨ ॥**

ಕುರುನಂದನ! ತಮೋಗುಣ ವೃದ್ಧಿಯಾದಾಗ ಅಜ್ಞಾನ, ಮಂದತೆ, ಅಸಾವಧಾನ, ಮೋಹಗಳು ಹುಟ್ಟುತ್ತವೆ. || ೧೩ ||

ತನ್ನಲ್ಲಿ ಸತ್ತ್ವಗುಣ ವೃದ್ಧಿಯಾದಮೇಲೆ ದೇಹಧಾರಿ ಮರಣಿಸಿದರೆ ಉತ್ತಮ ಜ್ಞಾನಿಗಳ ನಿರ್ಮಲಲೋಕವನ್ನು ಸೇರುತ್ತಾನೆ. ರಜೋಗುಣದಲ್ಲಿ ಮೃತ್ಯು ಉಂಟಾದರೆ ದೇಹಧಾರಿ ಕರ್ಮಸಂಗಿಗಳ ಲೋಕದಲ್ಲಿ ಹುಟ್ಟುತ್ತಾನೆ. ತಮೋಗುಣದಲ್ಲಿ ಮರಣಿಸಿದವನು ಮೂಢಯೋನಿಯಲ್ಲಿ ಹುಟ್ಟುತ್ತಾನೆ || ೧೪–೧೫ ||

ಟಿಪ್ಪಣಿ—ಕರ್ಮಸಂಗಿ ಅಥವಾ ಮನುಷ್ಯಲೋಕ. ಮೂಢಯೋನಿ ಎಂದರೆ ಪಶು ಇತ್ಯಾದಿ ಲೋಕ

ಸತ್ಕರ್ಮಗಳ ಫಲ ಸಾತ್ತ್ವಿಕ, ನಿರ್ಮಲ ರಾಜಸ ಕರ್ಮದ ಫಲ ದುಃಖ. ತಾಮಸ ಕರ್ಮದ ಫಲ ಅಜ್ಞಾನ. || ೧೬ ||

ಟಿಪ್ಪಣಿ—ನಾವು ಸುಖದುಃಖ ಎಂದು ತಿಳಿದಿರುವುದರ ವಿಷಯವನ್ನು ಇಲ್ಲಿ ಹೇಳಿಲ್ಲ, ಇಲ್ಲಿ ಸುಖವೆಂದರೆ ಆತ್ಮಾನಂದ, ಆತ್ಮಪ್ರಕಾಶ ಇದಕ್ಕೆ ವಿಪರೀತ ದುಃಖ. ಹದಿನೇಳನೆ ಶ್ಲೋಕದಿಂದ ಇದು ಸ್ಪಷ್ಟವಾಗುತ್ತದೆ

---

**ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ || ೧೩ ||**

**ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।**
**ತದೋತ್ತಮವಿದಾಂ ಲೋಕಾನಮಲಾನ್ ಪ್ರತಿಪದ್ಯತೇ || ೧೪ ||**

**ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ ।**
**ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ । || ೧೫ ||**

**ಕರ್ಮಣಸ್ಸುಕೃತಸ್ಯಾಹುಸ್ಸಾತ್ತ್ವಿಕಂ ನಿರ್ಮಲಂ ಫಲಂ ।**
**ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ || ೧೬ ||**

ಸತ್ತ್ವಗುಣದಿಂದ ಜ್ಞಾನ, ರಜೋಗುಣದಿಂದ ಲೋಭ, ತಮೋಗುಣದಿಂದ ಅಸಾವಧಾನ, ಮೋಹ, ಅಜ್ಞಾನಗಳೂ ಹುಟ್ಟುತ್ತವೆ. || ೧೭ ||

ಸಾತ್ತ್ವಿಕ ಮನುಷ್ಯರು ಮೇಲೇರುತ್ತಾರೆ. ರಾಜಸರು ಮಧ್ಯೆ ಇರುತ್ತಾರೆ. ಕೊನೆಯ ಗುಣದ ತಾಮಸರಿಗೆ ಅಧೋಗತಿ. || ೧೮ ||

ಗುಣಗಳಲ್ಲದೆ ಬೇರೆ ಯಾವ ಕರ್ತೃವೂ ಇಲ್ಲವೆಂಬುದನ್ನು ನೋಡಿ ಗುಣಗಳಿಂದ ಆಚೆಗಿರುವುದನ್ನು ಜ್ಞಾನಿ ಅರಿತಾಗ, ಅವನು ನನ್ನ ಭಾವವನ್ನು ಹೊಂದುತ್ತಾನೆ. || ೧೯ ||

ಟಿಪ್ಪಣಿ—ಗುಣಗಳು ಕರ್ತೃ ಎಂದು ತಿಳಿದವನಿಗೆ ಅಹಂಕಾರ ಹುಟ್ಟದು ಅದರಿಂದ ಅವರ ಕೆಲಸಗಳು ಸ್ವಾಭಾವಿಕವೂ ಶರೀರಯಾತ್ರೆಗೆ ಮಾತ್ರವೂ ಆಗಿರುತ್ತವೆ. ಶರೀರಯಾತ್ರೆ ಪರಮಾರ್ಥಕ್ಕಾಗಿಯೇ, ಅದುದರಿಂದ ಅವರ ಎಲ್ಲಾ ಕಾರ್ಯದಲ್ಲಿಯೂ ತ್ಯಾಗ, ವೈರಾಗ್ಯ ಇರಲೇಬೇಕು ಇಂಥಾ ಜ್ಞಾನಿ ಗುಣಾತೀತ ನಿರ್ಗುಣ ಈಶ್ವರನ ಕಲ್ಪನೆ ಮಾಡಿಕೊಂಡು ಅತನನ್ನು ಭಜಿಸುತ್ತಾನೆ

ದೇಹದ ಸಂಗದಿಂದ ಉತ್ಪನ್ನವಾಗುವ ಈ ತ್ರಿಗುಣಗಳಿಂದ ಪಾರಾಗಿ ದೇಹಧಾರಿ ಜನ್ಮ, ಮೃತ್ಯು, ಜಗತ್ತಿನ ದುಃಖಗಳಿಂದ ಬಿಡುಗಡೆ ಹೊಂದಿ ಮೋಕ್ಷ ಪಡೆಯುತ್ತಾನೆ || ೨೦ ||

---

**ಸತ್ತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ |**
**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ || ೧೭ ||**

**ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ |**
**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ || ೧೮ ||**

**ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾಽನುಪಶ್ಯತಿ |**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ || ೧೯ ||**

**ಗುಣಾನೇತಾನತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್ |**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ || ೨೦ ||**

**ಅರ್ಜುನ:**

ಪ್ರಭು, ಈ ಗುಣಗಳನ್ನು ದಾಟಿದವನ ಲಕ್ಷಣವೇನು? ಅವನ ಆಚಾರ ಹೇಗಿರುತ್ತದೆ? ಈ ತ್ರಿಗುಣಗಳನ್ನು ಹೇಗೆ ದಾಟುತ್ತಾನೆ? ॥ ೨೧ ॥

**ಶ್ರೀ ಭಗವಂತ:**

ಪಾಂಡವ! ಪ್ರಕಾಶ, ಪ್ರವೃತ್ತಿ, ಮೋಹಗಳು ಬಂದರೂ ದುಃಖಿಯಾಗದವನು, ಬಾರದಿದ್ದರೆ ಅದನ್ನು ಬಯಸದವನು, ಉದಾಸೀನನಂತೆ ಸ್ಥಿರನಾದವನು, ಗುಣಗಳಿಂದ ಅಲ್ಲಾಡದವನು, ಗುಣಗಳು ತಮ್ಮ ತಮ್ಮ ಕೆಲಸ ಮಾಡಿಕೊಳ್ಳುತ್ತವೆಂದು ತಿಳಿದು ಸ್ಥಿರವಾಗಿರುವವನು, ಚಲಿಸದವನು, ಸುಖ ದುಃಖಗಳಲ್ಲಿ ಸುಖವಾಗಿ ಸ್ವಸ್ಥನಾಗಿರುವವನು, ಕಲ್ಲು–ಮಣ್ಣು–ಬಂಗಾರಗಳು ಸಮಾನವಾದವನು, ಪ್ರಿಯ ವಸ್ತು ಸಿಕ್ಕರೂ ಅಪ್ರಿಯ ವಸ್ತು ಸಿಕ್ಕರೂ ಒಂದೇ

---

**ಅರ್ಜುನ ಉವಾಚ**

**ಕೈರ್ಲಿಂಗೈಸ್ತ್ರೀನ್ ಗುಣಾನೇತಾನತೀತೋ ಭವತಿ ಪ್ರಭೋ ।**
**ಕಿಮಾಚಾರಃ ಕಥಂ ಚೈತಾನ್ ತ್ರೀನ್ ಗುಣಾನತಿವರ್ತತೇ ॥ ೨೧ ॥**

**ಶ್ರೀ ಭಗವಾನುವಾಚ**

**ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ ।**
**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥ ೨೨ ॥**

**ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।**
**ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ ॥ ೨೩ ॥**

**ಸಮದುಃಖಸುಖಸ್ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ।**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ॥ ೨೪ ॥**

**ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।**
**ಸರ್ವಾರಂಭಪರಿತ್ಯಾಗೀ ಗುಣಾತೀತಸ್ಸ ಉಚ್ಯತೇ ॥ ೨೫ ॥**

ರೀತಿ ಇರುವವನು, ತನ್ನ ನಿಂದೆ–ಸ್ತುತಿ ಎರಡೂ ಒಂದೇ ಆದವನು, ಬುದ್ಧಿವಂತ, ಮಾನಾಪಮಾನ ಸಮಾನ ಆದವನು, ಶತ್ರು–ಮಿತ್ರ ಪಕ್ಷ ಎರಡರಲ್ಲಿಯೂ ಸಮಾನಭಾವವನ್ನಿಟ್ಟವನು, ಸಕಲ ಆರಂಭಗಳನ್ನು ತ್ಯಜಿಸಿದವನು ಗುಣಾತೀತನೆಂದು ಹೇಳುತ್ತಾರೆ. || ೨೨–೨೫ ||

ಟಿಪ್ಪಣಿ— ಇಪ್ಪತ್ತೆರಡರಿಂದ ಇಪ್ಪತ್ತೈದರವರೆಗೆ ನಾಲ್ಕು ಶ್ಲೋಕಗಳು ಒಟ್ಟಿಗೆ ವಿಚಾರಯೋಗ್ಯವಾಗಿವೆ. ಮೇಲೆ ಹೇಳಿರುವಂತೆ ಪ್ರಕಾಶ, ಪ್ರವೃತ್ತಿ, ಮೋಹಗಳು ಅನುಕ್ರಮವಾಗಿ ಸತ್ತ್ವ, ರಜಸ್, ತಮಸ್ಸುಗಳ ಪರಿಣಾಮ ಅಥವಾ ಚಿಹ್ನೆಗಳು. ಇದರ ತಾತ್ಪರ್ಯವೇನೆಂದರೆ, ಗುಣಗಳನ್ನು ದಾಟಿಹೋದವನ ಮೇಲೆ ಈ ಪರಿಣಾಮಗಳ ಪ್ರಭಾವ ಬೀಳದು. ಕಲ್ಲಿಗೆ ಪ್ರಕಾಶದ ಅಪೇಕ್ಷೆಯಿಲ್ಲ, ಪ್ರವೃತ್ತಿ–ಜಡತೆಗಳ ದ್ವೇಷವಿಲ್ಲ. ಬಯಸದಿದ್ದರೂ ಅದಕ್ಕೆ ಶಾಂತಿ ಇದ್ದೇ ಇದೆ. ಅದಕ್ಕೆ ಯಾರಾದರೂ ಚಾಲನೆ ಕೊಟ್ಟರೆ ಅವರನ್ನು ಅದು ದ್ವೇಷಿಸದು. ಚಾಲನೆ ಕೊಟ್ಟು ಆಮೇಲೆ ಸ್ಥಿರಗೊಳಿಸಿದರೂ ಅದರಿಂದ ಪ್ರವೃತ್ತಿ–ಚಲನೆ ನಿಂತು, ಮೋಹ–ಜಡತೆ ಬಂತು ಎಂದು ಅದು ದುಃಖಪಡದು. ಈ ಮೂರೂ ಸ್ಥಿತಿಗಳಲ್ಲಿ ಅದು ಏಕ–ಸಮಾನವಾಗಿರುತ್ತದೆ. ಕಲ್ಲಿಗೂ, ಗುಣಾತೀತನಿಗೂ ಭೇದವಿಷ್ಟೆ: ಗುಣಾತೀತ ಚೇತನಮಯ, ಜ್ಞಾನಪೂರ್ವಕವಾಗಿ ಗುಣಗಳ ಪರಿಣಾಮದ, ಸ್ಪರ್ಶದ ತ್ಯಾಗಮಾಡಿದಾನೆ, ಕಲ್ಲಿನಂತೆ ಆಗಿದಾನೆ. ಕಲ್ಲು ಗುಣಗಳ ಅಥವಾ ಪ್ರಕೃತಿಯ ಕರ್ಮಗಳ ಸಾಕ್ಷಿ, ಕರ್ತೃವಲ್ಲ. ಇಂತಹ ಜ್ಞಾನಿ ೨೩ನೆ ಶ್ಲೋಕದಲ್ಲಿ ಹೇಳಿರುವಂತೆ 'ಗುಣ ತನ್ನ ಕೆಲಸ ಮಾಡುತ್ತದೆ' ಎಂದು ತಿಳಿದು ತಾನು ಚಲಿಸದೆ, ಅಚಲನಾಗಿ ಉದಾಸೀನನಂತೆ ಇರುತ್ತಾನೆಂದು ಕಲ್ಪನೆಮಾಡಬಹುದು. ಗುಣಗಳಲ್ಲಿ ತನ್ಮಯರಾಗಿರುವ ನಾವು ಈ ಸ್ಥಿತಿಯನ್ನು ಧೈರ್ಯದಿಂದ ಕೇವಲ ಕಲ್ಪನೆಮಾಡಿ ತಿಳಿದುಕೊಳ್ಳಬಲ್ಲೆವು, ಅನುಭವಿಸಲಾರೆವು. ಆದರೆ ಆ ಕಲ್ಪನೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಅಹಂಭಾವವನ್ನು ದಿನದಿನಕ್ಕೂ ತಗ್ಗಿಸುತ್ತ ಹೋದರೆ, ಕೊನೆಯಲ್ಲಿ ಗುಣಾತೀತ ಸ್ಥಿತಿಯ ಸಮೀಪವನ್ನು ಸಾರಿ, ಅದರ ದರ್ಶನ ಮಾಡಬಲ್ಲೆವು. ಗುಣಾತೀತನಿಗೆ ಈ ಸ್ಥಿತಿಯ ಅನುಭವವಾಗುತ್ತದೆ. ಆದರೆ ಅದನ್ನು ವರ್ಣಿಸಲಾರ. ಅದರ ವರ್ಣನೆ ಮಾಡಬಲ್ಲವನು ಗುಣಾತೀತನಲ್ಲ. ಏಕೆಂದರೆ, ಅಂಥವನಲ್ಲಿ ಅಹಂಭಾವವಿದೆ. ಎಲ್ಲರೂ ಸಹಜವಾಗಿ ಅನುಭವಿಸಬಲ್ಲುದು ಶಾಂತಿ, ಪ್ರಕಾಶ, ಧಾಂಧಲೆ–ಪ್ರವೃತ್ತಿ, ಜಡತೆ, ಮೋಹ. ಗುಣಾತೀತನ ಬಹಳ ಸಮೀಪದ ಸ್ಥಿತಿ ಸಾತ್ತ್ವಿಕತೆ. ಗೀತೆಯಲ್ಲಿ ಹೆಜ್ಜೆಹೆಜ್ಜೆಗೂ ಇದನ್ನು ಸ್ಪಷ್ಟಗೊಳಿಸಿದೆ. ಆದುದರಿಂದ ಸತ್ತ್ವಗುಣದ ವಿಕಾಸವೇ ಮನುಷ್ಯಮಾತ್ರರ ಪ್ರಯತ್ನವಾಗಿರಬೇಕು. ಗುಣಾತೀತ ಸ್ಥಿತಿ ಖಂಡಿತ ಲಭಿಸುತ್ತದೆಂಬ ವಿಶ್ವಾಸ ಅವನಿಗಿರಬೇಕು.

ಏಕನಿಷ್ಠ ಭಕ್ತಿಯೋಗದಿಂದ ನನ್ನ ಸೇವೆ ಮಾಡುವವನು ಈ ಮೂರು ಗುಣಗಳನ್ನೂ ದಾಟಿ ಬ್ರಹ್ಮರೂಪ ಪಡೆಯಲು ಯೋಗ್ಯನಾಗುತ್ತಾನೆ ॥ ೨೬ ॥

ಬ್ರಹ್ಮದ ಸ್ಥಿತಿಯೂ ನಾನೇ, ಶಾಶ್ವತ ಮೋಕ್ಷದ ಸ್ಥಿತಿಯೂ ನಾನೇ. ಇದೇ ರೀತಿ ಸನಾತನ ಧರ್ಮ, ಉತ್ತಮ ಸುಖಗಳ ಸ್ಥಿತಿಯೂ ಕೂಡ ನಾನೇ. ॥ ೨೭ ॥

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ಗುಣತ್ರಯವಿಭಾಗಯೋಗವೆಂಬ ಹದಿನಾಲ್ಕನೆಯ ಅಧ್ಯಾಯ

---

---

**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥ ೨೬ ॥**

**ಬ್ರಹ್ಮಣೋ ಹಿ ಪ್ರತಿಷ್ಠಾಽಹಮಮೃತಸ್ಯಾವ್ಯಯಸ್ಯ ಚ ।**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥ ೨೭ ॥**

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ಗುಣತ್ರಯವಿಭಾಗಯೋಗೋ ನಾಮ ಚತುರ್ದಶೋಽಧ್ಯಾಯಃ ॥**

---

# ಅಧ್ಯಾಯ ೧೫

## ಪುರುಷೋತ್ತಮಯೋಗ

[ಈ ಅಧ್ಯಾಯದಲ್ಲಿ ಕ್ಷರ–ಅಕ್ಷರಗಳಿಗೆ ಅತೀತವಾದ ತನ್ನ ಉತ್ತಮ ಸ್ವರೂಪವನ್ನು ಭಗವಂತ ತಿಳಿಸಿದಾನೆ.]

**ಶ್ರೀ ಭಗವಂತ :**

ಯಾವುದರ ಬೇರು ಮೇಲೆ, ಕೊಂಬೆಗಳು ಕೆಳಗೋ, ವೇದಗಳೇ ಎಲೆಗಳೋ—ಇಂಥ ಅವಿನಾಶಿ ಅಶ್ವತ್ಥವೃಕ್ಷದ ವರ್ಣನೆಯನ್ನು ಬುದ್ಧಿವಂತರು ಮಾಡಿದಾರೆ ಇದನ್ನು ಅರಿತವನು ವೇದವನ್ನರಿತ ಜ್ಞಾನಿ. ॥ ೧ ॥

ಟಿಪ್ಪಣಿ—'ಶ್ವಃ' ಎಂದರೆ ನಾಳೆ, ಆದುದರಿಂದ ಅಶ್ವತ್ಥವೆಂದರೆ ನಾಳೆಯವರೆಗೆ ಬಾಳಲಾರದ ಕ್ಷಣಿಕ ಪ್ರಪಂಚ ಪ್ರತಿ ಕ್ಷಣವೂ ಪ್ರಪಂಚ ರೂಪಾಂತರಗೊಳ್ಳುತ್ತಿದೆ. ಇದರಿಂದ ಅದು ಅಶ್ವತ್ಥ ಆದರೆ ಅದು ಈ ಸ್ಥಿತಿಯಲ್ಲಿ ಯಾವಾಗಲೂ ಇರುತ್ತದೆ, ಅದರ ಬೇರು ಊರ್ಧ್ವ ಎಂದರೆ ಈಶ್ವರ, ಆದುದರಿಂದ ಅದು ಅವಿನಾಶಿ. ಅದಕ್ಕೆ ವೇದದ ಅಥವಾ ಧರ್ಮದ ಶುದ್ಧ ಜ್ಞಾನ ರೂಪ ಎಲೆ ಇಲ್ಲದಿದ್ದರೆ ಅದು ಶೋಭೆ ಕೊಡದು. ಈ ರೀತಿ ಯಾರಿಗೆ ಸಂಸಾರದ ಯಥಾರ್ಥ ಜ್ಞಾನವಿದೆಯೋ, ಧರ್ಮದ ಅರಿವಿದೆಯೋ ಅವನೇ ಜ್ಞಾನಿ.

---

## ಅಥ ಪಂಚದಶೋಽಧ್ಯಾಯಃ

### ಶ್ರೀ ಭಗವಾನುವಾಚ

**ಊರ್ಧ್ವಮೂಲಮಧಶ್ಶಾಖಮಶ್ವತ್ಥಂ ಪ್ರಾಹುರವ್ಯಯಮ್ ।**
**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥ ೧ ॥**

ಗುಣಗಳ ಸ್ಪರ್ಶದಿಂದ ಬೆಳೆದ, ವಿಷಯರೂಪ ಅಂಕುರಗಳುಳ್ಳ ಆ ಅಶ್ವತ್ಥದ ಕೊಂಬೆಗಳು ಕೆಳಗೂ ಮೇಲೂ ಹರಡಿಕೊಂಡಿವೆ ಕರ್ಮವನ್ನು ಬಂಧನವಾಗಿಸುವ ಆದರ ಬೇರುಗಳು ಮನುಷ್ಯಲೋಕದಲ್ಲಿ ಕೆಳಗೆ ಹರಡಿ ಕೊಂಡಿವೆ || ೨ ||

ಟಿಪ್ಪಣಿ—ಅಜ್ಞಾನಿಯ ದೃಷ್ಟಿಯಿಂದ ಪ್ರಪಂಚವೃಕ್ಷದ ವರ್ಣನೆ ಇದು ಆವನು ಆದರ ಮೇಲುಗಡೆ ಈಶ್ವರನಲ್ಲಿರುವ ಬೇರನ್ನು ನೋಡ ಆದಕ್ಕೆ ಬದಲಾಗಿ ವಿಷಯಗಳ ರಮಣೀಯತೆಯಿಂದ ಮುಗ್ಧನಾಗಿ ತ್ರಿಗುಣಗಳ ಮೂಲಕ ಈ ವೃಕ್ಷವನ್ನು ಪೋಷಿಸು ತ್ತಾನೆ. ಮನುಷ್ಯ ಲೋಕದಲ್ಲಿ ಕರ್ಮಪಾಶದಿಂದ ಬಂಧಿತನಾಗಿರುತ್ತಾನೆ.

ಇದರ ಯಥಾರ್ಥ ಸ್ವರೂಪ ನೋಡಲು ಸಿಗದು. ಇದಕ್ಕೆ ಅಂತ–ಆದಿ ಆಧಾರ ಯಾವುದೂ ಇಲ್ಲ. ಬಹಳ ಆಳವಾಗಿ ಬೇರೂರಿರುವ ಈ ಅಶ್ವತ್ಥವನ್ನು ಅಸಂಗರೂಪದ ಬಲವಾದ ಶಸ್ತ್ರದಿಂದ ಛೇದಿಸಿ, ಮನುಷ್ಯ 'ಸನಾತನ ಪ್ರವೃತ್ತಿ-ಮಾಯೆಯನ್ನು ಹರಡಿರುವ ಆದಿಪುರುಷನಿಗೆ ನಾನು ಶರಣುಹೋಗು

---

ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ
ಗುಣಪ್ರವೃದ್ಧಾ ವಿಷಯಪ್ರವಾಲಾಃ ।
ಅಧಶ್ಚ ಮೂಲಾನ್ಯನುಸಂತತಾನಿ
ಕರ್ಮಾನುಬಂಧೀನಿ ಮನುಷ್ಯಲೋಕೇ || ೨ ||

ನ ರೂಪಮಸ್ಯೇಹ ತಥೋಪಲಭ್ಯತೇ
ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ ।
ಅಶ್ವತ್ಥಮೇನಂ ಸುವಿರೂಢಮೂಲ-
ಮಸಂಗಶಸ್ತ್ರೇಣ ದೃಢೇನ ಛಿತ್ತ್ವಾ || ೩ ||

ತತಃ ಪದಂ ತತ್ಪರಿಮಾರ್ಗಿತವ್ಯಂ
ಯಸ್ಮಿನ್ ಗತಾ ನ ನಿವರ್ತಂತಿ ಭೂಯಃ ।
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ
ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ || ೪ ||

ತ್ತೇನೆ ' ಎಂದು ಪ್ರಾರ್ಥಿಸಿ ಮತ್ತೆ ಜನನ–ಮರಣಗಳ ಚಕ್ರದಲ್ಲಿ ಬೀಳಿಸದಂಥ ಪದವನ್ನು ಹುಡುಕಲೆತ್ನಿಸಬೇಕು ॥ ೩–೪ ॥

ಟಿಪ್ಪಣಿ—ಅಸಂಗವೆಂದರೆ ಅಸಹಕಾರ, ವೈರಾಗ್ಯ. ಮನುಷ್ಯ ವಿಷಯಗಳೊಡನೆ ಅಸಹಕಾರ ಮಾಡದಿರುವವರೆಗೆ, ಅವುಗಳ ಪ್ರಲೋಭನದಿಂದ ದೂರವಾಗಿರದವರೆಗೆ, ಅವನು ಅವುಗಳಲ್ಲಿ ಲಿಪ್ತ. ವಿಷಯಗಳೊಂದಿಗೆ ಆಡುತ್ತಲಿದ್ದು ಅವುಗಳಿಂದ ಅಸ್ಪೃಶ್ಯನಾಗಿರುವುದು ಅಸಂಭವವೆಂಬುದನ್ನು ಶ್ಲೋಕದಲ್ಲಿ ತೋರಲಾಗಿದೆ.

ಮಾನ–ಮೋಹಗಳನ್ನು ತ್ಯಾಗಮಾಡಿದ, ಆಸಕ್ತಿಯಿಂದುಂಟಾಗುವ ದೋಷಗಳನ್ನು ದೂರಗೊಳಿಸಿದ, ನಿತ್ಯವೂ ಆತ್ಮನಿಮಗ್ನನಾದ, ವಿಷಯಗಳು ಶಮನಗೊಂಡ, ಸುಖದುಃಖರೂಪದ ದ್ವಂದ್ವಗಳಿಂದ ಮುಕ್ತನಾದ ಜ್ಞಾನಿ ಅವಿನಾಶಪದವನ್ನು ಹೊಂದುತ್ತಾನೆ ॥ ೫ ॥

ಯಾವ ಸ್ಥಾನವನ್ನೈದಿದವರು ಮತ್ತೆ ಹುಟ್ಟಬೇಕಾಗಿಲ್ಲವೊ ಆ ಸ್ಥಾನ ನನ್ನ ಪರಮಧಾಮ. ಅಲ್ಲಿ ಸೂರ್ಯ–ಚಂದ್ರ–ಅಗ್ನಿ ಬೆಳಗಬೇಕಾಗಿಲ್ಲ ॥ ೬ ॥

ನನ್ನ ಸನಾತನ ಅಂಶವೇ ಜೀವಲೋಕದಲ್ಲಿ ಜೀವವಾಗಿ ಪ್ರಕೃತಿಯ ಐದು ಇಂದ್ರಿಯಗಳನ್ನು, ಮನಸ್ಸನ್ನು ಆಕರ್ಷಿಸುತ್ತದೆ. ॥ ೭ ॥

---

**ನಿರ್ಮಾನಮೋಹಾ ಜಿತಸಂಗದೋಷಾ**
**ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।**
**ದ್ವಂದ್ವೈರ್ವಿಮುಕ್ತಾಸ್ಸುಖದುಃಖಸಂಜ್ಞೈ–**
**ರ್ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥ ೫ ॥**

**ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।**
**ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೬ ॥**

**ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ ।**
**ಮನಃ ಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥ ೭ ॥**

ಈಶ್ವರ (ಜೀವವಾದ ಈ ನನ್ನ ಅಂಶರೂಪ) ಶರೀರಧಾರಣೆ ಮಾಡಿದಾಗ ಅಥವಾ ಬಿಟ್ಟಾಗ, ಸುತ್ತಮುತ್ತಲಿನ ಮಂಡಲದಿಂದ ವಾಯು ಗಂಧವನ್ನೆತ್ತಿ ಕೊಂಡು ಹೋಗುವಂತೆ, (ಮನಸ್ಸು ಇಂದ್ರಿಯಗಳನ್ನು) ಜೊತೆಗೆ ಒಯ್ಯುತ್ತಾನೆ ॥ ೮ ॥

ಕಿವಿ, ಕಣ್ಣು, ಚರ್ಮ, ನಾಲಗೆ, ಮೂಗು, ಮನಸ್ಸುಗಳ ಆಶ್ರಯ ಪಡೆದು ಅವನು ವಿಷಯಗಳನ್ನು ಸೇವಿಸುತ್ತಾನೆ. ॥ ೯ ॥

ಟಿಪ್ಪಣಿ—ಇಲ್ಲಿ ವಿಷಯವೆಂದರೆ ಬೀಭತ್ಸ ವಿಲಾಸವಲ್ಲ. ಆಯಾ ಇಂದ್ರಿಯಗಳ ಸ್ವಾಭಾವಿಕ ಕ್ರಿಯೆ. ಹೇಗೆಂದರೆ, ಕಣ್ಣುಗಳ ವಿಷಯ ನೋಡುವುದು, ಕಿವಿಗಳದು ಕೇಳುವುದು, ನಾಲಗೆಯದು ಸವಿಯುವುದು—ಈ ಕ್ರಿಯೆಗಳು ವಿಕಾರಯುಕ್ತ, ಅಹಂಕಾರ ಪೂರ್ಣವಾದರೆ ದೂಷಿತ, ಬೀಭತ್ಸ ಎನ್ನಿಸುತ್ತವೆ. ಆದರೆ ನಿರ್ವಿಕಾರವಾದರೆ ನಿರ್ದೋಷ. ಹುಡುಗ ಕಣ್ಣುಗಳಿಂದ ನೋಡುವಾಗ, ಕೈಯಿಂದ ಮುಟ್ಟುವಾಗ ವಿಕಾರವಶನಾಗುವುದಿಲ್ಲ. ಆದುದರಿಂದ ಮುಂದಿನ ಶ್ಲೋಕದಲ್ಲಿ ಹೀಗೆ ಹೇಳಿದೆ.

(ಶರೀರದ) ತ್ಯಾಗಮಾಡುವವನನ್ನು ಅಥವಾ ಅದರಲ್ಲಿರುವವನನ್ನು ಅಥವಾ ಗುಣಗಳ ಆಶ್ರಯದಿಂದ ಭೋಗಗಳನ್ನು ಭೋಗಿಸುವವನನ್ನು (ಅಂಶರೂಪಿ ಈಶ್ವರನನ್ನು) ಮೂರ್ಖರು ನೋಡಲಾರರು. ದಿವ್ಯಚಕ್ಷುಗಳುಳ್ಳ ಜ್ಞಾನಿಯೇ ನೋಡಬಲ್ಲ. ॥ ೧೦ ॥

---

**ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥ ೮ ॥**

**ಶ್ರೋತ್ರಂ ಚಕ್ಷುಸ್ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥ ೯ ॥**

**ಉತ್ಕ್ರಾಮಂತಂ ಸ್ಥಿತಂ ವಾಽಪಿ ಭುಂಜಾನಂ ವಾ ಗುಣಾನ್ವಿತಮ್ ।**
**ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥ ೧೦ ॥**

ಯತ್ನಶೀಲರಾದ ಯೋಗಿಗಳು ತಮ್ಮಲ್ಲಿರುವವ(ಈಶ್ವರ)ನನ್ನು ನೋಡು ತ್ತಾರೆ ಆತ್ಮಶುದ್ಧಿ ಇಲ್ಲದ ಮೂಢರು ಯತ್ನಿಸಿದರೂ ಇವನನ್ನು ನೋಡಲಾರರು ॥ ೧೧ ॥

ಟಿಪ್ಪಣಿ—ಇದಕ್ಕೂ ೯ನೆಯ ಅಧ್ಯಾಯದಲ್ಲಿ ಭಗವಂತ ದುರಾಚಾರಿಗಳಿಗೆ ಕೊಟ್ಟಿರುವ ವಚನಕ್ಕೂ ವಿರೋಧವಿಲ್ಲ ಅಕೃತಾತ್ಮನೆಂದರೆ ಭಕ್ತಿಹೀನ, ಸ್ವೇಚ್ಛಾಚಾರಿ, ದುರಾಚಾರಿ ನಮ್ರತಾಪೂರ್ವಕ ಶ್ರದ್ಧೆಯಿಂದ ಈಶ್ವರನನ್ನು ಭಜಿಸುವವನು ಆತ್ಮಶುದ್ಧ ನಾಗಿ ಈಶ್ವರನನ್ನು ಅರಿಯುತ್ತಾನೆ ಯಮನಿಯಮಾದಿಗಳನ್ನು ಲಕ್ಷಿಸದೆ ಕೇವಲ ಬುದ್ಧಿ ಪ್ರಯೋಗದಿಂದ ಈಶ್ವರನನ್ನು ತಿಳಿಯಲಪೇಕ್ಷಿಸುವವನು ಅಚೇತ_ಚಿತ್ತವಿಹೀನ, ರಾಮ ರಹಿತ, ರಾಮನನ್ನು ಅರಿಯಲಾರ

ಸೂರ್ಯನ ಯಾವ ತೇಜಸ್ಸು ಸಮಸ್ತ ಜಗತ್ತನ್ನು ಪ್ರಕಾಶಗೊಳಿಸು ತ್ತದೋ, ಯಾವ ತೇಜಸ್ಸು ಚಂದ್ರ, ಅಗ್ನಿಗಳಲ್ಲಿದೆಯೋ ಆ ತೇಜಸ್ಸು ನನ್ನದೇ ಎಂದು ತಿಳಿ. ॥ ೧೨ ॥

ಪೃಥ್ವಿಯಲ್ಲಿ ಪ್ರವೇಶಿಸಿ ನನ್ನ ಶಕ್ತಿಯಿಂದ ನಾನು ಪ್ರಾಣಿಗಳನ್ನು ಉತ್ಪನ್ನಮಾಡುವ ಚಂದ್ರನಾಗಿ ಸಕಲ ವನಸ್ಪತಿಗಳ ಪೋಷಣೆಮಾಡುತ್ತೇನೆ. ॥ ೧೩ ॥

ಪ್ರಾಣಿಗಳ ಶರೀರವನ್ನಾಶ್ರಯಿಸಿ ನಾನು ಜಠರಾಗ್ನಿಯಾಗಿ ಪ್ರಾಣ, ಅಪಾನ ವಾಯುಗಳ ಮೂಲಕ ನಾಲ್ಕು ಬಗೆಯ ಅನ್ನವನ್ನು ಪಚನ ಮಾಡುತ್ತೇನೆ ॥ ೧೪ ॥

---

**ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಮ್ ।**
**ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ॥ ೧೧ ॥**

**ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।**
**ಯಚ್ಚಂದ್ರಮಸಿಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥೧೨॥**

**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।**
**ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ॥೧೩॥**

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥ ೧೪ ॥**

ಎಲ್ಲದರ ಹೃದಯದಲ್ಲಿಯೂ ಅಧಿಷ್ಠಿತನಾದ ನನ್ನಿಂದಲೇ ಸ್ಮೃತಿ, ಜ್ಞಾನವೂ, ಅವುಗಳ ಅಭಾವವೂ ಉಂಟಾಗುತ್ತದೆ ಸಕಲ ವೇದಗಳ ಮೂಲಕವೂ ಅರಿಯಲು ಯೋಗ್ಯ ನಾನೇ, ವೇದವನ್ನರಿತವನೂ ನಾನೇ, ವೇದಾಂತವನ್ನು ಪ್ರಕಟಿಸುವವನೂ ನಾನೇ. ॥ ೧೫ ॥

ಈ ಲೋಕದಲ್ಲಿ ಕ್ಷರ ಎಂದರೆ ನಾಶವಂತ, ಅಕ್ಷರ ಎಂದರೆ ಅವಿನಾಶಿ— ಎಂಬ ಎರಡು ಬಗೆಯ ಪುರುಷರು ಭೂತಮಾತ್ರಗಳು ಕ್ಷರ ಅವುಗಳಲ್ಲಿ ಸ್ಥಿರವಾಗಿರುವ ಅಂತರ್ಯಾಮಿ ಅಕ್ಷರ. ॥ ೧೬ ॥

ಇವಲ್ಲದೆ ಉತ್ತಮ ಪುರುಷ ಬೇರೆ ಇದಾನೆ ಅವನನ್ನು ಪರಮಾತ್ಮ ಎನ್ನುತ್ತಾರೆ ಆ ಅವ್ಯಯನಾದ ಈಶ್ವರ ಮೂರು ಲೋಕಗಳಲ್ಲಿಯೂ ಪ್ರವೇಶಿಸಿ ಅವನ್ನು ಪೋಷಿಸುತ್ತಾನೆ ॥ ೧೭ ॥

ನಾನು ಕ್ಷರಕ್ಕೆ ಅತೀತ, ಅಕ್ಷರಕ್ಕಿಂತ ಉತ್ತಮ ಇದರಿಂದ ಲೋಕಗಳಲ್ಲಿಯೂ ವೇದಗಳಲ್ಲಿಯೂ ನಾನು ಪುರುಷೋತ್ತಮನೆಂಬ ಹೆಸರಿನಿಂದ ಪ್ರಸಿದ್ಧನಾಗಿದೇನೆ ॥ ೧೮ ॥

---

**ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟೋ**
**ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।**
**ವೇದೈಶ್ಚ ಸರ್ವೈರಹಮೇವ ವೇದ್ಯೋ**
**ವೇದಾಂತಕೃದ್ವೇದವಿದೇವ ಚಾಹಮ್ ॥ ೧೫ ॥**

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ೧೬ ॥**

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ೧೭ ॥**

**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ ೧೮ ॥**

ಭಾರತ ! ಮೋಹರಹಿತನಾಗಿ ಪುರುಷೋತ್ತಮನಾದ ನನ್ನನ್ನು ಅರಿಯುವವನು ಸಕಲವನ್ನೂ ಅರಿಯುತ್ತಾನೆ. ಪೂರ್ಣಭಾವದಿಂದ ನನ್ನ ಭಜನೆ ಮಾಡುತ್ತಾನೆ. ॥ ೧೯ ॥

ಅನಘ! ರಹಸ್ಯಾತಿರಹಸ್ಯವಾದ ಈ ಶಾಸ್ತ್ರವನ್ನು ನಾನು ನಿನಗೆ ಹೇಳಿದೆ. ಇದನ್ನರಿತು ಮನುಷ್ಯ ಬುದ್ಧಿಶಾಲಿಯಾಗಿ ತನ್ನ ಜೀವನವನ್ನು ಸಫಲಗೊಳಿಸಿಕೊಳ್ಳಲಿ. ॥ ೨೦ ॥

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ಪುರುಷೋತ್ತಮಯೋಗವೆಂಬ ಹದಿನೈದನೆಯ ಅಧ್ಯಾಯ.

---

---

**ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥ ೧೯ ॥**

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ ।**
**ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥ ೨೦ ॥**

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ಪುರುಷೋತ್ತಮಯೋಗೋ ನಾಮ ಪಂಚದಶೋಽಧ್ಯಾಯಃ ॥**

---

# ಅಧ್ಯಾಯ ೧೬

## ದೈವಾಸುರಸಂಪದ್‌ವಿಭಾಗಯೋಗ

**[ಇಲ್ಲಿ ದೈವೀ, ಆಸುರೀ ಸಂಪದಗಳ ವರ್ಣನೆ ಇದೆ.]**

**ಶ್ರೀ ಭಗವಂತ :**

ಭಾರತ! ಅಭಯ, ಅಂತಃಕರಣಶುದ್ಧಿ, ಜ್ಞಾನಯೋಗಗಳಲ್ಲಿ ನಿಷ್ಠೆ, ದಾನ, ದಮ, ಯಜ್ಞ, ಸ್ವಾಧ್ಯಾಯ, ತಪಸ್ಸು, ಸರಳತೆ, ಅಹಿಂಸೆ, ಸತ್ಯ, ಅಕ್ರೋಧ, ತ್ಯಾಗ, ಶಾಂತಿ, ಅಪೈಶುನ, ಭೂತದಯೆ, ಅಲೋಲುಪತೆ, ಮೃದುತ್ವ, ಮರ್ಯಾದೆ, ಅಚಂಚಲತೆ, ತೇಜಸ್ವಿತೆ, ಕ್ಷಮೆ, ಧೃತಿ, ಶೌಚ, ಅದ್ರೋಹ, ನಿರಭಿಮಾನ—ಇಷ್ಟು ಗುಣ ದೈವೀಸಂಪತ್ತಿನೊಂದಿಗೆ ಹುಟ್ಟಿದವರಲ್ಲಿ ಇರುತ್ತವೆ || ೧-೩ ||

ಟಿಪ್ಪಣಿ—ದಮ ಅಥವಾ ಇಂದ್ರಿಯನಿಗ್ರಹ, ಅಪೈಶುನ ಎಂದರೆ ಪರರನ್ನು ನಿಂದಿಸದಿರುವುದು, ಅಲೋಲುಪತೆ ಎಂದರೆ ಲಾಲಸೆಯಿಲ್ಲದಿರುವುದು, ಲಂಪಟನಾಗದಿರುವುದು, ತೇಜಸ್ವಿತೆ ಎಂದರೆ ಎಲ್ಲ ಬಗೆಯ ಹೀನವೃತ್ತಿಯನ್ನೂ ವಿರೋಧಿಸುವ ಶಕ್ತಿ, ಅದ್ರೋಹವೆಂದರೆ ಯಾರಿಗೂ ಕೆಡಕು ಬಯಸದೆ, ಮಾಡದೆ ಇರುವುದು

---

## ಅಥ ಷೋಡಶೋಽಧ್ಯಾಯಃ

### ಶ್ರೀ ಭಗವಾನುವಾಚ

**ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ |**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ || ೧ ||**

**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಶ್ಶಾಂತಿರಪೈಶುನಮ್ |**
**ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಮ್ || ೨ ||**

**ತೇಜಃ ಕ್ಷಮಾ ಧೃತಿಶ್ಶೌಚಮದ್ರೋಹೋ ನಾತಿಮಾನಿತಾ |**
**ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ || ೩ ||**

ಪಾರ್ಥ! ಆಸುರೀ ಸಂಪತ್ತನ್ನು ಪಡೆದು ಹುಟ್ಟಿದವರಲ್ಲಿ ದಂಭ, ದರ್ಪ, ಅಭಿಮಾನ, ಕ್ರೋಧ, ಪಾರುಷ್ಯ, ಅಜ್ಞಾನಗಳು ಕಂಡುಬರುತ್ತವೆ. || ೪ ||

ಟಿಪ್ಪಣಿ—ತನ್ನಲ್ಲಿಲ್ಲದುದನ್ನು ತೋರಿಸುವುದು ದಂಭ, ಡೌಲು, ಪಾಷಂಡತನ, ದರ್ಪವೆಂದರೆ ದೊಡ್ಡಸ್ತಿಕೆ, ಹೆಚ್ಚುಗಾರಿಕೆ, ಪಾರುಷ್ಯ ಎಂದರೆ ಕಠೋರತೆ.

ದೈವೀಸಂಪತ್ತು ಮೋಕ್ಷದಾಯಕ, ಆಸುರೀಸಂಪತ್ತು ಬಂಧನದಲ್ಲಿ ತೊಡಕಿಸುವಂಥದು ಪಾಂಡವ, ವಿಷಾದಿಸಬೇಡ ನೀನು ದೈವೀಸಂಪದವನ್ನು ಪಡೆದು ಹುಟ್ಟಿದೀಯೆ || ೫ ||

ಈ ಲೋಕದಲ್ಲಿ ಎರಡು ಬಗೆಯ ಸೃಷ್ಟಿ. ದೈವೀ–ಆಸುರೀ. ಪಾರ್ಥ! ದೈವೀಯ ವಿಸ್ತೃತ ವರ್ಣನೆ ಮಾಡಿದುದಾಯಿತು. ಈಗ ಆಸುರೀಯ ವರ್ಣನೆ ಕೇಳು. || ೬ ||

ಅಸುರ ಜನರು ಪ್ರವೃತ್ತಿ–ನಿವೃತ್ತಿಗಳನ್ನು ಅರಿಯರು. ಶೌಚ, ಆಚಾರ, ಸತ್ಯದ ಭಾಸವೂ ಅವರಿಗೆ ಇಲ್ಲ. || ೭ ||

---

**ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ || ೪ ||**

**ದೈವೀಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ ।**
**ಮಾ ಶುಚಸ್ಸಂಪದಂ ದೈವೀಮಭಿಜಾತೋಽಸಿ ಪಾಂಡವ || ೫ ||**

**ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।**
**ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು || ೬ ||**

**ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ || ೭ ||**

ಜಗತ್ತೆಲ್ಲ ಅಸತ್ಯ, ಆಧಾರರಹಿತ, ಈಶ್ವರವಿಹೀನ, ಕೇವಲ ಸ್ತ್ರೀ ಪುರುಷರ ಸಂಬಂಧದಿಂದ ಹುಟ್ಟಿದೆ ಎಂದು ಅವರು ಹೇಳುತ್ತಾರೆ ವಿಷಯ ಭೋಗದ ಹೊರತು ಅದಕ್ಕೆ ಮತ್ತಾವ ಉದ್ದೇಶ್ಯವಿರಬಲ್ಲದು ? || ೮ ||

ಭಯಾನಕ ಕೆಲಸಗಳನ್ನು ಮಾಡುವವರೂ, ಮಂದಮತಿಗಳೂ, ದುಷ್ಟರೂ ಈ ಬಗೆಯ ವಿಚಾರಗಳನ್ನು ಅವಲಂಬಿಸುವ ಜಗತ್ತಿನ ಶತ್ರುಗಳೂ ಅದನ್ನು ನಾಶಗೊಳಿಸಲು ಹುಟ್ಟುತ್ತಾರೆ. || ೯ ||

ಎಂದಿಗೂ ತೃಪ್ತಿಯಾಗದ ಕಾಮನೆಗಳಿಂದ ತುಂಬಿದ ದಾಂಭಿಕ, ಅಭಿಮಾನಿ, ಮದಾಂಧ, ಅಶುಭಸಂಕಲ್ಪರು ಮೋಹದ ದೆಸೆಯಿಂದ ದುಷ್ಟ ಇಚ್ಛೆಗಳನ್ನು ಧರಿಸಿ ವರ್ತಿಸುತ್ತಾರೆ. || ೧೦ ||

ಪ್ರಳಯದವರೆಗೆ ಮುಗಿಯದಿರುವ ಇಂಥ ಅಪರಿಮಿತ ಚಿಂತೆಯನ್ನಾಶ್ರಯಿಸಿ, ಕಾಮಗಳ ಪರಮಭೋಗಿಗಳಾಗಿ, 'ಭೋಗವೇ ಸರ್ವಸ್ವ'ವೆಂದು

---

ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।
ಅಪರಸ್ಪರ ಸಂಭೂತಂ ಕಿಮನ್ಯತ್ಕಾಮಹೈತುಕಮ್ || ೮ ||

ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ || ೯ ||

ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ ।
ಮೋಹಾದ್ಗೃಹೀತ್ವಾಽಸದ್ಗ್ರಾಹಾನ್ ಪ್ರವರ್ತಂತೇಽಶುಚಿವ್ರತಾಃ
|| ೧೦ ||

ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ ।
ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ || ೧೧ ||

ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।
ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್
|| ೧೨ ||

ನಿಶ್ಚಯಿಸಿದ, ನೂರಾರು ಆಸೆಗಳ ಬಲೆಗಳಲ್ಲಿ ಸಿಕ್ಕಿದ ಕಾಮಿ, ಕೋಪಿಗಳು, ವಿಷಯಭೋಗಕ್ಕಾಗಿ ಅನ್ಯಾಯದಿಂದ ಧನಸಂಗ್ರಹ ಮಾಡಬಯಸುತ್ತಾರೆ. ॥ ೧೧-೧೨ ॥

ಇವೊತ್ತು ಇದು ನನಗೆ ಸಿಕ್ಕಿತು, ಈ ಮನೋರಥವನ್ನು ನೆರವೇರಿಸಿ ಕೊಳ್ಳುತ್ತೇನೆ, ಇಷ್ಟು ಧನ ಇದೆ, ಮತ್ತೆ ನಾಳೆ ಇಷ್ಟು ಧನ ನನ್ನದಾಗುತ್ತದೆ, ಈ ಶತ್ರುವನ್ನು ಕೊಂದೆ, ಉಳಿದವರನ್ನು ಕೊಲ್ಲುತ್ತೇನೆ, ನಾನು ಸರ್ವಸಂಪನ್ನ, ಭೋಗಿ, ಸಿದ್ಧ, ಬಲಿಷ್ಠ, ಸುಖಿ, ಶ್ರೀಮಂತ, ಕುಲೀನ, ನನಗೆ ಯಾರು ಸಾಟಿ? ನಾನು ಯಜ್ಞಮಾಡುತ್ತೇನೆ, ದಾನ ಕೊಡುತ್ತೇನೆ, ಆನಂದಪಡು ತ್ತೇನೆ—ಅಜ್ಞಾನಿಗಳು ಹೀಗೆ ವಿಚಾರಮಾಡುತ್ತಾರೆ. ಅವರು ಅನೇಕ ಭ್ರಮೆಗಳಿಗೊಳಗಾಗುತ್ತಾರೆ, ಮೋಹಜಾಲದಲ್ಲಿ ಸಿಗುತ್ತಾರೆ, ವಿಷಯಭೋಗ ಗಳಲ್ಲಿ ಮುಳುಗಿ ಅಶುಭ ನರಕದಲ್ಲಿ ಬೀಳುತ್ತಾರೆ. ॥ ೧೩-೧೬ ॥

ತಾವೇ ದೊಡ್ಡವರೆನ್ನುವವರು, ಜಂಬಗಾರರು, ಧನ-ಮಾನಗಳ ಮದ ದಲ್ಲಿ ಮುಳುಗಿದವರು, ವಿಧಿಗಳಿಲ್ಲದೆ ದಂಭದಿಂದ ಕೇವಲ ಹೆಸರಿಗೆ ಮಾತ್ರ ಯಜ್ಞಮಾಡುತ್ತಾರೆ. ॥ ೧೭ ॥

---

**ಇದಮದ್ಯ ಮಯಾ ಲಬ್ಧಮಿದಂ ಪ್ರಾಪ್ಸ್ಯೇ ಮನೋರಥಮ್ ।**
**ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ॥ ೧೩ ॥**

**ಅಸೌ ಮಯಾ ಹತಶ್ಶತ್ರುರ್ಹನಿಷ್ಯೇ ಚಾಪರಾನಪಿ ।**
**ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ॥ ೧೪ ॥**

**ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥ ೧೫ ॥**

**ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥ ೧೬ ॥**

**ಆತ್ಮಸಂಭಾವಿತಾಸ್ಸ್ತಬ್ಧಾ ಧನಮಾನಮದಾನ್ವಿತಾಃ ।**
**ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಮ್ ॥ ೧೭ ॥**

ಈ ಜನರು ಅಹಂಕಾರ, ಬಲ, ದರ್ಪ, ಕಾಮ, ಕ್ರೋಧಗಳ ಆಶ್ರಯ ಹೊಂದಿ, ನಿಂದೆ ಮಾಡುವವರಾಗಿ, ಅವರಲ್ಲಿಯೂ ಅನ್ಯರಲ್ಲಿಯೂ ಇರುವ ನನ್ನನ್ನು ದ್ವೇಷಿಸುತ್ತಾರೆ. ॥ ೧೮ ॥

ಈ ನೀಚ, ದ್ವೇಷಿ, ಕ್ರೂರ, ಅಶುಭ ನರಾಧಮರನ್ನು ನಾನು ಈ ಜಗತ್ತಿನ ಅತ್ಯಂತ ಆಸುರೀ ಯೋನಿಗಳಲ್ಲಿಯೇ ಬಾರಿಬಾರಿಗೂ ಕೆಡಹುತ್ತೇನೆ. ॥ ೧೯ ॥

ಕೌಂತೇಯ! ಪ್ರತಿಯೊಂದು ಜನ್ಮದಲ್ಲಿಯೂ ಆಸುರೀ ಯೋನಿಯನ್ನು ಹೊಂದಿ ನನ್ನನ್ನು ಅರಿಯಲಾರದೆ ಈ ಜನರು ಇದಕ್ಕಿಂತಲೂ ಅಧಿಕ ಅಧಮ ಗತಿಯನ್ನೈದುತ್ತಾರೆ. ॥ ೨೦ ॥

ಕಾಮ, ಕ್ರೋಧ, ಲೋಭ—ಮೂರೂ ಆತ್ಮವನ್ನು ನಾಶಪಡಿಸುವ ನರಕದ ಮೂರು ಬಾಗಿಲು. ಆದುದರಿಂದ ಮನುಷ್ಯ ಇವು ಮೂರನ್ನೂ ತ್ಯಜಿಸ ಬೇಕು. ॥ ೨೧ ॥

---

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ ।**
**ಮಾಮಾತ್ಮ ಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥ ೧೮ ॥**

**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ ೧೯ ॥**

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ ॥ ೨೦ ॥**

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥ ೨೧ ॥**

ಕೌಂತೇಯ! ಈ ಮೂರು ನರಕದ್ವಾರಗಳಿಂದ ದೂರವಾಗಿರುವ ಮನುಷ್ಯ ಆತ್ಮಕ್ಕೆ ಕಲ್ಯಾಣಮಾಡುತ್ತಾನೆ, ಅನಂತರ ಪರಮಗತಿಯನ್ನು ಹೊಂದುತ್ತಾನೆ ॥ ೨೨ ॥

ಯಾವ ಮನುಷ್ಯ ಶಾಸ್ತ್ರವಿಧಿಯನ್ನು ಬಿಟ್ಟು ಸ್ವೇಚ್ಛಾನುಸಾರ ಭೋಗಗಳಲ್ಲಿ ಮಗ್ನನಾಗಿರುತ್ತಾನೋ ಅವನಿಗೆ ಸಿದ್ಧಿಯೂ ಆಗದು, ಸುಖವೂ ಸಿಗದು, ಉತ್ತಮ ಗತಿಯೂ ಬಾರದು ॥ ೨೩ ॥

ಟಿಪ್ಪಣಿ—ಶಾಸ್ತ್ರವಿಧಿ ಎಂದರೆ ಧರ್ಮದ ಹೆಸರಿನಿಂದ ಪ್ರಸಿದ್ಧವಾದ ಗ್ರಂಥಗಳಲ್ಲಿ ಹೇಳಿರುವ ಅನೇಕ ಕ್ರಿಯೆಗಳಲ್ಲ, ಅನುಜ್ಞಾನವುಳ್ಳ ಸತ್ಪುರುಷರಿಂದ ಆಚರಿತವಾದ ಸಂಯಮ ಮಾರ್ಗ

ಇದಕ್ಕೋಸುಗ ಕಾರ್ಯ-ಅಕಾರ್ಯಗಳ ನಿರ್ಣಯ ಮಾಡುವಾಗ ನೀನು ಶಾಸ್ತ್ರವನ್ನು ಪ್ರಮಾಣವೆಂದು ಭಾವಿಸಬೇಕು ಶಾಸ್ತ್ರವಿಧಿಯನ್ನರಿತು ಈ ಲೋಕದಲ್ಲಿ ಕರ್ಮ ಮಾಡಬೇಕು. ॥ ೨೪ ॥

ಟಿಪ್ಪಣಿ—ಇಲ್ಲಿಯೂ ಶಾಸ್ತ್ರವೆಂಬುದರ ಅರ್ಥ ಮೇಲೆ ಹೇಳಿದಂತೆಯೇ. ಎಲ್ಲರೂ ತಮ್ಮ ತಮ್ಮ ನೇಮ ಮಾಡಿಕೊಂಡು ಸ್ವೇಚ್ಛಾಚಾರಿಗಳಾಗದೆ ಧರ್ಮಾನುಭವಿಗಳ ವಚನವನ್ನು ಪ್ರಮಾಣವೆಂದು ಬಾವಿಸಬೇಕೆಂಬುದೇ ಈ ಶ್ಲೋಕದ ಆಶಯ

---

**ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ ।**
**ಆಚರತ್ಯಾತ್ಮನಶ್ಶ್ರೇಯಸ್ತತೋ ಯಾಂತಿ ಪರಾಂ ಗತಿಂ ॥ ೨೨ ॥**

**ಯಶ್ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ॥ ೨೩ ॥**

**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥ ೨೪ ॥**

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ದೈವಾಸುರಸಂಪದ್ವಿಭಾಗಯೋಗವೆಂಬ ಹದಿನಾರನೆಯ ಅಧ್ಯಾಯ

---

---

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ದೈವಾಸುರಸಂಪದ್ವಿಭಾಗಯೋಗೋ ನಾಮ ಷೋಡಶೋಽಧ್ಯಾಯಃ॥**

---

# ಅಧ್ಯಾಯ ೧೭

## ಶ್ರದ್ಧಾತ್ರಯವಿಭಾಗಯೋಗ

**[ಶಾಸ್ತ್ರ ಅಥವಾ ಶಿಷ್ಟಾಚಾರವನ್ನು ಪ್ರಮಾಣವಾಗಿ ಭಾವಿಸಬೇಕು ಎಂಬುದನ್ನು ಕೇಳಿದೊಡನೆ ಅರ್ಜುನನ ಮನಸ್ಸಿನಲ್ಲಿ, ಶಿಷ್ಟಾಚಾರವನ್ನು ಮನ್ನಿಸದಿದ್ದರೂ ಶ್ರದ್ಧೆಯಿಂದ ಕೆಲಸಮಾಡಿದವರ ಗತಿಯೇನು ಎಂಬ ಸಂಶಯ ಹುಟ್ಟಿತು. ಈ ಅಧ್ಯಾಯ ಅದಕ್ಕೆ ಉತ್ತರ ಕೊಡುವ ಪ್ರಯತ್ನ. ಆದರೆ ಶಿಷ್ಟಾಚಾರರೂಪದ ದೀವಿಗೆಯನ್ನು ತ್ಯಜಿಸಿದನಂತರದ ಶ್ರದ್ಧೆಯಲ್ಲಿ ಭಯವಿದೆಯೆಂದು ಹೇಳಿ ಭಗವಂತ ಸಂತೋಷ ಸೂಚಿಸುತ್ತಾನೆ. ಈ ಕಾರಣದಿಂದ ಶ್ರದ್ಧೆ, ಅದರ ಸಹಾಯದಿಂದಾಗುವ ಯಜ್ಞ, ತಪಸ್ಸು, ದಾನಾದಿಗಳನ್ನು ಗುಣಾನುಸಾರ ಮೂರು ಭಾಗಮಾಡಿ ತೋರಿಸಿದೆ. 'ಓಂ ತತ್ ಸತ್'ದ ಮಹಿಮೆಯನ್ನೂ ಹಾಡಲಾಗಿದೆ.]**

**ಅರ್ಜುನ :**

ಕೃಷ್ಣ! ಶಾಸ್ತ್ರವಿಧಿ- ಅರ್ಥಾತ್ ಶಿಷ್ಟಾಚಾರವನ್ನು ಮನ್ನಿಸದೆ ಕೇವಲ ಶ್ರದ್ಧೆಯಿಂದಲೇ ಪೂಜಾದಿಗಳನ್ನು ಮಾಡುವವನ ಗತಿ ಏನು? ಸಾತ್ತ್ವಿಕವೊ, ರಾಜಸವೊ, ತಾಮಸವೊ? ॥ ೧ ॥

---

## ಅಥ ಸಪ್ತದಶೋಽಧ್ಯಾಯಃ

---

**ಅರ್ಜುನ ಉವಾಚ**

**ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾಽನ್ವಿತಾಃ ।**
**ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ॥ ೧ ॥**

**ಶ್ರೀ ಭಗವಂತ :**

ಮನುಷ್ಯನಲ್ಲಿ ಸ್ವಾಭಾವಿಕವಾಗಿ ಶ್ರದ್ಧೆ ಮೂರು ಬಗೆ—ಸಾತ್ತ್ವಿಕ, ರಾಜಸ, ತಾಮಸ, ಅದನ್ನು ಕೇಳು ॥ ೨ ॥

ಭಾರತ! ಅವರವರ ಸ್ವಭಾವಾನುಸಾರ ಅವರವರ ಶ್ರದ್ಧೆ. ಮನುಷ್ಯನಲ್ಲಿ ಸ್ವಲ್ಪವಾದರೂ ಶ್ರದ್ಧೆ ಇರುತ್ತದೆ ಅವರವರ ಶ್ರದ್ಧೆಯಿಂದ ಹಾಗೇ ಅವರವರು. ॥ ೩ ॥

ಸಾತ್ತ್ವಿಕ ಜನರು ದೇವತೆಗಳನ್ನು ಭಜಿಸುತ್ತಾರೆ ರಾಜಸರು ಯಕ್ಷರಾಕ್ಷಸರನ್ನೂ, ತಾಮಸರು ಭೂತಪ್ರೇತಾದಿಗಳನ್ನೂ ಪೂಜಿಸುತ್ತಾರೆ ॥ ೪ ॥

ದಂಭ–ಅಹಂಕಾರಗಳೊಡನೆ ಕಾಮ–ರಾಗಗಳ ಬಲದಿಂದ ಪ್ರೇರಿತರಾಗಿ ಶಾಸ್ತ್ರವಿಧಿರಹಿತವಾದ ಘೋರ ತಪಸ್ಸನ್ನು ಮಾಡುವ ಮೂರ್ಖ ಜನರು ಶರೀರ

---

**ಶ್ರೀ ಭಗವಾನುವಾಚ**

**ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।**
**ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥ ೨ ॥**

**ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥ ೩ ॥**

**ಯಜಂತೇ ಸಾತ್ತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ ।**
**ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ॥ ೪ ॥**

**ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ ।**
**ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥ ೫ ॥**

**ಕರ್ಷಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ ।**
**ಮಾಂ ಚೈವಾಂತಃಶರೀರಸ್ಥಂ ತಾನ್ ವಿದ್ಧ್ಯಾಸುರನಿಶ್ಚಯಾನ್ ॥ ೬ ॥**

ದಲ್ಲಿರುವ ಪಂಚಮಹಾಭೂತಗಳಿಗೂ ಅವರ ಅಂತಃಕರಣದಲ್ಲಿರುವ ನನಗೂ ಕಷ್ಟ ಕೊಡುತ್ತಾರೆ ಅಂಥವರು ಆಸುರೀಬುದ್ಧಿಯವರು, ತಿಳಿ. || ೫-೬ ||

ಆಹಾರವೂ ಮೂರು ಬಗೆಯಿಂದ ಪ್ರಿಯವಾಗುತ್ತದೆ. ಅದರಂತೆಯೇ ಯಜ್ಞ, ತಪಸ್ಸು, ದಾನಗಳೂ (ಮೂರು ಬಗೆಯಿಂದ ಪ್ರಿಯ) ಅವುಗಳ ಭೇದವನ್ನು ಕೇಳು. || ೭ ||

ಆಯುಷ್ಯ, ಸಾತ್ತ್ವಿಕತೆ, ಆರೋಗ್ಯ, ಸುಖ, ರುಚಿ ಹೆಚ್ಚಿಸುವಂಥ ರಸಪೂರ್ಣ, ಸ್ನಿಗ್ಧ, ಪೌಷ್ಟಿಕ ಆದ, ಮನಸ್ಸಿಗೆ ರುಚಿಸುವ ಆಹಾರ ಸಾತ್ತ್ವಿಕ ಜನರಿಗೆ ಪ್ರಿಯ. || ೮ ||

ಕಹಿ, ಹುಳಿ, ಉಪ್ಪು, ಬಹಳ ಬಿಸಿ, ತೀಕ್ಷ್ಣ, ಒಣಕಲು, ದಾಹಕಾರಕ ಆದ ಆಹಾರ ರಾಜಸ ಜನರಿಗೆ ಪ್ರಿಯ ಈ ಬಗೆಯ ಆಹಾರ ದುಃಖ, ಶೋಕ, ರೋಗಗಳನ್ನು ಹುಟ್ಟಿಸುತ್ತದೆ. || ೯ ||

ಆರಿದ್ದು, ರಸರಹಿತ, ದುರ್ವಾಸನೆ, ತಂಗಳು, ಎಂಜಲು, ಅಪವಿತ್ರ ಆದ ಭೋಜನ ತಾಮಸ ಜನರಿಗೆ ಪ್ರಿಯ. || ೧೦ ||

---

**ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ |**
**ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು || ೭ ||**

**ಆಯುಸ್ಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ |**
**ರಸ್ಯಾಸ್ಸ್ನಿಗ್ಧಾಸ್ಸ್ಥಿರಾ ಹೃದ್ಯಾ ಆಹಾರಾಸ್ಸಾತ್ತ್ವಿಕಪ್ರಿಯಾಃ || ೮ ||**

**ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ |**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ || ೯ ||**

**ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ |**
**ಉಚ್ಛಿಷ್ಟಮಪಿಚಾಮೇಧ್ಯಂ ಭೋಜನಂ ತಾಮಸಪ್ರಿಯಂ || ೧೦ ||**

ಫಲದ ಇಚ್ಛೆ ಇಲ್ಲದೆ, ವಿಧಿಪೂರ್ವಕ ಕರ್ತವ್ಯವೆಂದರಿತು ತಲ್ಲೀನತೆಯಿಂದ ಮಾಡಿದ ಯಜ್ಞ ಸಾತ್ತ್ವಿಕ ಫಲದ ಉದ್ದೇಶ್ಯದಿಂದ, ದಂಭಾರ್ಥವಾಗಿ ಮಾಡಿದ ಯಜ್ಞ ರಾಜಸ ವಿಧಿ ಇಲ್ಲದುದು, ಅನ್ನದ ಉತ್ಪತ್ತಿ ಇಲ್ಲದುದು, ಮಂತ್ರವಿಲ್ಲದುದು, ತ್ಯಾಗವಿಲ್ಲದುದು, ಶ್ರದ್ಧೆ ಇಲ್ಲದುದು—ಇಂಥ ಯಜ್ಞವನ್ನು ಬುದ್ಧಿಶಾಲಿಗಳು ತಾಮಸ ಯಜ್ಞ ಎನ್ನುತ್ತಾರೆ. ॥ ೧೧–೧೩ ॥

ದೇವ ಬ್ರಾಹ್ಮಣ ಗುರು ಜ್ಞಾನಿಗಳ ಪೂಜೆ, ಪವಿತ್ರತೆ, ಸರಳತೆ, ಬ್ರಹ್ಮಚರ್ಯೆ, ಅಹಿಂಸೆ ಇವು ಶಾರೀರಕ ತಪ. ॥ ೧೪ ॥

ದುಃಖ ಕೊಡದಿರುವುದು, ಸತ್ಯ ಪ್ರಿಯ ಹಿತಕರ ಆದ ವಚನವನ್ನಾಡುವುದು, ಧರ್ಮಗ್ರಂಥಗಳ ಅಭ್ಯಾಸಮಾಡುವುದು ವಾಚಿಕ ತಪಸ್ಸೆನಿಸುತ್ತದೆ. ॥ ೧೫ ॥

ಮನಸ್ಸಿನ ಪ್ರಸನ್ನತೆ, ಸೌಮ್ಯತೆ, ಮೌನ, ಆತ್ಮಸಂಯಮ, ಭಾವನಾ ಶುದ್ಧಿಗಳಿಗೆ ಮಾನಸಿಕ ತಪಸ್ಸೆಂದು ಹೆಸರು. ॥ ೧೬ ॥

---

**ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।**
**ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥ ೧೧ ॥**
**ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ ।**
**ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥ ೧೨ ॥**
**ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ ।**
**ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥ ೧೩ ॥**
**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ ೧೪ ॥**
**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ ೧೫ ॥**
**ಮನಃಪ್ರಸಾದಃಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ತಪೋಮಾನಸಮುಚ್ಯತೇ ॥ ೧೬ ॥**

ಸಮಭಾವದ ಪುರುಷರು ಫಲೇಚ್ಛೆಯನ್ನು ತ್ಯಜಿಸಿ ಪರಮಶ್ರದ್ಧೆಯಿಂದ ಮೇಲೆ ಹೇಳಿದ ಮೂರು ಬಗೆಯ ತಪಸ್ಸುಮಾಡಿದರೆ ಬುದ್ಧಿಶಾಲಿಗಳು ಅದನ್ನು ಸಾತ್ತ್ವಿಕ ತಪಸ್ಸು ಎನ್ನುತ್ತಾರೆ || ೧೭ ||

ಸತ್ಕಾರ, ಮಾನ, ಪೂಜಾರ್ಥವಾಗಿ ದಂಭದಿಂದ ಮಾಡಿದ ಅಸ್ಥಿರ, ಅನಿಶ್ಚಿತ ತಪಸ್ಸು ರಾಜಸವೆನಿಸುತ್ತದೆ || ೧೮ ||

ಆತ್ಮಪೀಡಾಕರವಾಗಿ, ದುರಾಗ್ರಹದಿಂದ, ಪರರನ್ನು ನಾಶಗೊಳಿಸುವ ಇಚ್ಛೆಯಿಂದ ಮಾಡಿದ ತಪಸ್ಸು ತಾಮಸ ತಪ || ೧೯ ||

ಕೊಡುವುದು ಉಚಿತವೆಂದರಿತು ಪ್ರತ್ಯುಪಕಾರದ ಆಸೆಯನ್ನಿಟ್ಟುಕೊಳ್ಳದೆ ದೇಶ–ಕಾಲ–ಪಾತ್ರಗಳನ್ನು ನೋಡಿ ಕೊಟ್ಟ ದಾನ ಸಾತ್ತ್ವಿಕವೆನಿಸುತ್ತದೆ || ೨೦ ||

ಪ್ರತ್ಯುಪಕಾರದ ಆಸೆಯಿಂದಾಗಲಿ ಫಲದ ಇಚ್ಛೆಯಿಂದಾಗಲಿ ದುಃಖ ದೊಡನೆ ಕೊಟ್ಟ ದಾನ ರಾಜಸವೆನಿಸುತ್ತದೆ || ೨೧ ||

---

**ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ |**
**ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ || ೧೭ ||**

**ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ |**
**ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ || ೧೮ ||**

**ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ |**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ || ೧೯ ||**

**ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ |**
**ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ || ೨೦ ||**

**ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ |**
**ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ || ೨೧ ||**

ದೇಶ–ಕಾಲ–ಪಾತ್ರಗಳ ವಿಚಾರವಿಲ್ಲದೆ ಆದರರಹಿತವಾಗಿ ತಿರಸ್ಕಾರ ದಿಂದ ಕೊಟ್ಟ ದಾನ ತಾಮಸದಾನ. || ೨೨ ||

ಬ್ರಹ್ಮನ ವರ್ಣನೆ ಓಂ–ತತ್–ಸತ್ ಎಂದು ಮೂರು ಬಗೆಯಿಂದ ಆಗಿದೆ ಇದರಿಂದಲೇ ಬ್ರಾಹ್ಮಣ, ವೇದ, ಯಜ್ಞಗಳು ನಿರ್ಮಾಣವಾದವು. || ೨೩ ||

ಈ ಕಾರಣದಿಂದ ಬ್ರಹ್ಮವಾದಿಗಳು ಓಂಕಾರವನ್ನುಚ್ಚರಿಸಿ ಯಜ್ಞ–ದಾನ–ತಪಸ್ಸಿನ ರೂಪದ ಕ್ರಿಯೆಗಳನ್ನು ಯಾವಾಗಲೂ ವಿಧಿಪೂರ್ವಕ ಮಾಡುತ್ತಾರೆ || ೨೪ ||

ಮೋಕ್ಷಾರ್ಥಿಗಳು ತತ್ ಎಂಬ ಉಚ್ಚಾರಣೆಮಾಡಿ ಫಲದ ಆಸೆಯಿಡದೆ ಯಜ್ಞ, ತಪಸ್ಸು, ದಾನರೂಪವಾದ ವಿವಿಧ ಕಾರ್ಯಗಳನ್ನು ಮಾಡುತ್ತಾರೆ || ೨೫ ||

ಸತ್ಯ, ಕಲ್ಯಾಣ ಎಂಬ ಅರ್ಥದಲ್ಲಿ ಸತ್ ಶಬ್ದದ ಪ್ರಯೋಗ ಮಾಡುತ್ತಾರೆ ಪಾರ್ಥ! ಒಳ್ಳೆಯ ಕರ್ಮಗಳಲ್ಲಿಯೂ ಸತ್ ಶಬ್ದವನ್ನು ಉಪಯೋಗಿಸುತ್ತಾರೆ || ೨೬ ||

---

**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ || ೨೨ ||**

**ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಸ್ಸ್ಮೃತಃ ।**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ || ೨೩ ||**

**ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃ ಕ್ರಿಯಾಃ ।**
**ಪ್ರವರ್ತಂತೇ ವಿಧಾನೋಕ್ತಾಸ್ಸತತಂ ಬ್ರಹ್ಮವಾದಿನಾಂ || ೨೪ ||**

**ತದಿತ್ಯನಭಿಸಂಧಾಯ ಫಲಂ ಯಜ್ಞತಪಃ ಕ್ರಿಯಾಃ ।**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ || ೨೫ ||**

**ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ || ೨೬ ||**

ಯಜ್ಞ, ತಪಸ್ಸು, ದಾನಗಳಲ್ಲಿ ದೃಢತೆಗೂ ಸತ್ ಎನ್ನುತ್ತಾರೆ ಸತ್‌ಗಾಗಿಯೆ ಕರ್ಮ ಎಂಬ ಸಂಕಲ್ಪವೂ ಸತ್ ಎನಿಸುತ್ತದೆ || ೨೭ ||

ಟಿಪ್ಪಣಿ—ಪ್ರತಿಯೊಂದು ಕರ್ಮವನ್ನೂ ಈಶ್ವರಾರ್ಪಣ ಮಾಡಿಯೇ ಮಾಡಬೇಕೆಂಬುದು ಮೇಲಿನ ಮೂರು ಶ್ಲೋಕಗಳ ಭಾವಾರ್ಥ ಏಕೆಂದರೆ 'ಓಂ' ಎಂಬುದೇ ಸತ್, ಸತ್ಯ ಅದಕ್ಕೆ ಅರ್ಪಣ ಮಾಡಿದ್ದು ಫಲಿಸುತ್ತದೆ

ಪಾರ್ಥ! ಶ್ರದ್ಧೆಯಿಲ್ಲದ ಯಜ್ಞ, ದಾನ, ತಪಸ್ಸಾಗಲಿ ಬೇರೆ ಕೆಲಸವಾಗಲಿ ಅಸತ್ ಎನಿಸುತ್ತದೆ ಅದರಿಂದ ಇಲ್ಲಿಯೂ ಪ್ರಯೋಜನವಿಲ್ಲ, ಪರಲೋಕದಲ್ಲಿಯೂ ಇಲ್ಲ. || ೨೮ ||

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ಶ್ರದ್ಧಾತ್ರಯವಿಭಾಗಯೋಗವೆಂಬ ಹದಿನೇಳನೆಯ ಅಧ್ಯಾಯ.

---

---

**ಯಜ್ಞೇ ತಪಸಿ ದಾನೇ ಚ ಸ್ಥಿತಿಸ್ಸದಿತಿ ಚೋಚ್ಯತೇ |**
**ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ || ೨೭ ||**

**ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ |**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ || ೨೮ ||**

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ಶ್ರದ್ಧಾತ್ರಯವಿಭಾಗಯೋಗೋ ನಾಮ ಸಪ್ತದಶೋಽಧ್ಯಾಯಃ ||**

---

# ಅಧ್ಯಾಯ ೧೮

## ಸಂನ್ಯಾಸಯೋಗ

**[ಈ ಅಧ್ಯಾಯ ಉಪಸಂಹಾರದಂತಿದೆ. 'ಸಕಲಧರ್ಮಗಳನ್ನೂ ಬಿಟ್ಟು ನನಗೆ ಶರಣಾಗತನಾಗು' ಎಂಬುದೇ ಇದರ ಅಥವಾ ಗೀತೆಯ ಪ್ರೇರಕಮಂತ್ರ. ಇದೇ ನಿಜವಾದ ಸಂನ್ಯಾಸ. ಆದರೆ ಸಕಲಧರ್ಮತ್ಯಾಗವೆಂದರೆ ಸಕಲಕರ್ಮತ್ಯಾಗವಲ್ಲ. ಪರೋಪಕಾರ ಕಾರ್ಯದಲ್ಲಿಯೂ ಸರ್ವೋತ್ಕೃಷ್ಟ ಕಾರ್ಯವನ್ನು ಆತನಿಗೆ ಅರ್ಪಣೆ ಮಾಡಿ ಫಲೇಚ್ಛೆಯನ್ನು ಬಿಡುವುದು—ಇದುವೇ ಸರ್ವಧರ್ಮತ್ಯಾಗ ಅಥವಾ ಸಂನ್ಯಾಸ.]**

**ಅರ್ಜುನ :**

ಹೃಷೀಕೇಶ! ಸಂನ್ಯಾಸ, ತ್ಯಾಗಗಳ ರಹಸ್ಯಗಳನ್ನು ಬೇರೆ ಬೇರೆಯಾಗಿ ತಿಳಿದುಕೊಳ್ಳಬಯಸುತ್ತೇನೆ. ॥ ೧ ॥

**ಶ್ರೀ ಭಗವಂತ :**

ಕಾಮ್ಯ (ಕಾಮನದಿಂದ ಹುಟ್ಟಿದ) ಕರ್ಮಗಳ ತ್ಯಾಗವೇ ಸಂನ್ಯಾಸವೆಂದು ಜ್ಞಾನಿಗಳು ಹೇಳುತ್ತಾರೆ ಸಮಸ್ತ ಕರ್ಮಗಳ ಫಲವನ್ನು ತ್ಯಜಿಸುವುದೇ ತ್ಯಾಗ ಎಂದು ಬುದ್ಧಿವಂತರು ಹೇಳುತ್ತಾರೆ. ॥ ೨ ॥

---

### ಅಥಾಷ್ಟಾದಶೋಽಧ್ಯಾಯಃ

---

**ಅರ್ಜುನ ಉವಾಚ**

**ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ ।**
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ ॥ ೧ ॥**

**ಶ್ರೀ ಭಗವಾನುವಾಚ**

**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ ।**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥ ೨ ॥**

ಕರ್ಮ ದೋಷಮಯ ಆದುದರಿಂದ ಅದು ತ್ಯಾಗಯೋಗ್ಯವೆಂದು ವಿಚಾರವಂತರು ಹೇಳುತ್ತಾರೆ. ಯಜ್ಞ, ದಾನ, ತಪಸ್ಸಿನ ರೂಪದ ಕರ್ಮಗಳನ್ನು ತ್ಯಜಿಸಬಾರದೆಂದು ಕೆಲವರು ಹೇಳುತ್ತಾರೆ || ೩ ||

ಭರತಸತ್ತಮ! ಈ ತ್ಯಾಗದ ಬಗ್ಗೆ ನನ್ನ ನಿರ್ಣಯವನ್ನು ಕೇಳು. ತ್ಯಾಗದ ವರ್ಣನೆ ಮೂರು ಬಗೆ || ೪ ||

ಯಜ್ಞ, ದಾನ, ತಪಸ್ಸು—ಇಂಥ ಕರ್ಮ ತ್ಯಾಜ್ಯವಲ್ಲ, ಮಾಡಲು ಯೋಗ್ಯ. ಯಜ್ಞ, ದಾನ, ತಪಸ್ಸುಗಳು ವಿವೇಕಿಗಳನ್ನು ಪಾವನಗೊಳಿಸುತ್ತವೆ || ೫ ||

ಪಾರ್ಥ! ಆಸಕ್ತಿ-ಫಲೇಚ್ಛೆಗಳನ್ನು ಬಿಟ್ಟೇ ಈ ಕರ್ಮ ಮಾಡಬೇಕು, ಇದು ನನ್ನ ನಿಶ್ಚಿತ, ಉತ್ತಮ ಅಭಿಪ್ರಾಯ. || ೬ ||

ನಿಯತಕರ್ಮದ ತ್ಯಾಗ ಉಚಿತವಲ್ಲ ಮೋಹವಶನಾಗಿ ಅದನ್ನು ಬಿಟ್ಟರೆ ಆ ತ್ಯಾಗ ತಾಮಸವೆನಿಸುತ್ತದೆ || ೭ ||

---

**ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ |**
**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ || ೩ ||**

**ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ |**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಸ್ಸಂಪ್ರಕೀರ್ತಿತಃ || ೪ ||**

**ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ |**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ || ೫ ||**

**ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ |**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಂ || ೬ ||**

**ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ |**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ || ೭ ||**

ಶರೀರಕ್ಕೆ ಕಷ್ಟ ಎಂಬ ಭಯದಿಂದ, ದುಃಖದಾಯಕ ಎಂಬ ತಿಳಿವಳಿಕೆಯಿಂದ ಮಾಡಿದ ಕರ್ಮತ್ಯಾಗ ರಾಜಸತ್ಯಾಗ. ಇದರಿಂದ ಅವನಿಗೆ ತ್ಯಾಗದ ಫಲ ಲಭಿಸದು ॥ ೮ ॥

ಅರ್ಜುನ, ಇದು ಮಾಡಲೇಬೇಕಾದುದು ಎಂದರಿತು ಆ ನಿಯತ ಕರ್ಮವನ್ನು ಸಂಗ–ಫಲಗಳನ್ನು ತ್ಯಜಿಸಿ ಮಾಡಿದರೆ ಅದು ಸಾತ್ತ್ವಿಕ ತ್ಯಾಗ. ॥ ೯ ॥

ಸಂಶಯರಹಿತ, ಶುದ್ಧಭಾವನೆಯ ತ್ಯಾಗಿ, ಬುದ್ಧಿವಂತ—ಅಹಿತವಾದ ಕರ್ಮವನ್ನು ದ್ವೇಷಿಸ. ಹಿತವಾದ ಕರ್ಮಗಳಲ್ಲಿ ಆಸಕ್ತಿಯನ್ನಿಡ ॥ ೧೦ ॥

ದೇಹಧಾರಿಗೆ ಕರ್ಮವನ್ನು ಸಂಪೂರ್ಣವಾಗಿ ತ್ಯಜಿಸುವುದು ಶಕ್ಯವೇ ಅಲ್ಲ. ಆದರೆ ಕರ್ಮಫಲವನ್ನು ತ್ಯಾಗಮಾಡಿದವನು ತ್ಯಾಗಿ ಎನಿಸಿಕೊಳ್ಳುತ್ತಾನೆ ॥ ೧೧ ॥

ತ್ಯಾಗಮಾಡದವನಿಗೆ, ಸಮಯಾನುಸಾರ ಅಶುಭ, ಶುಭ, ಶುಭಾಶುಭ—ಹೀಗೆ ತ್ರಿವಿಧ ಕರ್ಮಫಲ ಲಭಿಸುತ್ತದೆ. ತ್ಯಾಗಿ(ಸಂನ್ಯಾಸಿ)ಗೆ ಆ ಫಲ ಎಂದಿಗೂ ಇಲ್ಲ. ॥ ೧೨ ॥

---

**ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥ ೮ ॥**

**ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।**
**ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಸ್ಸಾತ್ತ್ವಿಕೋ ಮತಃ ॥ ೯ ॥**

**ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।**
**ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥ ೧೦ ॥**

**ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥ ೧೧ ॥**

**ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥ ೧೨ ॥**

ಕರ್ಮಮಾತ್ರದ ಸಿದ್ಧಿಗೆ ಸಾಂಖ್ಯಶಾಸ್ತ್ರದಲ್ಲಿ ಐದು ಕಾರಣ ತೋರಲಾಗಿದೆ, ಕೇಳು ಆ ಐದು. ಕ್ಷೇತ್ರ, ಕರ್ತೃ, ಭಿನ್ನಭಿನ್ನ ಸಾಧನೆ, ಭಿನ್ನಭಿನ್ನ ಕ್ರಿಯೆ, ಐದನೆಯದು ದೈವ ॥ ೧೩–೧೪ ॥

ಶರೀರದಿಂದಾಗಲಿ, ವಾಣಿಯಿಂದಾಗಲಿ, ಮನಸ್ಸಿನಿಂದಾಗಲಿ ಮನುಷ್ಯ ಮಾಡುವ ನೀತಿಪೂರ್ಣ ಅಥವಾ ನೀತಿವಿರುದ್ಧ ಕರ್ಮಗಳಿಗೆ ಈ ಐದು ಕಾರಣ ॥ ೧೫ ॥

ಹೀಗಿರಲು, ಅಸಂಸ್ಕೃತ ಬುದ್ಧಿಯಿಂದ ತಾನೇ ಕರ್ತೃವೆಂದು ಭಾವಿಸಿದರೆ ಆ ದುರ್ಮತಿ ಏನೂ ತಿಳಿಯದವನು. ॥ ೧೬ ॥

ಅಹಂಭಾವವಿಲ್ಲದವನು, ಬುದ್ಧಿ ಮಲಿನವಾಗಿಲ್ಲದವನು ಈ ಜಗತ್ತನ್ನು ಕೊಂದರೂ ಕೊಲ್ಲಲಿಲ್ಲ ಬಂಧನದಲ್ಲಿ ಬೀಳುವುದೂ ಇಲ್ಲ ॥ ೧೭ ॥

---

ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।
ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್
॥ ೧೩ ॥

ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।
ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಂ ॥ ೧೪ ॥

ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ ।
ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥ ೧೫ ॥

ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।
ಪಶ್ಯತ್ಯಕೃತಬುದ್ಧಿತ್ವಾತ್ ನ ಸ ಪಶ್ಯತಿ ದುರ್ಮತಿಃ ॥ ೧೬ ॥

ಯಸ್ಯ ನಾಹಂ ಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।
ಹತ್ವಾಽಪಿ ಸ ಇಮಾನ್ ಲೋಕಾನ್ ನ ಹಂತಿ ನ ನಿಬಧ್ಯತೇ ॥ ೧೭ ॥

ಟಿಪ್ಪಣಿ—ಮೇಲೆ ಮೇಲೆ ಓದಿದರೆ ಈ ಶ್ಲೋಕ ಮನುಷ್ಯನನ್ನು ಭ್ರಮೆಯಲ್ಲಿ ಸಿಲುಕಿಸುತ್ತದೆ ಗೀತೆಯ ಅನೇಕ ಶ್ಲೋಕಗಳು ಕಾಲ್ಪನಿಕ ಆದರ್ಶವನ್ನು ಅವಲಂಬಿಸಿವೆ ಆದರೆ ಪ್ರತ್ಯಕ್ಷ ಮಾದರಿ ಜಗತ್ತಿನಲ್ಲಿ ಸಿಗಲಾರದು. ಕೇವಲ ಉಪಯುಕ್ತತೆಗಾಗಿ ಕಾಲ್ಪನಿಕ ಆದರ್ಶದ ಆಕೃತಿಗಳು ಭೂಮಿತಿಯಲ್ಲಿ ಹೇಗೆ ಆವಶ್ಯಕವೋ ಧರ್ಮವ್ಯವಹಾರದಲ್ಲಿಯೂ ಹಾಗೇ ಆದುದರಿಂದ ಈ ಶ್ಲೋಕವನ್ನು ಈ ರೀತಿ ಅರ್ಥಮಾಡಬಹುದು: 'ಯಾರ ಅಹಂಭಾವ ಸುಟ್ಟು ಬೂದಿಯಾಗಿದೆಯೋ, ಯಾರ ಬುದ್ಧಿಯಲ್ಲಿ ಅಣುಮಾತ್ರವಾದರೂ ಮಾಲಿನ್ಯವಿಲ್ಲವೋ ಅಂಥವನು ಸಮಗ್ರ ಜಗತ್ತನ್ನು ಕೊಂದರೆ ಕೊಲ್ಲಲಿ ಆದರೆ ಯಾರಲ್ಲಿ ಅಹಂಭಾವವಿಲ್ಲವೋ ಅವನಿಗೆ ಶರೀರವೂ ಇಲ್ಲ. ಯಾರ ಬುದ್ಧಿ ವಿಶುದ್ಧವೋ ಅವನು ತ್ರಿಕಾಲದರ್ಶಿ ಇಂಥ ಪುರುಷ ಕೇವಲ ಭಗವಂತನೊಬ್ಬನೇ ಅವನು ಏನು ಮಾಡಿದರೂ ಅಕರ್ತೃ ನಾಶಮಾಡುತ್ತಿದ್ದರೂ ಅಹಿಂಸಕ. ಆದುದರಿಂದ ಮನುಷ್ಯನಿಗೆ ಒಂದೇ ಮಾರ್ಗ. ಕೊಲ್ಲದಿರುವ, ಶಿಷ್ಟಾಚಾರ-ಶಾಸ್ತ್ರದ ಮಾರ್ಗ.

ಕರ್ಮಪ್ರೇರಣೆಯಲ್ಲಿ ಜ್ಞಾನ, ಜ್ಞೇಯ, ಪರಿಜ್ಞಾತಗಳೆಂಬ ಮೂರು ತತ್ತ್ವ ಇವೆ. ಕರ್ಮದ ಅಂಗ ಮೂರು ಬಗೆ ಇಂದ್ರಿಯ, ಕ್ರಿಯೆ, ಕರ್ತೃ. || ೧೮ ||

ಟಿಪ್ಪಣಿ—ಇದರಲ್ಲಿ ವಿಚಾರ, ಆಚಾರದ ಸಮೀಕರಣವಿದೆ ಮೊದಲು ಮನುಷ್ಯ ಕರ್ತವ್ಯಕರ್ಮದ (ಜ್ಞೇಯ) ವಿಧಿ (ಜ್ಞಾನ) ತಿಳಿಯುತ್ತಾನೆ, ಪರಿಜ್ಞಾತನಾಗುತ್ತಾನೆ ಈ ಕರ್ಮಪ್ರೇರಣೆಯ ವಿಧಿಯನಂತರ ಅವನು ಇಂದ್ರಿಯ(ಕರಣ)ಗಳ ಮೂಲಕ ಕ್ರಿಯೆಯ ಕರ್ತನಾಗುತ್ತಾನೆ. ಇದು ಕರ್ಮಸಂಗ್ರಹ.

ಜ್ಞಾನ, ಕರ್ಮ, ಕರ್ತೃಗಳು ಗುಣಭೇದಾನುಸಾರವಾಗಿ ಮೂರು ಬಗೆ ಈ ಗುಣಗಣನೆಯಲ್ಲಿ ಯಾವ ಬಗೆಯ ವರ್ಣನೆ ಇದೆಯೋ ಕೇಳು. || ೧೯ ||

---

**ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ |**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ || ೧೮ ||**

**ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ |**
**ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ || ೧೯ ||**

ಯಾವುದರ ಮೂಲಕ ಮನುಷ್ಯ ಸಕಲ ಭೂತಗಳಲ್ಲಿಯೂ ಒಂದೇ ಅವಿನಾಶಿ ಭಾವವನ್ನೂ, ವಿವಿಧತೆಯಲ್ಲಿ ಏಕತ್ವವನ್ನೂ ನೋಡುತ್ತಾನೊ ಅದು ಸಾತ್ತ್ವಿಕಜ್ಞಾನ, ತಿಳಿ. || ೨೦ ||

ಭಿನ್ನಭಿನ್ನವಾಗಿ ಕಾಣುವುದರಿಂದ ಸಕಲ ಭೂತಗಳಲ್ಲಿ ಭಿನ್ನಭಿನ್ನ ವಿಭಕ್ತ ಭಾವವನ್ನು ಮನುಷ್ಯ ಯಾವುದರ ಮೂಲಕ ನೋಡುತ್ತಾನೋ ಆ ಜ್ಞಾನ ರಾಜಸ || ೨೧ ||

ಒಂದೇ ಕಾರ್ಯದಲ್ಲಿ ಇದೇ ಸರ್ವಸ್ವವೆಂಬ ಭಾವನೆ ನಿಷ್ಕಾರಣವಾಗಿ ಯಾವುದರ ಮೂಲಕ ಭಾಸವಾಗುತ್ತದೊ, ಯಾವುದು ರಹಸ್ಯರಹಿತವೋ, ತುಚ್ಛವೋ ಆ ಜ್ಞಾನ ತಾಮಸ || ೨೨ ||

ಫಲೇಚ್ಛೆಯಿಲ್ಲದ ಪುರುಷ ಆಸಕ್ತಿ, ರಾಗ–ದ್ವೇಷಗಳಿಲ್ಲದೆ ಮಾಡುವ ಕರ್ಮ ಸಾತ್ತ್ವಿಕ || ೨೩ ||

ಟಿಪ್ಪಣಿ—ಅ ೩, ಶ್ಲೋ ೮ರ ಟಿಪ್ಪಣಿ ನೋಡಿ.

ಭೋಗೇಚ್ಛೆಯುಳ್ಳವನು 'ನಾನು ಮಾಡುತ್ತೇನೆ' ಎಂಬ ಭಾವದಿಂದ ಪರಿಶ್ರಮಪೂರ್ವಕ ಕರ್ಮ ಮಾಡುವುದು ರಾಜಸ. || ೨೪ ||

---

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ |**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಂ || ೨೦ ||**

**ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ |**
**ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಂ || ೨೧ ||**

**ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಮ್ |**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ || ೨೨ ||**

**ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ |**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ || ೨೩ ||**

**ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ |**
**ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಂ || ೨೪ ||**

ಮನುಷ್ಯ ಯಾವ ಕೆಲಸವನ್ನು—ಅದರ ಪರಿಣಾಮ, ಹಾನಿ, ಹಿಂಸೆ, ತನ್ನ ಸಾಮರ್ಥ್ಯಗಳ ವಿಚಾರ ಮಾಡದೆ—ಮೋಹವಶನಾಗಿ ಪ್ರಾರಂಭಿಸುತ್ತಾನೋ ಅದು ತಾಮಸ || ೨೫ ||

ಆಸಕ್ತಿ-ಅಹಂಕಾರಗಳಿಲ್ಲದ, ದೃಢತೆ-ಉತ್ಸಾಹ ಉಳ್ಳ, ಸಫಲತೆ-ನಿಷ್ಫಲತೆಗಳಲ್ಲಿ ಹರ್ಷ-ಶೋಕಗಳನ್ನು ತಳೆಯದ ಮನುಷ್ಯ ಸಾತ್ತ್ವಿಕ ಕರ್ತ. || ೨೬ ||

ರಾಗಪೂರ್ಣ, ಕರ್ಮಫಲದ ಇಚ್ಛುಕ, ಲೋಭಿ, ಹಿಂಸಕ, ಅಶುದ್ಧ, ಹರ್ಷ-ಶೋಕಗಳನ್ನು ತಳೆವವನು ರಾಜಸ ಕರ್ತ || ೨೭ ||

ಅವ್ಯವಸ್ಥಿತ, ಅಸಂಸ್ಕಾರಿ, ಸೆಟೆಗಾರ, ಶಠ, ನೀಚ, ಸೋಮಾರಿ, ದೀರ್ಘಸೂತ್ರಿ, ಸಿಡಿಮಿಡಿಗುಟ್ಟುವವನು ತಾಮಸ ಕರ್ತ. || ೨೮ ||

ಧನಂಜಯ! ಗುಣಾನುಸಾರವಾದ ಬುದ್ಧಿಧೃತಿಗಳ ಮೂರು ಬಗೆಗಳನ್ನು ಪೂರ್ಣವಾಗಿಯೂ ಬೇರೆಬೇರೆಯಾಗಿ ಹೇಳುತ್ತೇನೆ, ಕೇಳು || ೨೯ ||

---

**ಅನುಬಂಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಮ್ ।**
**ಮೋಹದಾರಭ್ಯತೇ ಕರ್ಮ ಯತ್ತತ್ತಾಮಸಮುಚ್ಯತೇ || ೨೫ ||**

**ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ || ೨೬ ||**

**ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ || ೨೭ ||**

**ಅಯುಕ್ತಃ ಪ್ರಾಕೃತಸ್ಸ್ತಬ್ಧಃ ಶಠೋ ನೈಷ್ಕೃತಿಕೋಽಲಸಃ ।**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ || ೨೮ ||**

**ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು ।**
**ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ || ೨೯ ||**

ಪ್ರವೃತ್ತಿ–ನಿವೃತ್ತಿ, ಕಾರ್ಯ–ಅಕಾರ್ಯ, ಭಯ–ಅಭಯ, ಬಂಧನ–ಮೋಕ್ಷ ಗಳ ಭೇದವನ್ನು (ಸರಿಯಾಗಿ) ಅರಿಯುವ ಬುದ್ಧಿ ಸಾತ್ತ್ವಿಕ ಬುದ್ಧಿ || ೩೦ ||

ಧರ್ಮಾಧರ್ಮ, ಕಾರ್ಯ–ಅಕಾರ್ಯಗಳ ವಿವೇಕವನ್ನು ಅಯಥಾರ್ಥವಾಗಿ ಮಾಡುವ ಬುದ್ಧಿ ರಾಜಸ ಬುದ್ಧಿ. || ೩೧ ||

ಪಾರ್ಥ! ಅಂಧಕಾರ ಕವಿದ, ಅಧರ್ಮವನ್ನು ಧರ್ಮವೆಂದು ಭಾವಿಸುವ, ಎಲ್ಲವನ್ನು ತಿರುಗುಮುರುಗಾಗಿ ನೋಡುವ ಬುದ್ಧಿ ತಾಮಸ ಬುದ್ಧಿ || ೩೨ ||

ಪಾರ್ಥ, ಏಕನಿಷ್ಠ ಧೃತಿಯಿಂದ ಮನುಷ್ಯ ಮನಸ್ಸು, ಪ್ರಾಣ, ಇಂದ್ರಿಯಗಳ ಕ್ರಿಯೆಗಳನ್ನು ಸಾಮ್ಯಬುದ್ಧಿಯಿಂದ ನಡೆಸಿದರೆ ಆ ಧೃತಿ ಸಾತ್ತ್ವಿಕ. || ೩೩ ||

ಯಾವ ಧೃತಿಯ ಮೂಲಕ ಮನುಷ್ಯ ಫಲಾಕಾಂಕ್ಷಿಯಾಗಿ ಧರ್ಮ, ಕಾಮ, ಅರ್ಥಗಳನ್ನು ಆಸಕ್ತಿಯಿಂದ ಧಾರಣಮಾಡುತ್ತಾನೋ ಆ ಧೃತಿ ರಾಜಸ. || ೩೪ ||

---

**ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ |**
**ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಸ್ಸಾ ಪಾರ್ಥ ಸಾತ್ತ್ವಿಕೀ**
**|| ೩೦ ||**

**ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ |**
**ಅಯಥಾವತ್ಪ್ರಜಾನಾತಿ ಬುದ್ಧಿಸ್ಸಾ ಪಾರ್ಥ ರಾಜಸೀ || ೩೧ ||**

**ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾಽಽವೃತಾ |**
**ಸರ್ವಾರ್ಥಾನ್ ವಿಪರೀತಾಂಶ್ಚ ಬುದ್ಧಿಸ್ಸಾ ಪಾರ್ಥ ತಾಮಸೀ || ೩೨ ||**

**ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇಂದ್ರಿಯಕ್ರಿಯಾಃ |**
**ಯೋಗೇನಾವ್ಯಭಿಚಾರಿಣ್ಯಾ ಧೃತಿಸ್ಸಾ ಪಾರ್ಥ ಸಾತ್ತ್ವಿಕೀ || ೩೩ ||**

**ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ |**
**ಪ್ರಸಂಗೇನ ಫಲಾಕಾಂಕ್ಷೀ ಧೃತಿಸ್ಸಾ ಪಾರ್ಥ ರಾಜಸೀ || ೩೪ ||**

ಯಾವ ಧೃತಿಯ ಮೂಲಕ ದುರ್ಬುದ್ಧಿಯ ಮನುಷ್ಯ ನಿದ್ರೆ, ಭಯ, ಶೋಕ, ನಿರಾಶೆ, ಮದಗಳನ್ನು ಬಿಡಲಾರನೊ ಅದು ತಾಮಸ ಧೃತಿ || ೩೫ ||

ಈಗ ಮೂರು ಬಗೆಯ ಸುಖದ ವರ್ಣನೆಯನ್ನು ಕೇಳು. ಯಾವುದರ ಅಭ್ಯಾಸದಿಂದ ಮನುಷ್ಯ ಪ್ರಸನ್ನನಾಗಿರುತ್ತಾನೋ, ದುಃಖ ಅಂತವಾಗುತ್ತದೋ, ಯಾವುದು ಆರಂಭದಲ್ಲಿ ವಿಷದಂತೆ ತೋರಿದರೂ, ಪರಿಣಾಮದಲ್ಲಿ ಅಮೃತವಾಗುತ್ತದೋ, ಆತ್ಮಜ್ಞಾನದ ಪ್ರಸನ್ನತೆಯಲ್ಲಿ ಉತ್ಪನ್ನವಾಗುತ್ತದೋ ಆ ಸುಖ ಸಾತ್ತ್ವಿಕವೆಂದು ಹೇಳುತ್ತಾರೆ || ೩೬–೩೭ ||

ವಿಷಯ–ಇಂದ್ರಿಯಗಳ ಸಂಯೋಗದಿಂದ ಆರಂಭದಲ್ಲಿ ಅಮೃತದಂತೆ ತೋರಿದರೂ ಕೊನೆಯಲ್ಲಿ ವಿಷವಾಗುವ ಸುಖ ರಾಜಸ. || ೩೮ ||

ಆರಂಭದಲ್ಲಿಯೂ ಕೊನೆಯಲ್ಲಿಯೂ ಆತ್ಮವನ್ನು ಮೋಹಗೊಳಿಸುವುದು, ನಿದ್ರೆ, ಆಲಸ್ಯ, ಪ್ರಮಾದದಿಂದ ಹುಟ್ಟುವುದು ತಾಮಸ ಸುಖ ಪೃಥ್ವಿಯಲ್ಲಿ,

---

**ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ |**
**ನ ವಿಮುಂಚತಿ ದುರ್ಮೇಧಾ ಧೃತಿಸ್ಸಾ ಪಾರ್ಥ ತಾಮಸೀ || ೩೫ ||**

**ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ |**
**ಅಭ್ಯಾಸಾದ್ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ || ೩೬ ||**

**ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ |**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಂ || ೩೭ ||**

**ವಿಷಯೇಂದ್ರಿಯಸಂಯೋಗಾತ್ ಯತ್ತದಗ್ರೇಽಮೃತೋಪಮಮ್ |**
**ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ || ೩೮ ||**

**ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ |**
**ನಿದ್ರಾಽಽಲಸ್ಯ ಪ್ರಮಾದೋತ್ಥಂ ತತ್ತಾಮಸಮುದಾಹೃತಮ್ || ೩೯ ||**

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ |**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಸ್ಸ್ಯಾತ್ ತ್ರಿಭಿರ್ಗುಣೈಃ ||೪೦||**

ದೇವತೆಗಳ ನಡುವೆ, ಸ್ವರ್ಗದಲ್ಲಿ ಪ್ರಕೃತಿಯಿಂದ ಹುಟ್ಟಿದ ಈ ಮೂರು ಗುಣಗಳಿಂದ ಮುಕ್ತವಾದುದು ಯಾವುದೂ ಇಲ್ಲ. || ೩೯–೪೦ ||

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರ ಕರ್ಮಗಳೂ ಅವರವರ ಸ್ವಭಾವಜನ್ಯ ಗುಣಗಳಿಂದ ವಿಭಾಗವಾಗಿದೆ || ೪೧ ||

ಶಮ, ದಮ, ತಪಸ್ಸು, ಶೌಚ, ಕ್ಷಮೆ, ಸರಳತೆ, ಜ್ಞಾನ, ಅನುಭವ, ಆಸ್ತಿಕತೆ—ಬ್ರಾಹ್ಮಣನ ಸ್ವಭಾವಜನ್ಯ ಕರ್ಮ. || ೪೨ ||

ಶೌರ್ಯ, ತೇಜಸ್ಸು, ಧೃತಿ, ಯುದ್ಧದಲ್ಲಿ ಹಿಮ್ಮೆಟ್ಟದಿರುವುದು, ದಾನ, ಶಾಸನ—ಇವು ಕ್ಷತ್ರಿಯರ ಸ್ವಭಾವಜನ್ಯ ಕರ್ಮ. || ೪೩ ||

ಕೃಷಿ, ಗೋರಕ್ಷಣೆ, ವ್ಯಾಪಾರ—ಇವು ವೈಶ್ಯನ ಸ್ವಭಾವಜನ್ಯ ಕರ್ಮ ಶೂದ್ರನ ಸ್ವಭಾವಜನ್ಯ ಕರ್ಮ ಸೇವೆ. || ೪೪ ||

ತನ್ನ ತನ್ನ ಕರ್ಮದಲ್ಲಿ ರತನಾದ ಮನುಷ್ಯ ಮೋಕ್ಷಹೊಂದುತ್ತಾನೆ ತನ್ನ ಕರ್ಮದಲ್ಲಿ ನಿರತನಾದ ಮನುಷ್ಯ ಯಾವ ರೀತಿ ಮೋಕ್ಷಹೊಂದುತ್ತಾನೋ ಕೇಳು || ೪೫ ||

---

**ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ ।**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ || ೪೧ ||**

**ಶಮೋದಮಸ್ತಪಶ್ಶೌಚಂ ಶಾಂತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮಸ್ವಭಾವಜಮ್ || ೪೨ ||**

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮಸ್ವಭಾವಜಮ್ || ೪೩ ||**

**ಕೃಷಿಗೋರಕ್ಷ್ಯವಾಣಿಜ್ಯಂ ವೈಶ್ಯಕರ್ಮಸ್ವಭಾವಜಮ್ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಂ || ೪೪ ||**

**ಸ್ವೇ ಸ್ವೇ ಕರ್ಮಣ್ಯಭಿರತಸ್ಸಂಸಿದ್ಧಿಂ ಲಭತೇ ನರಃ ।**
**ಸ್ವಕರ್ಮನಿರತಸ್ಸಿದ್ಧಿಂ ಯಥಾ ವಿಂದತಿ ತಚ್ಛೃಣು || ೪೫ ||**

ಯಾರಿಂದ ಪ್ರಾಣಿಗಳ ಕೆಲಸ ನಡೆಯುತ್ತದೋ, ಯಾರಿಂದ ಎಲ್ಲವೂ ವ್ಯಾಪ್ತವೋ ಅವನನ್ನು ಸ್ವಕರ್ಮದಿಂದ ಪೂಜಿಸುವ ಪುರುಷ ಮೋಕ್ಷ ಪಡೆಯುತ್ತಾನೆ || ೪೬ ||

ಪರಧರ್ಮ ಸುಖಕರವಾದರೂ, ಸ್ವಧರ್ಮ ವಿಗುಣವಾದರೂ ಸ್ವಧರ್ಮವೇ ಅಧಿಕ ಶ್ರೇಯಸ್ಕರ ಸ್ವಭಾವಕ್ಕೆ ಅನುರೂಪವಾದ ಕರ್ಮ ಮಾಡುವವನಿಗೆ ಪಾಪ ಅಂಟದು || ೪೭ ||

ಟಿಪ್ಪಣಿ—ಸ್ವಧರ್ಮ ಎಂದರೆ ತನ್ನ ಕರ್ತವ್ಯ. ಗೀತೆಯ ಶಿಕ್ಷಣದ ಮಧ್ಯಬಿಂದು ಕರ್ಮಫಲತ್ಯಾಗ. ಸ್ವಧರ್ಮಕ್ಕಿಂತಲೂ ಮತ್ತೊಂದು ಉತ್ತಮ ಕರ್ತವ್ಯವನ್ನು ಹುಡುಕುವುದರಲ್ಲಿ ಫಲತ್ಯಾಗಕ್ಕೆ ಸ್ಥಾನವಿಲ್ಲ. ಈ ಕಾರಣದಿಂದ ಸ್ವಧರ್ಮವೇ ಶ್ರೇಷ್ಠವೆಂದು ಹೇಳಲಾಗಿದೆ ಎಲ್ಲ ಧರ್ಮಗಳ ಫಲವೂ ಅದರ ಪಾಲನೆಯಲ್ಲಿ ಅಡಕವಾಗಿದೆ.

ಸಹಜವಾಗಿ ಪ್ರಾಪ್ತವಾದ ಕರ್ಮ ಸದೋಷವಾದರೂ ಅದನ್ನು ಬಿಡಕೂಡದು. ಅಗ್ನಿಯೊಂದಿಗೆ ಹೊಗೆ ಇರುವಂತೆಯೇ ಸಕಲ ಕರ್ಮಗಳೊಂದಿಗೆ ದೋಷವೂ ಇರುತ್ತದೆ. || ೪೮ ||

ಯಾವುದರಲ್ಲೂ ಆಸಕ್ತಿಯಿಡದವನು, ಕಾಮನೆಗಳ ತ್ಯಾಗ ಮಾಡಿದವನು, ಮನಸ್ಸನ್ನು ಗೆದ್ದವನು ಸಂನ್ಯಾಸದ ಮೂಲಕ ನೈಷ್ಕರ್ಮ್ಯರೂಪ ಪರಮಸಿದ್ಧಿಯನ್ನು ಹೊಂದುತ್ತಾನೆ || ೪೯ ||

---

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ || ೪೬ ||**

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ || ೪೭ ||**

**ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।**
**ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ || ೪೮ ||**

**ಅಸಕ್ತಬುದ್ಧಿಸ್ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ || ೪೯ ||**

ಕೌಂತೇಯ! ಸಿದ್ಧಿಹೊಂದಿದನಂತರ ಮನುಷ್ಯ ಬ್ರಹ್ಮವನ್ನು ಯಾವ ರೀತಿ ಹೊಂದುತ್ತಾನೋ ಸಂಕ್ಷೇಪವಾಗಿ ಕೇಳು. ಅದುವೇ ಜ್ಞಾನದ ಪರಾಕಾಷ್ಠೆ || ೫೦ ||

ಶುದ್ಧಬುದ್ಧಿಯುಳ್ಳ ಯೋಗಿ ದೃಢತೆಯಿಂದ ತನ್ನನ್ನು ವಶದಲ್ಲಿಟ್ಟು ಕೊಂಡು, ಶಬ್ದಾದಿವಿಷಯಗಳ ತ್ಯಾಗಮಾಡಿ, ರಾಗದ್ವೇಷಗಳನ್ನು ಗೆದ್ದು, ಏಕಾಂತ ಸೇವನೆ ಮಾಡುತ್ತ, ಅಲ್ಪಾಹಾರಿಯಾಗಿ, ಮನಸ್ಸು, ವಚನ, ಕರ್ಮಗಳನ್ನು ಅಧೀನಪಡಿಸಿಕೊಂಡು, ಧ್ಯಾನಯೋಗದಲ್ಲಿ ನಿತ್ಯಪರಾಯಣ ನಾಗಿ, ವೈರಾಗ್ಯದ ಆಶ್ರಯ ಪಡೆದು, ಅಹಂಕಾರ, ಬಲ, ದರ್ಪ, ಕಾಮ, ಕ್ರೋಧ, ಪರಿಗ್ರಹಗಳ ತ್ಯಾಗಮಾಡಿ, ಮಮತಾಹೀನನಾಗಿ ಶಾಂತನಾಗಿ ಬ್ರಹ್ಮಭಾವವನ್ನು ಹೊಂದಲು ಯೋಗ್ಯನಾಗಿರುತ್ತಾನೆ || ೫೧–೫೩ ||

ಬ್ರಹ್ಮಭಾವ ಹೊಂದಿ ಪ್ರಸನ್ನಚಿತ್ತನಾದ ಮನುಷ್ಯ ಶೋಕಿಸನು, ಯಾವ ವಸ್ತುವನ್ನೂ ಅಪೇಕ್ಷಿಸನು ಭೂತಮಾತ್ರಗಳಲ್ಲಿ ಸಮಭಾವವಿಟ್ಟು ನನ್ನ ಪರಮ ಭಕ್ತಿಯನ್ನೈದಿ ಭಕ್ತಿಯ ಮೂಲಕ ನಾನು ಯಾರು, ಹೇಗಿದೇನೆ

---

**ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಽಽಪ್ನೋತಿ ನಿಬೋಧ ಮೇ |**
**ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ || ೫೦ ||**

**ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾಽತ್ಮಾನಂ ನಿಯಮ್ಯ ಚ |**
**ಶಬ್ದಾದೀನ್ ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ || ೫೧ ||**

**ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ |**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ || ೫೨ ||**

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ |**
**ವಿಮುಚ್ಯ ನಿರ್ಮಮಶ್ಶಾಂತೋ ಬ್ರಹ್ಮಭೂಯಾಯ ಕಲ್ಪತೇ || ೫೩ ||**

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ |**
**ಸಮಸ್ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಂ || ೫೪ ||**

ಎಂಬುದನ್ನು ಚೆನ್ನಾಗಿ ಅರಿಯುತ್ತಾನೆ ಈ ರೀತಿ ನನ್ನನ್ನು ಯಥಾರ್ಥವಾಗಿ ಅರಿತು ನನ್ನಲ್ಲಿ ಪ್ರವೇಶಿಸುತ್ತಾನೆ. || ೫೪–೫೫ ||

ನನ್ನ ಆಶ್ರಯ ಪಡೆದವನು ಸದಾ ಸರ್ವಕರ್ಮಗಳನ್ನು ಮಾಡುತ್ತಿದ್ದರೂ ನನ್ನ ಕೃಪೆಯಿಂದ ಶಾಶ್ವತ, ಅವ್ಯಯ ಆದ ಪದವನ್ನು ಹೊಂದುತ್ತಾನೆ || ೫೬ ||

ಮನಸ್ಸಿನಿಂದ ಸಕಲ ಕರ್ಮಗಳನ್ನು ನನಗೆ ಅರ್ಪಿಸಿ, ನನ್ನಲ್ಲಿ ಪರಾಯಣನಾಗಿ, ವಿವೇಕಬುದ್ಧಿಯ ಆಶ್ರಯದಿಂದ ನಿರಂತರವೂ ನನ್ನಲ್ಲಿ ಚಿತ್ತವನ್ನಿಡು || ೫೭ ||

ನನ್ನಲ್ಲಿ ಚಿತ್ತವಿಟ್ಟರೆ ಕಷ್ಟದ ಸಕಲ ದುರ್ಗಗಳನ್ನೂ ನನ್ನ ಕೃಪೆಯಿಂದ ದಾಟುತ್ತೀಯೆ ಆದರೆ ಅಹಂಕಾರವಶನಾಗಿ ನೀನು ನನ್ನ ಮಾತನ್ನು ಕೇಳದಿದ್ದರೆ ನಾಶವಾಗುತ್ತೀಯೆ. || ೫೮ ||

ಅಹಂಕಾರವಶನಾಗಿ 'ನಾನು ಯುದ್ಧಮಾಡೆ' ಎಂದು ನೀನು ತಿಳಿದರೆ, ನಿನ್ನದು ಮಿಥ್ಯಾ ಸಂಕಲ್ಪ ನಿನ್ನ ಸ್ವಭಾವವೇ ನಿನ್ನನ್ನು ಆ ಕಡೆಗೆ ಬಲವಾಗಿ ಎಳೆದೊಯ್ಯುತ್ತದೆ. || ೫೯ ||

---

**ಭಕ್ತ್ಯಾ ಮಾಮಭಿಜಾನತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ |**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಂ || ೫೫ ||**

**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ |**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ || ೫೬ ||**

**ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ |**
**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಸ್ಸತತಂ ಭವ || ೫೭ ||**

**ಮಚ್ಚಿತ್ತಸ್ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ |**
**ಅಥ ಚೇತ್ತ್ವಮಹಂಕಾರಾತ್ ನ ಶ್ರೋಷ್ಯಸಿ ವಿನಂಕ್ಷ್ಯಸಿ || ೫೮ ||**

**ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ |**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ || ೫೯ ||**

ಕೌಂತೇಯ! ಸ್ವಭಾವಜನ್ಯ ಕರ್ಮದಿಂದ ನೀನು ಬದ್ಧ, ಆದುದರಿಂದ ಮೋಹವಶನಾಗಿ ನೀನು ಮಾಡಲು ಅಪೇಕ್ಷಿಸದುದನ್ನು, ವಿವಶನಾಗಿ ಮಾಡಿಯೇ ಮಾಡುತ್ತೀಯೆ || ೬೦ ||

ಅರ್ಜುನ! ಸಕಲ ಪ್ರಾಣಿಗಳ ಹೃದಯದಲ್ಲಿ ವಾಸಿಸುತ್ತ ಈಶ್ವರ, ತನ್ನ ಮಾಯೆಯ ಬಲದಿಂದ, ಚಕ್ರಕ್ಕೇರಿಸಿದ ಘಟದಂತೆ ಅವನ್ನು ತಿರುಗಿಸುತ್ತಾನೆ. || ೬೧ ||

ಭಾರತ! ಎಲ್ಲ ಬಗೆಯಿಂದಲೂ ನೀನು ಅವನಿಗೆ ಶರಣಾಗತನಾಗು ಅವನ ಕೃಪೆಯಿಂದ ಪರಮ ಶಾಂತಿಮಯ, ಅಮರ ಪದವನ್ನು ಹೊಂದುತ್ತೀಯೆ. || ೬೨ ||

ಗುಹ್ಯಕ್ಕಿಂತ ಗುಹ್ಯವಾದ ಈ ಜ್ಞಾನವನ್ನು ನಾನು ನಿನಗೆ ಹೇಳಿದೆ. ಅದನ್ನೆಲ್ಲ ಚೆನ್ನಾಗಿ ವಿಚಾರಮಾಡಿ ನಿನಗೆ ಹಿತವೆನಿಸಿದುದನ್ನು ಮಾಡು || ೬೩ ||

---

**ಸ್ವಭಾವಜೇನ ಕೌಂತೇಯ ನಿಬದ್ಧಸ್ಸ್ವೇನ ಕರ್ಮಣಾ |**
**ಕರ್ತುಂ ನೇಚ್ಛಸಿ ಯನ್ಮೋಹಾತ್ ಕರಿಷ್ಯಸ್ಯವಶೋಽಪಿ ತತ್ || ೬೦ ||**

**ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ |**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ || ೬೧ ||**

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ |**
**ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ || ೬೨ ||**

**ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ |**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು || ೬೩ ||**

ಎಲ್ಲಕ್ಕಿಂತಲೂ ಗುಹ್ಯವಾದ ನನ್ನ ಪರಮವಚನವನ್ನು ಕೇಳು ನೀನು ನನಗೆ ಬಹು ಪ್ರಿಯ ಆದುದರಿಂದ ನಾನು ನಿನ್ನ ಹಿತಕ್ಕಾಗಿ ಈ ಮಾತನ್ನು ಹೇಳುತ್ತೇನೆ. || ೬೪ ||

ನನ್ನಲ್ಲಿಯೇ ಮನಸ್ಸಿಡು. ನನ್ನ ಭಕ್ತನಾಗು, ನನಗಾಗಿ ಯಜ್ಞಮಾಡು, ನನಗೆ ನಮಸ್ಕರಿಸು ನನ್ನನ್ನೆ ಹೊಂದುತ್ತೀ ಇದು ನನ್ನ ಸತ್ಯಪ್ರತಿಜ್ಞೆ. || ೬೫ ||

ಸಕಲ ಧರ್ಮಗಳನ್ನೂ ತ್ಯಜಿಸಿ ನನಗೊಬ್ಬನಿಗೇ ಶರಣಾಗತನಾಗು, ಸಕಲ ಪಾಪಗಳಿಂದ ನಿನ್ನನ್ನು ನಾನು ಬಿಡುಗಡೆ ಮಾಡುತ್ತೇನೆ, ಶೋಕಿಸ ಬೇಡ. || ೬೬ ||

ತಪಸ್ವಿಯಲ್ಲದವನಿಗೆ, ಭಕ್ತನಲ್ಲದವನಿಗೆ, ಕೇಳಲಪೇಕ್ಷಿಸದವನಿಗೆ, ನನ್ನನ್ನು ದ್ವೇಷಿಸುವವನಿಗೆ ನೀನು (ಜ್ಞಾನವನ್ನು) ಎಂದಿಗೂ ಹೇಳಬೇಡ || ೬೭ ||

---

**ಸರ್ವಗುಹ್ಯತಮಂ ಭೂಯಶ್ಶೃಣು ಮೇ ಪರಮಂ ವಚಃ |**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ || ೬೪ ||**

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು |**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ || ೬೫ ||**

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ |**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ || ೬೬ ||**

**ಇದಂ ತೇ ನಾತಪಸ್ಕಾಯ ನಾ ಭಕ್ತಾಯ ಕದಾಚನ |**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ || ೬೭ ||**

ಆದರೆ ಯಾರು ಈ ಪರಮ ಗುಹ್ಯ ಜ್ಞಾನವನ್ನು ನನ್ನ ಭಕ್ತರಿಗೀಯುವನೋ, ನನ್ನಲ್ಲಿ ಪರಮ ಭಕ್ತಿಯುಳ್ಳವನಾಗಿ ನಿಸ್ಸಂದೇಹವಾಗಿ ನನ್ನನ್ನೇ ಹೊಂದುತ್ತಾನೆ. || ೬೮ ||

ಮನುಷ್ಯರಲ್ಲಿ ಅವನಿಗಿಂತಲೂ ನನಗೆ ಹೆಚ್ಚು ಪ್ರಿಯ ಸೇವಕರು ಯಾರೂ ಇಲ್ಲ. ಈ ಪೃಥ್ವಿಯಲ್ಲಿ ನನಗೆ ಅವನಿಗಿಂತಲೂ ಹೆಚ್ಚು ಪ್ರಿಯನಾಗಬಲ್ಲವನೂ ಯಾರೂ ಇಲ್ಲ || ೬೯ ||

ನಮ್ಮಿಬ್ಬರ ಈ ಧರ್ಮ್ಯಸಂವಾದವನ್ನು ಅಭ್ಯಾಸಮಾಡುವವನು ಯಜ್ಞದ ಮೂಲಕ ನನ್ನನ್ನು ಭಜಿಸುತ್ತಾನೆ || ೭೦ ||

ದ್ವೇಷರಹಿತನಾಗಿ ಶ್ರದ್ಧೆಯಿಂದ ಇದನ್ನು ಕೇಳುವವನು ಕೂಡ ಮುಕ್ತನಾಗಿ ಪುಣ್ಯಶಾಲಿಗಳ ಶುಭಲೋಕಗಳನ್ನು ಹೊಂದುತ್ತಾನೆ. || ೭೧ ||

ಟಿಪ್ಪಣಿ—ಈ ಜ್ಞಾನದ ಅನುಭವ ಪಡೆದವನೇ ಅದನ್ನು ಬೇರೆಯವರಿಗೆ ಕೊಡಬಲ್ಲ ಎಂಬುದೆ ಇದರ ತಾತ್ಪರ್ಯ ಶುದ್ಧ ಉಚ್ಚಾರಣೆ ಮಾಡಿ ಅರ್ಥಸಹಿತ ಪಠನಮಾಡಿ ಹೇಳುವವನಿಗೆಂದು ಈ ಎರಡು ಶ್ಲೋಕಗಳನ್ನು ಹೇಳಿಲ್ಲ

---

ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।
ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ || ೬೮ ||

ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।
ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ || ೬೯ ||

ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।
ಜ್ಞಾನಯಜ್ಞೇನ ತೇ ನಾಹಮಿಷ್ಟಸ್ಸ್ಯಾಮಿತಿ ಮೇ ಮತಿಃ || ೭೦ ||

ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।
ಸೋಽಪಿ ಮುಕ್ತಶ್ಶುಭಾನ್ ಲೋಕಾನ್ ಪ್ರಾಪ್ನುಯಾತ್ಪುಣ್ಯ-
ಕರ್ಮಣಾಮ್ || ೭೧ ||

ಪಾರ್ಥ! ಇದನ್ನು ನೀನು ಏಕಾಗ್ರಚಿತ್ತದಿಂದ ಕೇಳಿದೆಯಷ್ಟೆ? ಅಜ್ಞಾನದಿಂದ ನಿನ್ನಲ್ಲಿ ಉಂಟಾಗಿದ್ದ ಮೋಹ ನಷ್ಟವಾಯಿತೆ? || ೭೨ ||

**ಅರ್ಜುನ :**

ಅಚ್ಯುತ! ನಿನ್ನ ಕೃಪೆಯಿಂದ ನನ್ನ ಮೋಹ ಕಳೆಯಿತು ನನಗೆ ಅರಿವು ಬಂದಿದೆ ಶಂಕೆ ಸಮಾಧಾನವಾಯಿತು ನಾನು ಈಗ ಸ್ವಸ್ಥಚಿತ್ತ ನೀನು ಹೇಳಿದಂತೆ ನಡೆಯುತ್ತೇನೆ. || ೭೩ ||

**ಸಂಜಯ :**

ಈ ಬಗೆಯಾಗಿ ವಾಸುದೇವನ-ಮಹಾತ್ಮನಾದ ಪಾರ್ಥನ ರೋಮಾಂಚಕಾರಿ ಸಂವಾದವನ್ನು ನಾನು ಕೇಳಿದೆ. || ೭೪ ||

ವ್ಯಾಸನ ಕೃಪೆಯಿಂದ, ಯೋಗೇಶ್ವರ ಕೃಷ್ಣನ ಶ್ರೀಮುಖದಿಂದ ಗುಹ್ಯವಾದ ಈ ಪರಮಯೋಗವನ್ನು ಕೇಳಿದೆ || ೭೫ ||

---

**ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ।**
**ಕಚ್ಚಿದಜ್ಞಾನಸಮ್ಮೋಹಃ ಪ್ರಣಷ್ಟಸ್ತೇ ಧನಂಜಯ || ೭೨ ||**

**ಅರ್ಜುನ ಉವಾಚ**

**ನಷ್ಟೋ ಮೋಹಸ್ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಽಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ || ೭೩ ||**

**ಸಂಜಯ ಉವಾಚ**

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಂ || ೭೪ ||**

**ವ್ಯಾಸಪ್ರಸಾದಾಚ್ಛ್ರುತವಾನಿಮಂ ಗುಹ್ಯತಮಂ ಪರಮ್ ।**
**ಯೋಗಂ ಯೋಗೇಶ್ವರಾತ್ಕೃಷ್ಣಾತ್ ಸಾಕ್ಷಾತ್ಕಥಯತಸ್ಸ್ವಯಂ||೭೫||**

ರಾಜ! ಕೇಶವಾರ್ಜುನರ ಈ ಪವಿತ್ರ ಸಂವಾದವನ್ನು ನೆನೆ ನೆನೆದು ಬಾರಿಬಾರಿಗೂ ನಾನು ಹರ್ಷಗೊಳ್ಳುತ್ತಿದೇನೆ || ೭೬ ||

ರಾಜ! ಹರಿಯ ಆ ಅದ್ಭುತ ರೂಪವನ್ನು ಪುನಃಪುನಃ ಸ್ಮರಿಸಿ ನನಗೆ ವಿಸ್ಮಯವಾಗುತ್ತಿದೆ ಬಾರಿಬಾರಿಗೂ ಪುಲಕಿತನಾಗುತ್ತಿದೇನೆ || ೭೭ ||

ಎಲ್ಲಿ ಯೋಗೇಶ್ವರ ಕೃಷ್ಣನೋ, ಎಲ್ಲಿ ಧನುರ್ಧಾರಿ ಪಾರ್ಥನೋ, ಅಲ್ಲಿ ಶ್ರೀ, ವಿಜಯ, ವೈಭವ ಇದ್ದೇ ಇರುತ್ತವೆ, ಅವಿಚಲ ನೀತಿಯಿರುತ್ತದೆ ಎಂದು ನನ್ನ ಅಭಿಪ್ರಾಯ. || ೭೮ ||

ಟಿಪ್ಪಣಿ—ಯೋಗೇಶ್ವರ ಕೃಷ್ಣ ಎಂದರೆ ಅನುಭವಸಿದ್ಧ ಶುದ್ಧಜ್ಞಾನ, ಧನುರ್ಧಾರಿ ಅರ್ಜುನ ಎಂದರೆ ತದನುಸಾರವಾದ ಕ್ರಿಯೆ—ಇವೆರಡರ ಸಂಗಮವಾದಲ್ಲಿ ಸಂಜಯ ಹೇಳಿದುದಲ್ಲದೆ ಮತ್ತಾವ ಪರಿಣಾಮವಾದೀತು ?

---

**ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ ।**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ**
**|| ೭೬ ||**

**ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ ।**
**ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ ಚ ಪುನಃಪುನಃ**
**|| ೭೭ ||**

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾನೀತಿರ್ಮತಿರ್ಮಮ || ೭೮ ||**

ಓಂ ತತ್ಸತ್

ಈ ಬಗೆಯಾಗಿ ಶ್ರೀಮದ್ಭಗವದ್ಗೀತಾರೂಪ ಉಪನಿಷತ್ ಅಥವಾ
ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರದ ಶ್ರೀಕೃಷ್ಣಾರ್ಜುನಸಂವಾದದಲ್ಲಿ
ಸಂನ್ಯಾಸಯೋಗವೆಂಬ ಹದಿನೆಂಟನೆಯ ಅಧ್ಯಾಯ

॥ ಶ್ರೀಮದ್ಭಗವದ್ಗೀತೆ ಸಂಪೂರ್ಣವು ॥

---

**ಹರಿಃ ಓಂ ತತ್ಸತ್**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಮೋಕ್ಷಯೊಗೋ ನಾಮ ಅಷ್ಟಾದಶೋಽಧ್ಯಾಯಃ ॥**

**॥ ಶ್ರೀಮದ್ಭಗವದ್ಗೀತಾ ಸಂಪೂರ್ಣಂ ॥**

ನನಗೆ ಏನೇ ಸಂಕಟ ಬರಲಿ, ಗೀತಾಮಾತೆಯನ್ನು ಶರಣುಹೋಗು ತ್ತೇನೆ ಇಂದಿನವರೆಗೂ ಆಕೆ ನನಗೆ ಸಮಾಧಾನ ಕೊಡದೆ ಬಿಟ್ಟಿಲ್ಲ. ಗೀತೆ ಯಿಂದ ಇನ್ನೂ ಅನೇಕರು ಸಮಾಧಾನ ಪಡೆಯುತ್ತಿರಬಹುದು ಗೀತೆಯನ್ನು ದಿನೇ ದಿನೇ ನಾನು ಹೇಗೆ ಅರಿತುಕೊಳ್ಳುತ್ತಿದೇನೆಯೋ ಅವರಿಗೆ ತಿಳಿದರೆ, ಅದರಿಂದ ಅವರಿಗೆ ಮತ್ತಷ್ಟು ಸಹಾಯ ದೊರೆತೀತು, ಏನಾದರೂ ಹೊಸತು ಕಂಡೀತು

ಇವತ್ತು ಹನ್ನೆರಡನೆ ಅಧ್ಯಾಯದ ಸಾರವನ್ನು ಕೊಡುವ ಮನಸ್ಸಾಗಿದೆ. ಭಕ್ತಿಯ ಮೂಲಕ ದೇವರನ್ನು ಪಡೆಯುವ 'ಭಕ್ತಿಯೋಗ' ಅದು. ಮದುವೆ ಯಲ್ಲಿ ಮಾಡಬೇಕಾದ ಪಂಚಯಜ್ಞಗಳಲ್ಲಿ ಒಂದಾಗಿ ಈ ಅಧ್ಯಾಯವನ್ನು ಬಾಯಿಪಾಠ ಮಾಡಿ ಅದನ್ನು ಚಿಂತನ ಮಾಡಿ ಎಂದು ವಧೂವರರಿಗೆ ಹೇಳು ತ್ತೇವೆ ಭಕ್ತಿಯಿಲ್ಲದಿದ್ದರೆ ಕರ್ಮ–ಜ್ಞಾನ ಎರಡೂ ನೀರಸ, ಸತ್ತ್ವಹೀನ, ಒಮ್ಮೊಮ್ಮೆ ಬಂಧನವೂ ಆದೀತು ಆದುದರಿಂದ ಎದೆಯಲ್ಲಿ ಭಕ್ತಿ ತುಂಬಿ ಕೊಂಡು ಗೀತೆಯ ಚಿಂತನ ಮಾಡೋಣ.

ಅರ್ಜುನ ಭಗವಂತನನ್ನು ಕೇಳುತ್ತಾನೆ 'ವ್ಯಕ್ತದ ಉಪಾಸನೆ ಮಾಡು ವವನೋ ಅವ್ಯಕ್ತದ ಉಪಾಸನೆ ಮಾಡುವವನೋ, ಇಬ್ಬರಲ್ಲಿ ಯಾರು ಹೆಚ್ಚು ?' ಭಗವಂತನ ಉತ್ತರ 'ಯಾರು ನನ್ನಲ್ಲಿ ಮನಸ್ಸನ್ನು ನೆಲೆಗೊಳಿಸಿ ಶ್ರದ್ಧಾ ಪೂರ್ವಕ ನನ್ನ ಉಪಾಸನೆ ಮಾಡುತ್ತಾರೋ ಅವರು ನನ್ನ ಭಕ್ತರು ಸಕಲ ಇಂದ್ರಿಯಗಳನ್ನೂ ವಶದಲ್ಲಿಟ್ಟುಕೊಂಡು ಸರ್ವತ್ರ ಸಮಬುದ್ಧಿಯುಳ್ಳವರಾಗಿ ದೃಢ, ಅಚಲ, ಧ್ರುವ, ಅಚಿಂತ್ಯ, ಅವ್ಯಕ್ತಸ್ವರೂಪವನ್ನು ಉಪಾಸನೆ ಮಾಡು ವವರೂ ನನ್ನನ್ನು ಪಡೆಯುತ್ತಾರೆ'

ಅಂತೂ ಒಬ್ಬರಿಗಿಂತ ಇನ್ನೊಬ್ಬರು ಹೆಚ್ಚು ಎನ್ನುವಂತಿಲ್ಲ. ಆದರೆ ದೇಹಧಾರಿಯಾದ ಜೀವಕ್ಕೆ ಅವ್ಯಕ್ತವನ್ನು ಪೂರ್ಣವಾಗಿ ಅರಿತು ಉಪಾಸನೆ ಮಾಡುವುದು ಅಸಾಧ್ಯವೇ ಎನ್ನಬಹುದು. ಅವ್ಯಕ್ತ ಅಥವಾ ನಿರಾಕಾರ ವಾದುದು ನಿರ್ಗುಣ, ಮನುಷ್ಯನಿಗೆ ಅಗಮ್ಯ–ಅಗ್ರಾಹ್ಯ ಆದುದರಿಂದ ದೇಹ ಧಾರಿಗಳೆಲ್ಲರೂ ಅರಿತೋ ಅರಿಯದೆಯೋ ಸಾಕಾರ ಭಕ್ತರೇ

'ಆದುದರಿಂದ ನನ್ನ ಮೂರ್ತಸ್ವರೂಪದಲ್ಲಿ ನಿನ್ನ ಮನಸ್ಸನ್ನು ನೆಲೆ ಗೊಳಿಸು ನಿನ್ನ ಸರ್ವಸ್ವವನ್ನೂ ಅವನ ಅಡಿಗಳಿಗೆ ಅರ್ಪಿಸು. ಇದನ್ನೂ

ಮಾಡಲಾಗದಿದ್ದರೆ ಮನಸ್ಸಿನ ವಿಕಾರಗಳನ್ನು ನಿಗ್ರಹಿಸುವ ಅಭ್ಯಾಸಯೋಗ ವನ್ನು ಸಾಧಿಸು. ಯಮನಿಯಮಗಳನ್ನು ಪಾಲಿಸು, ಪ್ರಾಣಾಯಾಮ ಮಾಡು, ಆಸನಾದಿಗಳನ್ನು ಅಭ್ಯಾಸ ಮಾಡು, ಹೀಗೆ ಮನಸ್ಸನ್ನು ವಶ ಪಡಿಸಿಕೊ ಇಂಥ ಅಭ್ಯಾಸ ನಿನಗೆ ಸಾಧ್ಯವಲ್ಲದಿದ್ದರೆ, ಏನೇ ಕೆಲಸ ಮಾಡಲಿ ನನಗಾಗಿ ಮಾಡುತ್ತೇನೆ ಎಂದು ಭಾವಿಸಿ ಮಾಡು. ಹೀಗೆ ಮಾಡುಮಾಡುತ್ತ ನಿನ್ನ ಮೋಹ–ಆಸಕ್ತಿ ಬಾಡಿಹೋಗುತ್ತವೆ, ಕ್ರಮೇಣ ನೀನು ಪರಿಶುದ್ಧನೂ ಅಕಳಂಕನೂ ಆಗುತ್ತೀಯೆ. ನಿನ್ನೊಳಗೆ ಪ್ರೇಮದ ಚಿಲುಮೆ ಚಿಮ್ಮುತ್ತದೆ. ಇದನ್ನು ಮಾಡಲಿಕ್ಕೂ ನಿನಗೆ ಸಾಧ್ಯವಿಲ್ಲದಿದ್ದರೆ ನಿನ್ನ ಸರ್ವಕರ್ಮಗಳ ಫಲ ವನ್ನು ತ್ಯಜಿಸು ನಿನ್ನ ಕರ್ಮಗಳ ಫಲಕ್ಕಾಗಿ ಇನ್ನು ಹಂಬಲಿಸಬೇಡ ಪಾಲಿಗೆ ಬಂದ ಕೆಲಸವನ್ನು ಮಾಡುತ್ತಿರು ಮನುಷ್ಯ ಕರ್ಮಫಲಕ್ಕೆ ಒಡೆಯನಲ್ಲ. ಕರ್ಮದ ಫಲ ಸಿಗಬೇಕಾದರೆ ಅದಕ್ಕೆ ಬೇಕಾದ ಕಾರಣಗಳೆಲ್ಲ ಕೂಡಿಬರಬೇಕು. ಆದುದರಿಂದ ನೀನು ಕೇವಲ ನಿಮಿತ್ತಮಾತ್ರನಾಗು ಈಗ ನಾನು ಹೇಳಿದ ಈ ನಾಲ್ಕು ದಾರಿಗಳಲ್ಲಿ ಒಂದು ಹೆಚ್ಚು ಒಂದು ಕಡಮೆ ಎಂದು ತಿಳಿಯಬೇಡ. ಅದರಲ್ಲಿ ನಿನಗೆ ಯಾವುದು ಒಗ್ಗುತ್ತದೆಯೋ ಅದನ್ನು ಹಿಡಿ ನಿನ್ನ ಭಕ್ತಿಯ ಸಾಧನೆಗೆ

'ಯಮನಿಯಮ ಪ್ರಾಣಾಯಾಮ ಆಸನಗಳ ದಾರಿಗಿಂತ ಶ್ರವಣ, ಧ್ಯಾನ, ಜ್ಞಾನಗಳ ದಾರಿ ಸುಲಭ ಎಂದು ಕಾಣುತ್ತದೆ. ಧ್ಯಾನ–ಉಪಾಸನೆ ಗಳು ಅದಕ್ಕಿಂತ ಸುಲಭವಾದೀತು ಧ್ಯಾನಕ್ಕಿಂತಲೂ ಕರ್ಮಫಲತ್ಯಾಗವೆ ಸುಲಭವಾದೀತು ಒಂದೇ ದಾರಿ ಎಲ್ಲರಿಗೂ ಅಷ್ಟೇ ಸುಲಭವಾಗಲಾರದು ಕೆಲವರು ಎಲ್ಲವನ್ನೂ ಆಶ್ರಯಿಸಬೇಕಾದೀತು ಇವು ಹಾಗೆ ಒಂದರಲ್ಲೊಂದು ಬೆರೆತುಕೊಂಡಿವೆ. ಏನೇ ಇರಲಿ, ನೀನು ಭಕ್ತನಾಗಬೇಕೆನ್ನುತ್ತೀ. ನಿನಗೆ ಸಾಧ್ಯವಾದ ದಾರಿ ಹಿಡಿದು ಗುರಿ ಮುಟ್ಟು ಯಾರು ನಿಜವಾದ ಭಕ್ತ ಎಂದು ನಿನಗೆ ಹೇಳುವುದಷ್ಟೇ ನನ್ನ ಕೆಲಸ ಭಕ್ತ ಯಾರನ್ನೂ ದ್ವೇಷಮಾಡ, ಯಾರ ಮೇಲೂ ಅವನಿಗೆ ಹಗೆಯಿಲ್ಲ, ಅವನು ಎಲ್ಲಾ ಪ್ರಾಣಿಗಳಿಗೂ ಗೆಳೆಯ, ಎಲ್ಲರಲ್ಲೂ ಅವನಿಗೆ ಕರುಣೆಯೆ. ಇದನ್ನು ಸಾಧಿಸಲು ಅವನು ಎಲ್ಲ ಆಸಕ್ತಿ ಯನ್ನೂ ತೊರೆಯುತ್ತಾನೆ, ಅವನ ವ್ಯಕ್ತಿತ್ವ ಕರಗಿಹೋಗುತ್ತದೆ, ಶೂನ್ಯ ನಾಗುತ್ತಾನೆ ಅವನಿಗೆ ಸುಖ–ದುಃಖ ಸಮಾನ ತಾನು ಮಾಡಿದ ತಪ್ಪನ್ನು

ಲೋಕ ಕ್ಷಮಿಸಲಿ ಎಂದು ಹಂಬಲಿಸುವಂತೆ ತನಗೆ ಇತರರು ಮಾಡಿದ ತಪ್ಪನ್ನು ತಾನು ಕ್ಷಮಿಸುತ್ತಾನೆ  ಸದಾ ತೃಪ್ತ, ದೃಢಸಂಕಲ್ಪವುಳ್ಳವನು, ತನ್ನ ಬುದ್ಧಿ, ಮನಸ್ಸು, ಎಲ್ಲವನ್ನೂ ನನಗೆ ಸಮರ್ಪಿಸುತ್ತಾನೆ  ಯಾವ ಪ್ರಾಣಿಯನ್ನೂ ತಾನು ಭಯಪಡಿಸ, ತಾನು ಯಾವುದಕ್ಕೂ ಭಯಪಡ  ನನ್ನ ಭಕ್ತನಿಗೆ ಸುಖ–ದುಃಖ, ಹರ್ಷ–ಶೋಕಗಳಿಲ್ಲ, ಅವನು ಅಲಿಪ್ತ.  ಶುಭಫಲ ಅಶುಭ ಫಲ ಎರಡನ್ನೂ ತ್ಯಾಗಮಾಡಿ ದೃಢವ್ರತನಾಗಿ ಉದಾಸೀನನಾಗಿರುತ್ತಾನೆ  ಅವನಿಗೆ ಶತ್ರುಗಳೂ ಇಲ್ಲ ಮಿತ್ರರೂ ಇಲ್ಲ, ಎಲ್ಲರೂ ಸಮ  ಮಾನ–ಅವಮಾನ ಅವನನ್ನು ಮುಟ್ಟಲಾರವು

' ಸಿಕ್ಕಿದ್ದರಲ್ಲಿಯೆ ಸಂತುಷ್ಟನಾಗಿ ಮೌನ–ಶಾಂತಿಗಳಲ್ಲಿ ನೆಲೆಸಿ, ಕೇವಲ ಆಂತರಿಕ ಜೀವನದಲ್ಲೆ ಮುಳುಗಿದ ಆ ಭಕ್ತ ಹೊರಗಡೆ ಏನಾದರೂ ನಡೆಯುತ್ತಿರಲಿ ತಾನು ಸ್ಥಿರಚಿತ್ತನೂ ಶಾಂತನೂ ಆಗಿರುತ್ತಾನೆ  ಈ ರೀತಿ ಶ್ರದ್ಧೆಯಿಂದ ನನ್ನ ಸೇವೆ ಮಾಡುವವನು ನನ್ನ ' ಅತ್ಯಂತ ಪ್ರಿಯಭಕ್ತ '. '*

೨

ಗೀತೆ ಮಹಾಭಾರತದಲ್ಲಿ ಒಂದು ಚಿಕ್ಕ ಭಾಗ  ಮಹಾಭಾರತವನ್ನು ಇತಿಹಾಸ ಎನ್ನುತ್ತಾರೆ  ಆದರೆ ನಮಗೆ ರಾಮಾಯಣ, ಮಹಾಭಾರತ ಎರಡೂ ಇತಿಹಾಸಗಳಲ್ಲ, ಧರ್ಮಗ್ರಂಥಗಳು  ಇತಿಹಾಸ ಎನ್ನುವುದೇ ಆದರೆ ಅವು ಆತ್ಮದ ಇತಿಹಾಸ  ಸಾವಿರಾರು ವರ್ಷಗಳ ಕೆಳಗೆ ಏನು ನಡೆಯಿತು ಎಂಬ ಚಿತ್ರವಲ್ಲ ಅದು, ಇವತ್ತು ಪ್ರತಿಯೊಂದು ಮಾನವಹೃದಯದಲ್ಲೂ ಏನು ನಡೆಯುತ್ತಿದೆಯೋ ಅದರ ಚಿತ್ರ  ರಾಮಾಯಣ, ಮಹಾಭಾರತ ಎರಡರಲ್ಲೂ ದೇವಾಸುರರ ಕದನದ, ರಾಮ–ರಾವಣರ ಯುದ್ಧದ ಚಿತ್ರ ಇದೆ  ಗೀತೆಯಲ್ಲಿದು ಕೃಷ್ಣಾರ್ಜುನಸಂವಾದವೂ ಅಂಥದೊಂದು ಚಿತ್ರ  ಆ ಸಂವಾದವನ್ನು ಕುರುಡ ಧೃತರಾಷ್ಟ್ರನಿಗೆ ಸಂಜಯ ಹೇಳುತ್ತಾನೆ  ಗೀತೆ ಎಂದರೆ ಹಾಡಿದುದು  ಇಲ್ಲಿ ಉಪನಿಷತ್ತು ಎಂಬುದು ಅಧ್ಯಾಹಾರ  ಗೀತೆಯ ಪೂರ್ಣ ಅರ್ಥ ' ಹಾಡಿದ ಉಪನಿಷತ್ತು ' ಎಂದು  ಉಪನಿಷತ್ತು ಎಂದರೆ ಜ್ಞಾನ  ಗೀತೆ ಶ್ರೀಕೃಷ್ಣ

* ೧೩–೧೧–೧೯೩೦, ಯಂಗ್ ಇಂಡಿಯಾ

ಅರ್ಜುನನಿಗೆ ಮಾಡಿದ ಉಪದೇಶ ಅಂತರ್ಯಾಮಿಯಾದ ಶ್ರೀಕೃಷ್ಣ ಸದಾ ನಮ್ಮ ಎದೆಯೊಳಗೇ ಇದಾನೆ, ಅರ್ಜುನನಂತೆ ನಾವು ಜ್ಞಾನಪಿಪಾಸುಗಳಾದರೆ ನಾವೂ ಅವನನ್ನು ಮೊರೆಹೊಗಬೇಕು ಗೀತೆಯನ್ನು ಓದುವಾಗ ಹೀಗೆ ಅನುಭವವಾಗಬೇಕು ಭಗವಂತ ನಮಗೆ ಆಶ್ರಯ-ನೀಡಲು ಸರ್ವದಾ ಸಿದ್ಧ. ನಮ್ಮಲ್ಲಿ ಜ್ಞಾನದ ಆಸೆ ಹುಟ್ಟೀತೆ ಎಂದು ಅವನು ಕಾದಿದಾನೆ ಹೇಗೆ ಕೇಳಬೇಕೋ ನಮಗೆ ಗೊತ್ತಿಲ್ಲ ಕೇಳಲು ಕೂಡ ನಮಗೆ ಮನಸ್ಸಿಲ್ಲ ಆದುದರಿಂದ ದಿನವೂ ಗೀತೆಯಂಥ ಪುಸ್ತಕವನ್ನು ಧ್ಯಾನಿಸುತ್ತೇವೆ. ಅದರ ಧ್ಯಾನ ಮಾಡುತ್ತ ನಮ್ಮೊಳಗೆ ಧರ್ಮಜ್ಞಾನದ ಬಯಕೆ ಮೂಡಲಿ, ಆಧ್ಯಾತ್ಮಿಕ ಜಿಜ್ಞಾಸೆ ಹುಟ್ಟಲಿ ಎಂದು ಬಯಸುತ್ತೇವೆ. ಏನಾದರೂ ಕ್ಲಿಷ್ಟತೆ ಬಂದಾಗ ಗೀತೆಯ ಬಳಿಗೆ ಓಡಿ ಸಮಾಧಾನ ಪಡೆಯುತ್ತೇವೆ ಗೀತೆ ನಮಗೆ ಗುರು-ತಾಯಿ—ಎರಡೂ. ಆಕೆಯ ಮಡಿಲಲ್ಲಿ ಮಲಗಿದರೆ ನಮಗೆ ಸದಾ ಕ್ಷೇಮ ಎಂಬ ಶ್ರದ್ಧೆಯಿರಬೇಕು ನಮ್ಮ ಆಧ್ಯಾತ್ಮಿಕ ತೊಡರುಗಳನ್ನೆಲ್ಲ ಗೀತೆ ಬಿಡಿಸುತ್ತದೆ ಈ ರೀತಿ ಗೀತಾಧ್ಯಾನ ಮಾಡುವವರಿಗೆ ಹೊಸ ಹಿಗ್ಗು, ಹೊಸ ಅರ್ಥ ಸಿಗುತ್ತದೆ ದಿನವೂ. ಗೀತೆ ಬಿಡಿಸಲಾರದ ಆಧ್ಯಾತ್ಮಿಕ ಸಮಸ್ಯೆ ಒಂದೂ ಇಲ್ಲ. ನಮಗೆ ಶ್ರದ್ಧೆ ಸಾಲದೆ ಅದನ್ನು ಓದಲೂ ಅರ್ಥಮಾಡಿಕೊಳ್ಳಲೂ ತಿಳಿಯದಿದ್ದರೆ ಅದು ಬೇರೆ ಮಾತು. ದಿನವೂ ಗೀತಾಪಾರಾಯಣವನ್ನೇಕೆ ಮಾಡುತ್ತೇವೆ? ನಮ್ಮ ಶ್ರದ್ಧೆ ಬೆಳೆಯುತ್ತ ಬರಲಿ, ನಮಗೆ ಯಾವಾಗಲೂ ಎಚ್ಚರವಿರಲಿ ಎಂದು ನಾನು ಏನು ಅರ್ಥ ಪಡೆದಿದೇನೋ ಇನ್ನೂ ಪಡೆಯುತ್ತಿದೇನೋ, ಗೀತೆಯ ಚಿಂತನದಿಂದ, ಅದರ ಸಾರವನ್ನಿಲ್ಲಿ ಕೊಡುತ್ತಿದೇನೆ, ಆಶ್ರಮವಾಸಿಗಳ ಉಪಯೋಗಕ್ಕಾಗಿ.

ಪಾಂಡವರೂ ಕೌರವರೂ ಕುರುಕ್ಷೇತ್ರದ ಯುದ್ಧಭೂಮಿಯಲ್ಲಿ ಸೇನಾ ಸಮೇತರಾಗಿ ನಿಂತಾಗ ಕೌರವರ ನಾಯಕ, ದುರ್ಯೋಧನ ತನ್ನ ಗುರು ದ್ರೋಣಾಚಾರ್ಯರಿಗೆ ಎರಡೂ ಸೇನೆಗಳ ಮಹಾರಥರನ್ನು ತೋರಿಸುತ್ತಾನೆ ಎರಡೂ ಕಡೆ ಯುದ್ಧದ ಸಿದ್ಧತೆಯಾಗಿ ಶಂಖನಾದವಾಗುತ್ತದೆ ಅರ್ಜುನನ ಸಾರಥಿಯಾದ ಭಗವಾನ್ ಶ್ರೀಕೃಷ್ಣ ಉಭಯ ಸೇನೆಗಳ ನಡುವೆ ತಮ್ಮ ರಥವನ್ನು ತಂದು ನಿಲ್ಲಿಸುತ್ತಾನೆ ಆ ದೃಶ್ಯವನ್ನು ನೋಡಿ ಅರ್ಜುನ ಬಹಳ ಖೇದಗೊಂಡ ಶ್ರೀಕೃಷ್ಣನನ್ನು ಕುರಿತು 'ಇವರೊಡನೆ ಹೇಗೆ ಯುದ್ಧ

ಮಾಡಲಿ? ಬೇರೆಯವರಾಗಿದ್ದರೆ ಕೂಡಲೆ ಯುದ್ಧಕ್ಕೆ ತೊಡಗುತ್ತಿದ್ದೆ. ಇವರು ನಮ್ಮವರು, ನಮ್ಮ ಬಂಧುಬಳಗ! ಕೌರವರಿಗೂ ಪಾಂಡವರಿಗೂ ಏನು ವ್ಯತ್ಯಾಸ? ದಾಯಾದಿಗಳಲ್ಲವೆ? ಇಬ್ಬರೂ ಒಟ್ಟಿಗೆ ಬೆಳೆದೆವು. ದ್ರೋಣಾಚಾರ್ಯರನ್ನು ಕೌರವರಿಗೆ ಮಾತ್ರ ಗುರುಗಳೆನ್ನಲಾದೀತೆ? ನಮಗೆ ಸಮಸ್ತ ವಿದ್ಯೆಗಳನ್ನೂ ಕಲಿಸಿದವರು ಅವರೇ. ಭೀಷ್ಮರೋ ಉಭಯಕುಲಪಿತಾಮಹ. ಅವರೊಡನೆ ಯುದ್ಧವೆ? ಕೌರವರೇನೋ ಹಂತಕರೇ! ಅನೇಕ ದುಷ್ಕಾರ್ಯಗಳನ್ನು ಮಾಡಿದಾರೆ, ಅನ್ಯಾಯ ಮಾಡಿದಾರೆ, ಪಾಂಡವರ ಭೂಮಿಯನ್ನು ಅಪಹರಿಸಿದಾರೆ, ದ್ರೌಪದಿಯಂಥ ಶ್ರೇಷ್ಠ ಪತಿವ್ರತೆಗೆ ಅವಮಾನಮಾಡಿದಾರೆ. ಇದೆಲ್ಲವೂ ತಪ್ಪೇ. ಆದರೆ ಅವರನ್ನು ಕೊಂದರೆ ಬಂದದ್ದೇನು? ಅವರಿಗೆ ತಿಳಿವಿಲ್ಲ, ನನಗಂತೂ ಸ್ವಲ್ಪ ತಿಳಿವಳಿಕೆಯಿದೆ. ಪಾಪ–ಪುಣ್ಯಗಳನ್ನು ಅರಿತುಕೊಳ್ಳಬಲ್ಲೆ. ಬಂಧುಗಳನ್ನು ಕೊಲ್ಲುವುದು ಪಾತಕ. ಪಾಂಡವರ ಪಾಲನ್ನು ನುಂಗಿದರೆ ತಾನೆ ಏನಂತೆ? ಅವರೇ ನಮ್ಮನ್ನು ಕೊಲ್ಲಲಿ, ನಾವು ಅವರನ್ನು ಕೊಲ್ಲಬಹುದೆ? ಕೃಷ್ಣ, ಈ ಬಂಧುಹತ್ಯೆ ಮಾಡಲಾರೆ' ಎನ್ನುತ್ತಾನೆ. ಹೀಗೆಂದು ಅರ್ಜುನ ರಥದಲ್ಲಿ ಕುಸಿದುಬಿದ್ದ.

ಮೊದಲನೆ ಅಧ್ಯಾಯ ಹೀಗೆ ಮುಗಿಯುತ್ತದೆ. ಅದನ್ನು ಅರ್ಜುನ-ವಿಷಾದಯೋಗ ಎನ್ನುತ್ತಾರೆ. ವಿಷಾದ ಎಂದರೆ ಸಂಕಟ. ಅರ್ಜುನನಿಗೆ ಆದ ಹಾಗೆ ನಮಗೆ ಸಂಕಟವಾಗಬೇಕು. ಆಧ್ಯಾತ್ಮಿಕ ಯಾತನೆ, ಜ್ಞಾನದಾಹ ಇಲ್ಲದೆ ಜ್ಞಾನ ಲಭಿಸದು. ಒಳ್ಳೆಯದು ಯಾವುದೋ ಕೆಟ್ಟದು ಯಾವುದೋ ತಿಳಿದುಕೊಳ್ಳುವಷ್ಟು ಆಸೆಯೂ ಇಲ್ಲದವನಿಗೆ ಧರ್ಮೋಪದೇಶದಿಂದೇನು ಲಾಭ? ಕುರುಕ್ಷೇತ್ರದ ಯುದ್ಧ ಬರೀ ಪ್ರಾಸಂಗಿಕ. ನಿಜವಾದ ಕುರುಕ್ಷೇತ್ರ ನಮ್ಮ ದೇಹವೇ. ಕುರುಕ್ಷೇತ್ರವೂ ಹೌದು, ಧರ್ಮಕ್ಷೇತ್ರವೂ ಹೌದು. ಅದನ್ನು ದೇವರ ನಿವಾಸವೆಂದು ಭಾವಿಸಿ ಹಾಗೆ ಮಾಡಿದರೆ ಆಗ ಅದು ಧರ್ಮಕ್ಷೇತ್ರ. ಈ ರಣರಂಗದಲ್ಲಿ ಸದಾ ಯುದ್ಧ ನಡದೇ ಇದೆ, ನನ್ನದು ನಿನ್ನದು ಎಂಬ ಭೇದದಿಂದ ಹುಟ್ಟಿದ ಯುದ್ಧ. ನನ್ನವರು ನಿನ್ನವರು ಎಂಬ ಭೇದ ಬಂತೋ ಯುದ್ಧ ಹುಟ್ಟಿತು. ಅದಕ್ಕಾಗಿಯೆ ಆಮೇಲೆ ಭಗವಂತ ಅರ್ಜುನನಿಗೆ ತಿಳಿಸಿದ್ದು—ಎಲ್ಲ ಅಧರ್ಮಕ್ಕೂ ಮೂಲ ರಾಗ–ದ್ವೇಷ. ಇದು ನನ್ನದು ಎಂದರೆ ರಾಗ ಹುಟ್ಟಿತು. ನನ್ನದಲ್ಲ ಎಂದರೆ ದ್ವೇಷ ಮೂಡಿತು, ಹಗೆ

ಮೊಳೆಯಿತು ಈ ನನ್ನ–ನಿನ್ನ ಭೇದವನ್ನು ಮರೆಯಬೇಕೆಂದು ಗೀತೆಯೂ ಎಲ್ಲಾ ಧರ್ಮಗ್ರಂಥಗಳೂ ಹೇಳುತ್ತವೆ ಎಂದರೆ, ರಾಗದ್ವೇಷಗಳನ್ನು ತೊರೆಯಬೇಕು ಹೀಗೆ ಹೇಳುವುದು ಬೇರೆ, ಹಾಗೆ ನಡೆಯುವುದೇ ಬೇರೆ. ಗೀತೆ ಹೇಳುವುದು—ಹಾಗೆ ನಡೆಯಲೂ ಬೇಕು ಎಂದು.*

---

## ನಡೆನುಡಿಯ ಕೈಪಿಡಿ

ಗೀತೆ ನಮಗೆ ನಡೆನುಡಿಯ ಕೈಪಿಡಿ ನಿಮಗೆ ಸಂದೇಹ ಬಂದಾಗ, ಅಶಾಂತಿ ಆಪತ್ತು ಕಾಡಿದಾಗ, ಗೀತೆಯನ್ನು ಶರಣುಹೋಗಿರಿ ಮೂರನೆಯ ಅಧ್ಯಾಯಕ್ಕಿಂತ ಹೆಚ್ಚಿನ ಶಾಂತಿ ಉಂಟೆ? ಯಜ್ಞಚಕ್ರದ ರಹಸ್ಯವೆಲ್ಲ ಅದರಲ್ಲಿ ಅಡಗಿದೆ ದೇವರು ನರನನ್ನು ಹುಟ್ಟಿಸಿದ ಹುಟ್ಟಿಸಿ ಅವನ ಕತ್ತಿಗೆ ಯಜ್ಞದ ತಾಳೀ ಕಟ್ಟಿದ. ಯಜ್ಞ ಅಂದರೆ ತ್ಯಾಗ ಎರಡೂ ಅಷ್ಟೇ, ಆತ್ಮಶುದ್ಧಿಗಾಗಿ ಯಜ್ಞದಿಂದಲೇ ಕುಲವೃದ್ಧಿ ಎಂದು ಭಗವಂತ ಹೇಳಿದಾನೆ ಯಜ್ಞ ಎಂದರೆ ಸೇವೆ ಗೀತೆ ಹೇಳಿಲ್ಲವೆ? ಕೇವಲ ತನಗಾಗಿಯೇ ಕರ್ಮ ಮಾಡುವವನು ಕಳ್ಳ 'ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ' ದೇವತೆಗಳನ್ನು ಯಜ್ಞದಿಂದ ನೀವು ಪೋಷಿಸಿರಿ ಅವರೂ ನಿಮ್ಮನ್ನು ಪೋಷಿಸಿ ಯಾರು ಇಷ್ಟಭೋಗಗಳನ್ನು ಕೊಟ್ಟಾರು ಆಯ್ದು ನೋಡಿದರೆ ಯಜ್ಞ ಎಂಬುದು ಜಗದ್ಧಿತಕ್ಕಾಗಿ ಮಾಡಿದ ತ್ಯಾಗ. ನಮಗೆ ಕಷ್ಟ ಬಂದರೆ ಬರಲಿ ಅದರಿಂದ ಇತರರಿಗೆ ಸುಖವಾದರೆ ಸಾಕು ಸಂಗಾತಿಗಳಿಗಾಗಿ ನರಕೋಟಿಗಾಗಿ ಆತ್ಮತ್ಯಾಗ ಮಾಡುವುದೇ ಪವಿತ್ರ ಉದಾತ್ತಸೇವೆ. ಸಾವು–ಬಾಳುಗಳ ನಡುವೆ ಸದಾ ಕದನ ಆಗುತ್ತಿದೆ ಅದು ನಿತ್ಯಯುದ್ಧ ಸಾವು–ಬದುಕುಗಳ ಅಂತಿಮ ಪರಿಣಾಮ ಸಾವು ಅಲ್ಲ—ಬದುಕು ಏಕೆ? ಸಾವಿನ ನಡುವೆ ಬಾಳು ಬದುಕುತ್ತಿದೆ, ಸಾಗುತ್ತಲೇ ಇದೆ ಅಹಿಂಸೆಯ ಹೆಚ್ಚಳಕ್ಕೆ ಇದೇ ಪ್ರತ್ಯಕ್ಷ ಪ್ರಮಾಣ ಯಜ್ಞದಿಂದ ಅಲ್ಲದೆ ಅಹಿಂಸೆಯ ಈ ವಿಜಯ ಅನ್ಯಥಾ ಸಾಧ್ಯವೇ ಇಲ್ಲ ಯಜ್ಞಕ್ಕಿಂತ ಹೆಚ್ಚಿನ ನಿಯಮ ಇಲ್ಲ ಅದು ಸೇವಾನಿಯಮ, ಕೈಂಕರ್ಯ.

---

* ಯಂಗ್ ಇಂಡಿಯಾ, ೨೦–೧೧–೧೯೩೦

ಈಗ ನಾವು ಗೀತಾಪಾರವನ್ನು ಮರೆತಿದೇವೆ ನಮ್ಮ ಮಕ್ಕಳಿಗಂತೂ ಇದರ ಗಂಧವನ್ನೇ ತೋರಿಸುವುದಿಲ್ಲ ಹೀಗಿರುವಾಗ ಗೀತಾನಾಯಕ ಕೃಷ್ಣನ ಬೆಲೆ ನಮಗೆ ಹೇಗೆ ತಿಳಿದೀತು? ಪ್ರತಿ ಗೋಕುಲಾಷ್ಟಮಿಯ ದಿನವೂ ಕೃಷ್ಣನನ್ನು ನೆನೆದು ಗೀತೆ ಓದಿ, ಅದರ ತತ್ತ್ವಗಳನ್ನು ಆಚರಿಸುವ ಪ್ರಯತ್ನ ಮಾಡಿದ್ದರೆ ನಮಗೆ ಈಗ ಬಂದಿರುವ ಗತಿ ಬರುತ್ತಿತ್ತೆ? ಶ್ರೀಕೃಷ್ಣ ನಿಜವಾದ ಸಮಾಜಸೇವಕ ತನ್ನ ಬದುಕನ್ನೆಲ್ಲ ಜನಸೇವೆಯಲ್ಲಿಯೇ ಕಳೆದ. ನಾಯಕನಾಗಿ ಪಡೆಗಳನ್ನು ನಡೆಸಬಹುದಾಗಿತ್ತು ಕುರುಕ್ಷೇತ್ರದಲ್ಲಿ ಹಾಗೆ ಮಾಡದೆ ಅರ್ಜುನನ ಸಾರಥಿಯಾಗಲು ಒಪ್ಪಿಕೊಂಡ ಅವನ ಜೀವನವೆಲ್ಲ ಇಡಿಗೆ ಇಡಿಯೆ ಅವಿಚ್ಛಿನ್ನಕರ್ಮದ ಒಂದು ಗೀತೆ ಆಗಿದೆ. ಚಕ್ರವರ್ತಿ ದುರ್ಯೋಧನನ ಮಿಷ್ಟಾನ್ನ ಬಿಟ್ಟು ದರಿದ್ರ ವಿದುರನ ಗಂಜಿಗೆ ಬಾಯೊಡ್ಡಿದ ಬಾಲ್ಯದಲ್ಲಿ ದನ ಕಾಯ್ದು ಇಂದಿಗೂ ಗೋಪಾಲ ಎನಿಸಿಕೊಂಡಿದಾನೆ ಕೃಷ್ಣನಿಗೆ ನಿದ್ದೆ ಇಲ್ಲ, ನಿರುದ್ಯೋಗ ಇಲ್ಲ ಪ್ರಪಂಚದ ಯೋಗಕ್ಷೇಮವನ್ನೇ ನಿದ್ದೆಯಿಲ್ಲದೆ ಹೊತ್ತು ಕಾಪಾಡಿದ. ಭಕ್ತಿ ಎಂದರೆ ಕರ್ಮ ಲೋಕಮಾನ್ಯ ತಿಲಕರು ಹೇಳಿಲ್ಲವೆ? ಜ್ಞಾನಕ್ಕಾಗಲಿ ಭಕ್ತಿಗೇ ಆಗಲಿ, ಕರ್ಮವೇ ದಾರಿ ಇಷ್ಟೇ ಆ ಕರ್ಮವನ್ನು ಸ್ವಾರ್ಥಕ್ಕಾಗಿ ಮಾಡಬಾರದು ಪರಹಿತಕ್ಕಾಗಿ ಮಾಡಬೇಕು ಸ್ವಾರ್ಥಕರ್ಮ ಬಂಧನ. ಪರಾರ್ಥಕರ್ಮ ಅದನ್ನು ಬಿಡಿಸುತ್ತದೆ *

---

## ಗೀತಾಮೃತಾಂಜನ

ಒಂಬತ್ತನೆಯ ಅಧ್ಯಾಯದಲ್ಲಿ ಸರ್ವದುಃಖನಿವಾರಿಣಿಯಾದ ಅಮೃತಾಂಜನ ಇದೆ. ಆದಿಭೌತಿಕವಷ್ಟೇ ಅಲ್ಲದೆ ಆಧ್ಯಾತ್ಮಿಕವಾದ ರೋಗಗಳಿಂದಲೂ ಪೀಡಿತರಾದ ನಮಗೆ ಸರ್ವರೋಗಹರವಾದ ದಿವ್ಯೌಷಧ ಅದು ದೇವರನ್ನು ನಂಬಿದವರಿಗೆ ನೋವಿಲ್ಲ, ನಾಶವಿಲ್ಲ. ಗೀತೆಯ ಕಾಲಕ್ಕೆ ವರ್ಣಾಶ್ರಮವು ನಿಜಾರ್ಥವನ್ನೂ ಪವಿತ್ರತೆಯನ್ನೂ ಕಳೆದುಕೊಂಡು ಈಗಿನ ಮೇಲು-ಕೀಳುಗಳ ಗೊಂದಲದಲ್ಲಿ ಕಾಲಿಟ್ಟದ್ದಿತು ಎಂದು ಈ ಅಧ್ಯಾಯದಿಂದ ತಿಳಿಯಬಹುದಾಗಿದೆ.

---

* ಯಂಗ್ ಇಂಡಿಯಾ, ೧-೯-೧೯೨೭

ಆದರೆ ಗೀತೆಯ ಅಭಯಹಸ್ತ ಆ ಭೇದಗಳೆಲ್ಲವನ್ನೂ ಮೀರಿದೆ. ಅವರಿವರೆನ್ನದೆ ಎಲ್ಲರಿಗೂ ದೇವರು ತನ್ನ ಅಭಯಹಸ್ತವನ್ನು ನೀಡಿದಾನೆ. ಮಾನವರು ಸುಲಭಾಪರಾಧಿಗಳು ಸಾಧಾರಣ ಮನುಷ್ಯರಿಗಷ್ಟೇ ಅಲ್ಲ, ಪಾಪಯೋನಿಗಳಿಗೂ ಪಾಪಸಂಭವರಿಗೂ ಆ ವರ ಕರುಣಿಸಲ್ಪಟ್ಟಿದೆ, ಆ ಆಶ್ವಾಸನ ಕೊಡಲ್ಪಟ್ಟದೆ ಅಲ್ಲಿಗೇ ಮುಗಿಯಲಿಲ್ಲ ಅಪಿ ಚೇತ್ಸುದುರಾಚಾರೋ— ಪಾಪದಲ್ಲೇ ಮುಳುಗಿದ್ದರೂ ಬಾಧಕವಿಲ್ಲ, ನಮ್ಮ ಯೋಗಕ್ಷೇಮ ಆತನಿಗೆ ಸೇರಿದುದು. ಆದರೆ ನಮ್ಮಲ್ಲಿ ಯಾರು ಪಾಪಾತ್ಮರಲ್ಲದವರು? ಯಾರು ದುರಾಚಾರಿಗಳಲ್ಲದವರು? ಯಾರ ಕಡೆ ಯಾರು ಬೆರಳು ತೋರಿಸಬಲ್ಲರು? ಆ ಧೈರ್ಯ ಯಾರಿಗೆ ಉಂಟು?

ನ ಮೇ ಭಕ್ತಃ ಪ್ರಣಶ್ಯತಿ—ನನ್ನನ್ನು ನಂಬಿದವರು ಯಾರೂ ನಾಶವಾಗರು. ಪ್ರತಿಜಾನೀಹಿ—ಇದನ್ನು ಗಟ್ಟಿಯಾಗಿ ತಿಳಿ ಹೀಗೆ ಭಗವಂತನು ಮುಕ್ತಕಂಠನಾಗಿ ಹೇಳಿದಾನೆ ಆದರೆ ಯಾವ ಪ್ರಯತ್ನವನ್ನೂ ಮಾಡದೆ ಬರಿಯೆ ನಂಬಿದರೆ ಸಾಕೆ? ಸಾಲದು. ಅಷ್ಟುಮಾತ್ರದಿಂದಲೇ ನಮ್ಮ ಪಾಪವೆಲ್ಲ ಹರಿಯುತ್ತದೆ ಎಂದು ಯಾರೂ ತಿಳಿಯಬಾರದು ಇಂದ್ರಿಯಗಳ ಮೋಹವನ್ನು ಗೆಲ್ಲಲು ಪೂರಾ ಪ್ರಯತ್ನಪಟ್ಟು ಕಷ್ಟದಲ್ಲಿಯೂ ಕಂಬನಿಯಲ್ಲಿಯೂ ದೇವರನ್ನು ಮೊರೆಹೋದವನಿಗೆ ಆ ಸಮಾಧಾನ, ಆ ಯೋಗಕ್ಷೇಮ, ಔಷಧಿ ಸಿಕ್ಕೀತು.

ಹನ್ನೊಂದು–ಹನ್ನೆರಡು .

ಅದ್ಭುತವಾದ ಈ ವಿಶ್ವರೂಪಸಂದರ್ಶನಕ್ಕಿಂತ ನಮ್ಮ ಮನಸ್ಸನ್ನು ದೇವರ ಕಡೆ ಸೆಳೆಯಲು ಮತ್ತೇನು ಬಲವತ್ತರ ಸಾಧನ ಇದ್ದೀತು! ಹೀಗೆ ನಮ್ಮ ಮನಸ್ಸನ್ನು ಭಕ್ತಿಗೆ ಹದಗೊಳಿಸಿ ಹಸನುಮಾಡಿ ಹನ್ನೆರಡನೆಯ ಅಧ್ಯಾಯದಲ್ಲಿ ಶ್ರೀಕೃಷ್ಣ ನಮಗೆ ಭಕ್ತಿಯ ಸಾರಸಂಗ್ರಹವನ್ನೇ ಕೊಟ್ಟಿದಾನೆ ಆ ಅಧ್ಯಾಯ ಬಹಳ ಚಿಕ್ಕದು, ಅತಿಸಂಗ್ರಹ ಸಂಕಟದ ಸಮಯದಲ್ಲಿ ತಟ್ಟನೆ ನೆನಪು ಮಾಡಿಕೊಳ್ಳಲು ಅನುಕೂಲವಾಗುವಂತೆ ಸುಲಭವಾಗಿ ಬಾಯಿಪಾಠ ಮಾಡಬಹುದು

ಗೀತೆಯ ಭಕ್ತಿ ಮಿಥ್ಯಾವಸ್ತುವೂ ಅಲ್ಲ, ಅಂಧಶ್ರದ್ಧೆಯೂ ಅಲ್ಲ ಅಲ್ಲಿ ಬಂದಿರುವ ಕೆಲವು ಮಾತು ಬಾಹ್ಯೋಪಚಾರಕ್ಕೆ ಸಂಬಂಧಿಸಿವೆ. ನಿಜ,

ಭಕ್ತರು ಜಪಮಾಲೆ, ತಿಲಕ, ಅರ್ಘ್ಯ ಮೊದಲಾದ ಉಪಾಯ ಹೂಡಿದರೆ ಹೂಡಲಿ. ಅವು ಭಕ್ತಿಯ ಲಕ್ಷಣಗಳೇನೂ ಅಲ್ಲ ಯಾರೊಡನೆಯೂ ಹಗೆ ಇಲ್ಲದೆ, ಕಾರುಣ್ಯನಿಧಿಯಾಗಿ, ಅಹಂಕಾರ ಮಮಕಾರ ಬಿಟ್ಟು ಶೀತೋಷ್ಣ ಸುಖದುಃಖಗಳನ್ನು ಸಮವಾಗಿ ತಿಳಿದು, ನಿತ್ಯಸಂತುಷ್ಟನಾದ ಸಹನಶೀಲನು ಭಕ್ತ ಅವನಿಗೆ ದೃಢನಿಶ್ಚಯ, ಭಗವದರ್ಪಿತ ಚಿತ್ತಗಳು ಬೇಕು ಲೋಕಕ್ಕೆ ಅವನಿಂದ ಹೆದರಿಕೆ ಇಲ್ಲ ಅವನು ಲೋಕಕ್ಕೆ ಅಂಜುವ ಹಾಗಿಲ್ಲ ಇದು ಶುಭ, ಅದು ಅಶುಭ ಎಂಬುದಿಲ್ಲ ಶತ್ರು–ಮಿತ್ರ ಎಂಬುದಿಲ್ಲ ಎಲ್ಲರೂ ಸಮ ಮಾನಾವಮಾನವೂ ಅಷ್ಟೆ ಇಂಥವನಿಗೆ ನಿಂದೆ–ಸ್ತುತಿಗಳು ಎರಡೂ ಒಂದೇ ಮೌನ–ಸ್ಥಿರಬುದ್ಧಿಗಳು ಅವನ ಸ್ವಭಾವ ಇಂಥ ಪವಿತ್ರ ಭಕ್ತಿ ಆಸಕ್ತರಿಗೆ ಸಾಧ್ಯವೇ ?

ಹದಿನಾಲ್ಕು–ಹದಿನೈದು .

೧೪ನೆಯ ಅಧ್ಯಾಯದ ಗುಣತ್ರಯವಿಭಾಗ ೩೦ ವರ್ಷದ ಕೆಳಗೆ ನಾನು ಓದಿದ್ದ ಹೆನ್ರಿ ಡ್ರಮ್ಮಂಡರ ‘ ಅಧ್ಯಾತ್ಮಪ್ರಪಂಚದಲ್ಲಿ ಪ್ರಾಕೃತಿಕ ನಿಯಮ ’ ಎಂಬ ಪುಸ್ತಕವನ್ನು ನೆನಪು ಮಾಡುತ್ತಿದೆ ನಿಯಮಗಳು ಬೇಕಾದಷ್ಟು ಇವೆಯಾಗಲಿ, ಮುಖ್ಯ ವಿಭಾಗಗಳು ಮೂರು ಈ ಅಧ್ಯಾಯ ಮನುಷ್ಯ ಜೀವನವನ್ನು ನಡೆಯಿಸುವ ನಿಯಮಗಳನ್ನು ತಿಳಿಸುತ್ತದೆ.

೧೫ರಲ್ಲಿ ಪರಿಪೂರ್ಣ ಮಾನವನ—ಪುರುಷೋತ್ತಮನ—ಚಿತ್ರ ಇದೆ. ಈ ಅಧ್ಯಾಯದಿಂದ ನಾವು ತಿಳಿಯಬೇಕಾದುದು ಮಾನವನ ‘ ಸ್ವರ್ಗಾರೋಹಣ ’ ರಹಸ್ಯ. ಮನುಷ್ಯರಲ್ಲಿ ಯಾರೂ ಒಂದೇ ಗುಣದವರಿಲ್ಲ. ಸತ್ತ್ವ ರಜಸ್ ತಮಸ್ ಮೂರೂ ಎಲ್ಲರಲ್ಲಿಯೂ ಇವೆ ನಾವೆಲ್ಲ, ಪ್ರತಿಯೊಬ್ಬರೂ, ಸತ್ತ್ವಗುಣಪ್ರಧಾನವಾದ ಸ್ಥಿತಿಗೆ ಏರಬೇಕು ಕಡೆಗೆ ಮೂರೂ ಗುಣಗಳನ್ನು ಮೀರಿ ‘ ಪುರುಷೋತ್ತಮ ’ರಾಗಬೇಕು ಭೌತಪ್ರಪಂಚದ ಉದಾಹರಣೆ ಹೀಗೊಂದು ಹೇಳಬಹುದು . ನೀರು ನೋಡಿ ಘನಸ್ವರೂಪದಲ್ಲಿ ನೆಲದ ಮೇಲೆಯೇ ಇರುತ್ತದೆ ಮೇಲೇರಲಾರದು ಅದನ್ನೇ ಹಬೆಯಾಗಿ ಮಾಡಿದರೆ ಮೇಲೆ ಏರುತ್ತದೆ. ಮೇಲೇರಿ ಆಕಾಶದಲ್ಲಿ ಸೇರಿ ಅಲ್ಲಿ ಮೋಡವಾಗುತ್ತದೆ, ಮತ್ತೆ ಮಳೆಯಾಗಿ ಭೂಮಿಗೆ ಇಳಿದು ಫಲದಾಯಿನಿಯೂ ವರಪ್ರಸಾದಿನಿಯೂ

ಆಗುತ್ತದೆ ನಾವು ಎಲ್ಲರೂ ನೀರಿನಂತೆ ನಮ್ಮ ಒಳಗಿನ ಅಹಂಕಾರ ಸಾಯುವಂತೆ ನಮ್ಮನ್ನು ಹಬೆ ಆಗಿಸಿಕೊಳ್ಳಬೇಕು ಆಗ ನಾವೂ ಅನಂತನಾದ ಪರಮೇಶ್ವರನಲ್ಲಿ ಬೆರೆತು ಜಗದ್ಧಿತ ಆದೀತು *

* * *

ಮನುಷ್ಯ ತನ್ನ ವಿಧಿಗೆ ತಾನೇ ಕರ್ತ ತನಗೆ ಬೇಕಾದ ಕರ್ಮವನ್ನು ಮಾಡಬಹುದು, ಬೇಕಾದ ರೀತಿಯಲ್ಲಿ ಮಾಡಬಹುದು, ಆದರೆ ಫಲದ ಗೋಜಿಗೆ ಹೋಗಬಾರದು ಅಲ್ಲೇ ಇರುವುದು ನಂಜು, ನೋವು ಪಂಜಾಬ್ ಮೇಲಿನಂತೆ ಚಕಚಕ ಕೆಲಸ ಮಾಡಬೇಕು ಆದರೆ ಡಬ್ಬಾಗಳಂತೆ ನಮ್ಮ ಕೆಲಸಕ್ಕೇ ಜೋತುಬೀಳಬಾರದು ಗಾಡಿ ನಡಸುವ (ಡ್ರೈವರಿನಂತೆ) ಚಾಲಕನಂತೆ ಇರಬೇಕು ನಮ್ಮ ನಿಗ್ರಹವನ್ನು ಕಾಯ್ದುಕೊಂಡು ಶಾಂತವಾಗಿ ಕೆಲಸಮಾಡಬೇಕು, ತೂಕ ತಪ್ಪಬಾರದು ಬೇಕಾದಾಗ ಕೆಲಸದಿಂದ ಬಿಡುಗಡೆ ಯಾಗುವ ತೂಕ ಹಿಡಿಯಬೇಕು

ಅನೇಕ ವೇಳೆ ತುತ್ತು ಬಾಯಿಗೆ ಬರುವುದೇ ಇಲ್ಲ, ಬರಿಯ ಕೈ ಕೆಸರು ಆದುದಷ್ಟೇ ಆಗ ಸಾವಧಾನ ಬೇಕು, ತಾಳ್ಮೆ ಬೇಕು ಕಾಲಕ್ರಮದಲ್ಲಿ ನಿರ್ದಿಷ್ಟ ಫಲವಾಗಿ ಪರಿಣಮಿಸೀತು ಎಂಬ ನಂಬಿಕೆ ಬೇಕು

* * *

ಅನೇಕರ ಬಾಳಿನ ಒಗಟನ್ನು ಬಿಡಿಸಿದೆ ಗೀತೆ ಸಾವಿರಾರು ಜನಕ್ಕೆ ಅದೇ ತಾಯಿ ಅವರಿಗೆ ಕಷ್ಟ ಬಂದಾಗ ಅದೇ ಶಾಂತಿ–ಸಮಾಧಾನದ ಅಮೃತವನ್ನು ಕರೆಯುತ್ತದೆ. ಆಪತ್ತಿನಲ್ಲಿ ಎಂದೂ ಗೀತೆ ಕೈಬಿಟ್ಟಿಲ್ಲ ಗೀತೆ ಆಧ್ಯಾತ್ಮ ನಿಘಂಟು. ಆತ್ಮಸಂಬಂಧವಾದ ಸಮಸ್ತ ಸಮಸ್ಯೆಗಳನ್ನೂ ಪರಿಷ್ಕರಿಸುವ ಸಾಧನರಾಜ ಅದರಲ್ಲಿ ತರ್ಕದ ಫಲವಾಗಲಿ ಮೊಂಡುಸಿದ್ಧಾಂತವಾಗಲಿ ಇಲ್ಲ ಅದು ಯಾವ ಜಾತಿಮತಪಂಥಕ್ಕೂ ಒಳಗಾಗಿಲ್ಲ ಅದರ ಸಂದೇಶ ಸಂಕುಚಿತವಲ್ಲ. ಇಡೀ ವಿಶ್ವಕ್ಕೇ ಸಾರಿದ ಸಂದೇಶ

---

* ಪರ್ಣಕುಟಿ — ೧೭೭, ೧೭೪, ೧೭೯, ೧೮೦

ಹಿಂದು ಮುಸಲ್ಮಾನ ಕ್ರಿಸ್ತಾನರು ಹೆಂಗಸರು ಮಕ್ಕಳು ಎಲ್ಲರೂ ಮಾಡಬಹುದಾದ ಪರಾರ್ಥಕರ್ಮ ಯಾವುದು ? ನೂಲುವುದೇ ಆ ಯಜ್ಞಕರ್ಮ ಎಂದು ತೋರಿಸಲು ನಾನು ಯತ್ನಿಸಿದೇನೆ ದೇವರ ಹೆಸರಿನಲ್ಲಿ ದೀನದರಿದ್ರರಿಗಾಗಿ ಅವರ ಸೋಮಾರಿ ಕೈಗಳಲ್ಲಿ ಶಕ್ತಿ ಸಂಚಾರವಾಗುವಂತೆ ಏನಾದರೂ ಮಾಡಬಹುದಾಗಿದ್ದರೆ ಅದೊಂದೇ ಬ್ರಾಹ್ಮಣ-ಭಂಗಿ ಇಬ್ಬರಲ್ಲೂ ಭೇದವನ್ನು ಕಾಣದವನೇ ನಿಜವಾದ ಭಕ್ತ ಎಂಬುದನ್ನೂ ಗೀತೆ ಕಲಿಸುತ್ತದೆ ಇದು ನಿಜವಾದರೆ ಹಿಂದೂ ಧರ್ಮದಲ್ಲಿ ಅಸ್ಪೃಶ್ಯತೆಗೆ ಎಡೆಯಿಲ್ಲ ನಿಮಗೆ ಆ ಮೂಢನಂಬಿಕೆ ಇನ್ನೂ ಇದ್ದರೆ ಈ ಗೋಕುಲಾಷ್ಟಮಿಯ ದಿನ ಅದನ್ನು ತೊಳೆದುಹಾಕಿಬಿಡಿ. ಗೀತೆಯನ್ನು ನಂಬಿದವನಿಗೆ ಹಿಂದು-ಮುಸಲ್ಮಾನ ಭೇದವೂ ಇಲ್ಲ ಯಾವ ಹೆಸರಿನಿಂದ ಉಪಾಸನೆಮಾಡಿದರೇನು, ಶ್ರದ್ಧೆಯಿಂದ ಮಾಡಿದುದೆಲ್ಲಾ ಉಪಾಸನೆಯೆ ಎಂದಿದಾನೆ ಭಗವಂತ ಗೀತೆಯಲ್ಲಿ ಹೇಳಿದ ಭಕ್ತಿ-ಕರ್ಮಗಳ ದಾರಿ ಪ್ರೇಮದ ದಾರಿ, ಅದರಲ್ಲಿ ಮನುಷ್ಯ ಮನುಷ್ಯನನ್ನು ಹಳಿಯಲು ಎಡೆಯೇ ಇಲ್ಲ *

---

* ಯಂಗ್ ಇಂಡಿಯಾ, ೧-೯-೧೯೨೭

# ಮುನ್ನುಡಿ

೧೯೩೦ರಲ್ಲಿ ಯರವಡಾ (ಮಂದಿರ) ಜೈಲಿನಲ್ಲಿದ್ದಾಗ ವಾರವಾರವೂ ಆಶ್ರಮದ ಮುಖ್ಯ ವ್ರತಗಳ ಬಗ್ಗೆ ವಿವರಣೆ ಕೊಡುತ್ತ, ಸತ್ಯಾಗ್ರಹಾಶ್ರಮಕ್ಕೆ ಪತ್ರಗಳನ್ನು ಬರೆಯುತ್ತಿದ್ದೆ ಆಗಲೇ ಆಶ್ರಮದ ನಾಲ್ಕು ಮೂಲೆಯನ್ನು ದಾಟಿ ಅದರ ಪ್ರಭಾವ ಹರಡಿತ್ತು. ಅದರಿಂದ ಆ ಪತ್ರಗಳನ್ನು ಹಲವು ಪ್ರತಿ ಮಾಡಿ ಹಂಚಬೇಕಾಯಿತು ಆ ಪತ್ರಗಳೆಲ್ಲ ಗುಜರಾತಿಯಲ್ಲಿ ಬರೆದವು ಹಿಂದೀಗೂ ಉಳಿದ ಭಾರತೀಯ ಭಾಷೆಗಳಿಗೂ ಇವು ಭಾಷಾಂತರವಾಗಬೇಕು, ಇಂಗ್ಲೀಷಿಗೂ ಆಗಬೇಕು ಎಂದು ಸೂಚನೆ ಬಂತು ಶ್ರೀ ವಾಲ್ಜೀ ದೇಸಾಯಿ ಸಾಧ್ಯವಿದ್ದಷ್ಟು ಪೂರ್ಣ ಭಾಷಾಂತರಮಾಡಿದರು ಆದರೆ ಮತ್ತೆ ನಾನು ಸೆರೆಮನೆಗೆ ಬಂದಾಗ ನನಗೆ ಬಿಡುವಿದೆ ಎಂದು ಆ ಭಾಷಾಂತರವನ್ನು ಪುನಃ ನೋಡಿಕೊಡಲು ನನಗೆ ಕಳಿಸಿದರು. ನಾನು ಸಾವಧಾನವಾಗಿ ನೋಡಿದೇನೆ. ನನ್ನ ಅರ್ಥ ಸ್ಪಷ್ಟವಾಗುವಂತೆ ಅಲ್ಲಲ್ಲಿ ಕೆಲವು ವಾಕ್ಯಗಳನ್ನು ತಿದ್ದಿದೇನೆ. ಇಂಗ್ಲೀಷು ಬಲ್ಲವರಿಗಾಗಿಯೇ ನಾನು ಬೇರೆ ಬರೆದಿದ್ದರೆ, ಬೇರೆಯೇ ಬರೆಯುತ್ತಿದ್ದೆ ಎಂಬುದನ್ನು ಹೇಳಬೇಕಾಗಿಲ್ಲ ಅದು ನನಗೆ ಅವರು ಹೇಳಿದುದಕ್ಕಿಂತ ಮುಂದೆ ಹೋದಂತೆ. ಅಲ್ಲದೆ, ಇಂಗ್ಲೀಷು ಬಲ್ಲವರಿಗೂ ೧೯೩೦ರಲ್ಲಿ ಆಶ್ರಮವಾಸಿಗಳಿಗೆ ನಾನು ಹೇಗೆ ಈ ವಿಷಯ ಹೇಳಿದೆ ಎಂಬುದು ತಿಳಿಯುವುದು ಒಳಿತು ಆದುದರಿಂದ ಮೂಲವನ್ನು ಸ್ವಲ್ಪವೂ ಬದಲಿಸಲಿಲ್ಲ.

ಯರವಡಾ ಮಂದಿರ (ಜೈಲು)

೬–೩–೧೯೩೨

ಮೋ. ಕ. ಗಾಂಧೀ

# ೧

# ಸತ್ಯ

ಬೆಳಗಿನ ಪ್ರಾರ್ಥನೆಯಾದ ಮೇಲೆ
೨೨–೭–೧೯೩೦

ನಮ್ಮ ಸಂಸ್ಥೆಯ ಮೂಲವೇ ಸತ್ಯದ ಆಗ್ರಹ ಆದುದರಿಂದ ಸತ್ಯವನ್ನೇ ಮೊದಲು ತೆಗೆದುಕೊಳ್ಳುತ್ತೇನೆ

'ಸತ್ಯ' ಎಂಬ ಶಬ್ದ ಸತ್‌ನಿಂದ ಹುಟ್ಟಿದೆ ಸತ್ ಎಂದರೆ ಇರುವುದು ಸತ್ಯ ಎಂದರೆ ಇರುವಿಕೆ ಸತ್ಯವಲ್ಲದೆ ಮತ್ತಾವುದೂ ಇಲ್ಲವೇ ಇಲ್ಲ ಆದುದರಿಂದಲೇ ಪರಮೇಶ್ವರನ ನಿಜವಾದ ಹೆಸರು ಸತ್ ಅಥವಾ ಸತ್ಯ. ಈ ಕಾರಣದಿಂದ, ಪರಮೇಶ್ವರ ಸತ್ಯ ಎನ್ನುವುದಕ್ಕಿಂತ ಸತ್ಯವೇ ಪರಮೇಶ್ವರ ಎಂಬುದೇ ಹೆಚ್ಚು ಉಪಯುಕ್ತ ರಾಜರಿಲ್ಲದೆ ದಳಪತಿಗಳಿಲ್ಲದೆ ನಮ್ಮ ವ್ಯವಹಾರ ನಡೆಯದು ಇದರಿಂದ ಪರಮೇಶ್ವರ ಎಂಬ ಹೆಸರು ಹೆಚ್ಚು ರೂಢಿಯಾಗಿಬಿಟ್ಟಿದೆ ಮುಂದೆಯೂ ಹೆಚ್ಚು ರೂಢಿಯಲ್ಲಿದ್ದೀತು ಆದರೆ ವಿಚಾರ ಮಾಡಿ ನೋಡಿದರೆ 'ಸತ್' ಅಥವಾ 'ಸತ್ಯ'ವೇ ನಿಜವಾದ ಹೆಸರು, ಅದೇ ಪೂರ್ಣ ಅರ್ಥವನ್ನು ಕೊಡುತ್ತದೆ ಎಂಬುದು ತಿಳಿಯುತ್ತದೆ

ಇನ್ನು, ಸತ್ಯವಿದ್ದಲ್ಲಿ ಜ್ಞಾನ—ಶುದ್ಧಜ್ಞಾನ—ಇದ್ದೇ ಇದೆ ಸತ್ಯವಿಲ್ಲದಲ್ಲಿ ಶುದ್ಧಜ್ಞಾನ ಸಂಭವವೇ ಅಲ್ಲ ಆದುದರಿಂದಲೇ ಈಶ್ವರನ ಹೆಸರಿನ ಜೊತೆಗೆ 'ಚಿತ್' ಅಥವಾ ಜ್ಞಾನ ಶಬ್ದವನ್ನು ಜೋಡಿಸಿದೆ ಸತ್ಯಜ್ಞಾನವಿದ್ದಲ್ಲಿ ಆನಂದವಿದ್ದೇ ಇರುತ್ತದೆ ಯಾವಾಗಲೂ ಅಲ್ಲಿ ಶೋಕ ಇರಲೇ ಆರದು. ಅಲ್ಲದೆ, ಸತ್ಯ ಶಾಶ್ವತವಾದುದರಿಂದ ಆನಂದವೂ ಶಾಶ್ವತವೇ ಈ ಕಾರಣದಿಂದಲೇ ನಾವು ಈಶ್ವರನನ್ನು ಸಚ್ಚಿದಾನಂದ ಎಂಬ ಹೆಸರಿನಿಂದ ಅರಿತುಕೊಂಡಿದೇವೆ.

ಈ ಸತ್ಯದ ಆರಾಧನೆಗಾಗಿಯೇ ನಮ್ಮ ಅಸ್ತಿತ್ವ. ನಮ್ಮ ಪ್ರವೃತ್ತಿ ಪ್ರತಿಯೊಂದೂ ಅದಕ್ಕಾಗಿಯೇ ಆಗಬೇಕು. ನಾವು ಬಿಡುವ–ತೆಗೆದುಕೊಳ್ಳುವ ಉಸಿರು ಪ್ರತಿಯೊಂದೂ ಅದಕ್ಕೆ ಆಗಬೇಕು. ಹೀಗೆ ಮಾಡಲು ಕಲಿತರೆ, ಉಳಿದೆಲ್ಲ ನಿಯಮಗಳೂ ತಾವಾಗಿಯೆ ಪ್ರಯತ್ನವಿಲ್ಲದೆಯೆ ಕೈಗೂಡುತ್ತವೆ

ಅವುಗಳ ಪಾಲನೆಯೂ ಸುಲಭವಾಗುತ್ತದೆ ಸತ್ಯದ ವಿನಾ ಜೀವನನಿಯಮ ಯಾವುದನ್ನೂ ಸರಿಯಾಗಿ ಪಾಲಿಸಲಾಗುವುದಿಲ್ಲ.

ಸಾಧಾರಣವಾಗಿ ಸತ್ಯವೆಂದರೆ 'ನಿಜವನ್ನು ಹೇಳುವುದು' ಎಂದು ಮಾತ್ರ ತಿಳಿಯುತ್ತಾರೆ ಆದರೆ ನಾವು ಸತ್ಯ ಶಬ್ದವನ್ನು ವ್ಯಾಪಕಾರ್ಥದಲ್ಲಿ ಪ್ರಯೋಗಿಸುತ್ತೇವೆ ವಿಚಾರದಲ್ಲಿ, ವಾಣಿಯಲ್ಲಿ, ಆಚಾರದಲ್ಲಿ ಸತ್ಯವೇ ಇರಬೇಕು ಈ ಸತ್ಯವನ್ನು ಸಂಪೂರ್ಣವಾಗಿ ಅರಿತವನಿಗೆ ಈ ಲೋಕದಲ್ಲಿ ಅರಿತುಕೊಳ್ಳಬೇಕಾದುದು ಇನ್ನೇನೂ ಇಲ್ಲ ಸತ್ಯದಲ್ಲಿ ಸಂಪೂರ್ಣ ಜ್ಞಾನ ಸಮಾವೇಶವಾಗಿದೆ ಅದರಲ್ಲಿ ಸಮಾವೇಶವಾದುದು ಸತ್ಯವೂ ಅಲ್ಲ, ಜ್ಞಾನವೂ ಅಲ್ಲ ಅಂಥದರಿಂದ ನಿಜವಾದ ಆನಂದ ಸಿಕ್ಕೀತಾದರೂ ಹೇಗೆ? ಎಂದಿಗೂ ತಪ್ಪದ ಈ ಒರೆಗಲ್ಲಿಗೆ ಉಜ್ಜಿ ನೋಡುವುದನ್ನು ಕಲಿತರೆ—ಯಾವುದು ಮಾಡಲು ಯೋಗ್ಯ, ಯಾವುದಲ್ಲ, ಯಾವುದು ನೋಡಲು ಯೋಗ್ಯ, ಯಾವುದು ಯೋಗ್ಯವಲ್ಲ, ಯಾವುದು ಓದಲು ಯೋಗ್ಯ, ಯಾವುದು ಓದಲು ಯೋಗ್ಯವಲ್ಲ ಎಂಬುದು ಒಡನೆಯೆ ತಿಳಿಯುತ್ತದೆ.

ಆದರೆ ಪರುಸಗಲ್ಲಿನ ಹಾಗಿರುವ, ಕಾಮಧೇನುವಿನಂಥ ಈ ಸತ್ಯ ಲಭಿಸುವುದು ಹೇಗೆ? ಇದಕ್ಕೆ ಉತ್ತರವನ್ನು ಭಗವಂತ ಕೊಟ್ಟಿದಾನೆ: 'ಅಭ್ಯಾಸ-ವೈರಾಗ್ಯಗಳಿಂದ' ಸತ್ಯಕ್ಕಾಗಿ ಅನನ್ಯಶ್ರದ್ಧೆಯೇ ಅಭ್ಯಾಸ. ಸತ್ಯದ ಹೊರತು ಉಳಿದೆಲ್ಲ ವಸ್ತುಗಳಲ್ಲಿಯೂ ಆತ್ಯಂತಿಕ ಔದಾಸೀನ್ಯವೇ ವೈರಾಗ್ಯ ಇಷ್ಟಿದ್ದರೂ ಒಬ್ಬನಿಗೆ ಸತ್ಯವಾದುದು ಇನ್ನೊಬ್ಬನಿಗೆ ಅಸತ್ಯವಾಗುವುದನ್ನು ನಾವು ಕಂಡಿದೇವೆ ಅದರಿಂದ ಸಾಧಕ ಗಾಬರಿಗೊಳ್ಳಬೇಕಾಗಿಲ್ಲ ಪ್ರಯತ್ನ ಶುದ್ಧವಾಗಿದ್ದರೆ, ಭಿನ್ನಭಿನ್ನವೆಂದು ಕಾಣಬರುವ ಸತ್ಯ ಎಲ್ಲವೂ ಒಂದೇ ಮರದ ಬೇರೆಬೇರೆಯಾಗಿ ಕಾಣುವ, ಆ ಲೆಕ್ಕವಿಲ್ಲದ ಎಲೆಗಳ ಹಾಗೆ ಎಂಬುದು ತಿಳಿದು ಬರುತ್ತದೆ ಪರಮೇಶ್ವರನೇ ಬೇರೆ ಬೇರೆ ವ್ಯಕ್ತಿಗಳಿಗೆ ಬೇರೆಬೇರೆಯಾಗಿ ಕಾಣಬಾರನೆ? ಆದರೂ ಪರಮೇಶ್ವರ ಒಬ್ಬನೇ ಎಂದು ನಮಗೆ ಗೊತ್ತಿದೆ ಸತ್ಯವೆಂಬುದೇ ಪರಮೇಶ್ವರನ ಹೆಸರು ಆದುದರಿಂದ ಪ್ರತಿಯೊಬ್ಬನೂ ತನಗೆ ಸತ್ಯ ಎಂದು ಏನು ತಿಳಿಯಿತೋ ಅದರಂತೆ ನಡೆದುಕೊಂಡರಾಯಿತು ಅದರಲ್ಲಿ ಏನೂ ದೋಷವಿಲ್ಲ ಅಷ್ಟೇ ಅಲ್ಲ, ಹಾಗೆ ನಡೆದುಕೊಳ್ಳಬೇಕಾದುದೇ ಕರ್ತವ್ಯ ಹಾಗೆ ಸತ್ಯವನ್ನು ಅನುಸರಿಸುವಾಗ ಪ್ರಮಾದವಾದರೂ ಅದು ಸರಿಹೋಗುತ್ತದೆ.



ಪ್ರಾರ್ಥನಾಸಭೆಯಲ್ಲಿ ಗಾಂಧೀ

(ಶ್ರೀಮತಿ ಸುಮತಿ ಮುರಾರ್ಜಿ ಸಂಗ್ರಹದಿಂದ)

ಏಕೆಂದರೆ, ಸತ್ಯಶೋಧನೆಯ ಜೊತೆಯಲ್ಲಿ ತಪಸ್ಸು ಇದ್ದೇ ಇದೆ ಸ್ವಯಂ ದುಃಖವನ್ನು ಸೈರಿಸಬೇಕಾಗುತ್ತದೆ ಅದಕ್ಕಾಗಿ ಪ್ರಾಣ ಕೊಡಲೂ ಬೇಕಾಗುತ್ತದೆ ಆದುದರಿಂದ ಅದರಲ್ಲಿ ಸ್ವಾರ್ಥದ ಗಂಧ ಕೂಡ ಇರದು ಇಂಥ ನಿಸ್ವಾರ್ಥ ಶೋಧನೆಯನ್ನು ಮಾಡುತ್ತ ಇಂದಿಗೂ ಯಾರೂ ಕಟ್ಟಕಡೆಯವರೆಗೂ ತಪ್ಪು ದಾರಿಯಲ್ಲಿ ಹೋದುದಿಲ್ಲ ಸ್ವಲ್ಪ ತಪ್ಪು ದಾರಿ ತುಳಿದೊಡನೆಯೆ ಪೆಟ್ಟು ತಿಂದು, ನೇರಾದ ದಾರಿಗೆ ಬಂದು ಸೇರುತ್ತಾನೆ ಆದುದರಿಂದ ಸತ್ಯದ ಆರಾಧನೆ ನಿಜವಾದ ಭಕ್ತಿ ಅದು ಹರಿಯ ದಾರಿ ಅದರಲ್ಲಿ ಹೇಡಿತನಕ್ಕೆ ಸ್ಥಾನವಿಲ್ಲ, ಸೋಲೆಂಬುದಿಲ್ಲ ಸಾವನ್ನು ಬದುಕಾಗಿ ಮಾಡುವ, ಮೃತ್ಯುವನ್ನು ಅಮೃತದ ಹೊಸ್ತಿಲಾಗಿಸುವ ಮಂತ್ರ ಅದು

ಈಗ ನಾವು ಅಹಿಂಸೆಗೆ ತೀರಾ ಹತ್ತಿರ ಬಂದ ಹಾಗಾಯಿತು ಅದನ್ನು ಮುಂದಿನ ವಾರ ವಿಚಾರ ಮಾಡೋಣ

ಈ ಸಂದರ್ಭದಲ್ಲಿ ಹರಿಶ್ಚಂದ್ರ, ಪ್ರಹ್ಲಾದ, ರಾಮಚಂದ್ರ, ಇಮಾಂ ಹಸನ್, ಇಮಾಂ ಹುಸೇನ್ ಮುಂತಾದವರ ದೃಷ್ಟಾಂತ ವಿಚಾರಯೋಗ್ಯ. ಹುಡುಗರು–ಮುದುಕರು, ಗಂಡಸರು–ಹೆಂಗಸರು ನಾವೆಲ್ಲರೂ ಕುಳಿತಾಗ ನಡೆವಾಗ, ತಿನ್ನುವಾಗ ಕುಡಿವಾಗ, ಆಡುವಾಗ ಮಾಡುವಾಗ, ನಾವು ಮಾಡುವ ಎಲ್ಲದರಲ್ಲಿಯೂ ಸತ್ಯವನ್ನೇ ಅವಲಂಬಿಸಿದರೆ, ಹಾಗೆ ಮಾಡುಮಾಡುತ್ತ ನಿರ್ದೋಷ ಮರಣವನ್ನು ಪಡೆದು ಸತ್ಯದಲ್ಲಿಯೆ ಲೀನವಾದರೆ ಅದೆಷ್ಟು ಚೆನ್ನಾಗಿ ಇದ್ದೀತು ? ಸತ್ಯರೂಪಿ ಪರಮೇಶ್ವರ ನನಗಂತೂ ರತ್ನಚಿಂತಾಮಣಿಯಾಗಿ ಕಂಡಿದಾನೆ ಎಲ್ಲರಿಗೂ ಹಾಗೆಯೇ ಕಾಣಬರಲಿ

## ೨

## ಅಹಿಂಸೆ

ಮಂಗಳ ಪ್ರಭಾತ, ೨೯–೭–೧೯೩೦

ಸತ್ಯದ ದಾರಿ ಎಷ್ಟು ನೇರೋ ಅಷ್ಟು ಕಡಿದು ಅಹಿಂಸೆಯದೂ ಹಾಗೆಯೇ. ಕತ್ತಿಯ ಮೊನೆಯ ಮೇಲೆ ತೂಕ ತಪ್ಪದೆ ನಡೆಯುವಂತೆ, ಅಸಿಧಾರಾವ್ರತ ಸತ್ಯ–ಅಹಿಂಸೆಗಳ ಹಗ್ಗ ಅದಕ್ಕಿಂತ ನವುರು ಇದರ ಮೇಲೆ

ನಡೆಯಲು ಇನ್ನೂ ಬಹಳ ಹೆಚ್ಚು ಸಾವಧಾನ ಬೇಕು ಕೂದಲೆಳೆಯಷ್ಟು ತಪ್ಪಿತೋ ಧೊಪ್ಪೆಂದು ಕೆಳಗೆ ಬೀಳಬೇಕಾದುದೇ ಕ್ಷಣಕ್ಷಣವೂ ಸಾಧನೆ ಮಾಡಿದರೆಯೆ ಅದರ ದರ್ಶನ ಆಗಬಲ್ಲದು

ಸತ್ಯದ ಸಂಪೂರ್ಣ ದರ್ಶನ ಈ ಶರೀರಕ್ಕೆ ಸಂಭವವಿಲ್ಲ ನಮಗೆ ಅದರ ಕಲ್ಪನೆ ಮಾತ್ರ ಸಾಧ್ಯ ಈ ಕ್ಷಣಿಕ ದೇಹದ ಮೂಲಕ ಶಾಶ್ವತ ಧರ್ಮದ ಸಾಕ್ಷಾತ್ಕಾರ ಅಸಂಭವ ಆದುದರಿಂದ ಕಟ್ಟಕಡೆಗೆ ಶ್ರದ್ಧೆಯನ್ನೇ ಆಶ್ರಯಿಸ ಬೇಕು

ಈ ಸಾವುಗುಳಿ ಮೈಯ ಮೂಲಕ ಸಂಪೂರ್ಣ ಸತ್ಯದರ್ಶನ ಸಾಧ್ಯವಿಲ್ಲ ಎಂಬುದೇ ಪುರಾತನ ಜಿಜ್ಞಾಸುಗಳಿಗೆ ಅಹಿಂಸೆಯನ್ನು ತೋರಿಸಿಕೊಟ್ಟಿರಬೇಕು ಜಿಜ್ಞಾಸುವಿನ ಮುಂದೆ ಒಂದು ಪ್ರಶ್ನೆ ಬಂದು ನಿಂತಿತು ‘ ನನ್ನ ಸಾಧನಾ ಮಾರ್ಗದಲ್ಲಿ ಅಡ್ಡಬಂದು ನಿಲ್ಲುವ ಸಂಕಟಗಳನ್ನು ಸೈರಿಸಲೆ ? ಅದನ್ನು ನಿವಾ ರಿಸಲು ಮಾಡಬೇಕಾದ ನಾಶವನ್ನು ಮಾಡುತ್ತ ಮುಂಬರಿಯಲೆ ? ನಾಶ ಮಾಡಿದವನು ಮುಂಬರಿಯ, ಇದ್ದಲ್ಲಿಯೇ ಇರುತ್ತಾನೆ , ಆದರೆ ಸಂಕಟವನ್ನು ಸೈರಿಸಿದವನು ಮುಂಬರಿಯುತ್ತಾನೆ ಎಂದು ಜಿಜ್ಞಾಸುವಿಗೆ ಕಂಡುಬಂದಿತು ಮೊಟ್ಟಮೊದಲನೆಯ ಹಿಂಸಾಕಾರ್ಯದಲ್ಲಿಯೇ ಅವನಿಗೆ ತಿಳಿಯಿತು—ತಾನು ಯಾವ ಸತ್ಯವನ್ನು ಅರಸುತ್ತಿದಾನೋ ಆ ಸತ್ಯ ಹೊರಗಿಲ್ಲ, ತನ್ನೊಳಗೇ ಇದೆ. ಆದುದರಿಂದ ಅವನು ಹೆಚ್ಚು ಹೆಚ್ಚು ಹಿಂಸೆ ಮಾಡಿದಂತೆಲ್ಲ ಹೆಚ್ಚು ಹೆಚ್ಚು ಹಿಂದೆ ಬಿದ್ದ , ಸತ್ಯಕ್ಕೆ ಹೆಚ್ಚು ಹೆಚ್ಚು ದೂರವಾದ ಹೊರಗಿನ ಶತ್ರುವನ್ನು ಇದಿರಿಸಲು ಹೋಗಿ ಒಳಗಿನ ಶತ್ರುವನ್ನು ಮರೆತ

ಕಳ್ಳರು ನಮ್ಮನ್ನು ಪೀಡಿಸುತ್ತಾರೆ ನಮ್ಮ ರಕ್ಷಣೆಗೆಂದು ನಾವು ಅವರನ್ನು ದಂಡಿಸುತ್ತೇವೆ, ಶಿಕ್ಷಿಸುತ್ತೇವೆ ಅವರು ಅಲ್ಲಿಂದ ಓಡಿಹೋದಾರು. ಆದರೆ ಮತ್ತೊಂದು ಕಡೆ ಹೋಗಿ ಕನ್ನ ಕೊರೆದಾರು ಆ ಸ್ಥಳವೂ ನಮ್ಮದೇ, ಆ ಮನೆಯವನೂ ನಮ್ಮ ಹಾಗೆಯೆ ಇನ್ನೊಬ್ಬ ಮನುಷ್ಯ ಹೀಗೆ ಒಂದು ಕೊನೆಯಿಲ್ಲದ ಸುಳಿಗೆ ಸಿಗುತ್ತೇವೆ ಕಳ್ಳನಿಗೆ ಕಳ್ಳತನ ಒಂದು ಕಸಬು ಎಂಬ ಭಾವನೆ ಅದರಿಂದ ಕಳ್ಳರ ಕಾಟ ಹೆಚ್ಚುತ್ತದೆ, ತಗ್ಗದು ಕಟ್ಟಕಡೆಗೆ ಕಳ್ಳರನ್ನು ದಂಡಿಸುವುದಕ್ಕಿಂತ ಸೈರಿಸಿಕೊಳ್ಳುವುದೇ ಲೇಸು ಎನಿಸುತ್ತದೆ ಈ ಸೈರಣೆಯಿಂದ ಅವರಿಗೆ ಬುದ್ಧಿ ಬಂದರೂ ಬರಬಹುದು ನಮ್ಮ ಸೈರಣೆಯಿಂದ ನಮಗಾದರೂ

ಕಳ್ಳರು ಬೇರೆ, ನಾವು ಬೇರೆ ಅಲ್ಲ, ಅವರೂ ನಮ್ಮ ಬಳಗ, ಅವರೂ ನಮ್ಮ ಗೆಳೆಯರು, ಅವರನ್ನು ದಂಡಿಸಲಾಗದು ಎಂಬುದು ತಿಳಿಯುತ್ತದೆ ಆದರೆ ಸುಮ್ಮನೆ ಕಳ್ಳರ ಪೀಡೆಯನ್ನು ಸ್ಥೈರಿಸುತ್ತ ಹೋಗಲಾಗದು. ಅದು ಹೇಡಿತನ ವಾದೀತು ಇದರಿಂದ ಇನ್ನೊಂದು ವಿಶೇಷ ಧರ್ಮ ನಮಗೆ ಕಾಣಿಸಿಕೊಂಡಿತು ಕಳ್ಳರು ನಮ್ಮ ಅಣ್ಣತಮ್ಮಂದಿರು ಗೆಳೆಯರು ಎಂದಮೇಲೆ ಅವರಿಗೂ ಆ ಭಾವನೆ ಹುಟ್ಟುವಂತೆ ಮಾಡಬೇಕು. ಆದುದರಿಂದ ಅವರನ್ನು ಆತ್ಮೀಯ ರಾಗುವಂತೆ ಮಾಡಲು ಉಪಾಯವನ್ನು ಕಂಡುಹಿಡಿಯಬೇಕು ಆ ಕಷ್ಟವನ್ನೂ ಸ್ಥೈರಿಸಬೇಕು ಇದು ಅಹಿಂಸೆಯ ದಾರಿ ಎಡೆಬಿಡದೆ ದುಃಖವನ್ನು ಸ್ಥೈರಿಸ ಬೇಕಾದೀತು, ಕೊನೆಯಿಲ್ಲದ ತಾಳ್ಮೆಯನ್ನು ಕಲಿಯಬೇಕಾದೀತು—ಇದರಲ್ಲಿ ಈ ಎರಡು ಕೆಲಸ ನಡೆದರೆ ಕಡೆಗೆ ಕಳ್ಳ ತನ್ನ ಕೆಟ್ಟ ದಾರಿ ಬಿಡುತ್ತಾನೆ, ನಮಗೆ ಸತ್ಯದ ದರ್ಶನ ಹೆಚ್ಚು ಸ್ಪಷ್ಟವಾಗಿ ಆಗುತ್ತದೆ ನಾವು ಸ್ವಲ್ಪಸ್ವಲ್ಪವಾಗಿ ಲೋಕದ ಮೈತ್ರಿಯನ್ನು ಸಂಪಾದಿಸುತ್ತೇವೆ ಈಶ್ವರನ, ಸತ್ಯದ ಮಹಿಮೆ ಯನ್ನು ಹೆಚ್ಚು ಅರಿತುಕೊಳ್ಳುತ್ತೇವೆ ಸಂಕಟವನ್ನು ಸ್ಥೈರಿಸುತ್ತಿದ್ದರೂ ನಮ್ಮ ಶಾಂತಿ–ಸುಖ ಹೆಚ್ಚುತ್ತದೆ, ನಮ್ಮೊಳಗೆ ಧೈರ್ಯ–ಸಾಹಸ ಬೆಳೆಯುತ್ತದೆ, ಯಾವುದು ಶಾಶ್ವತ, ಯಾವುದು ಅಶಾಶ್ವತ ಎಂಬ ಭೇದ ನಮಗೆ ಹೆಚ್ಚು ನಿಚ್ಚಳವಾಗಿ ಕಾಣುತ್ತದೆ, ಕರ್ತವ್ಯ–ಅಕರ್ತವ್ಯ ವಿವೇಕ ಮೂಡುತ್ತದೆ. ನಮ್ಮ ಗರ್ವ ಕರಗಿ, ನಮ್ರತೆ ಹೆಚ್ಚುತ್ತದೆ ಪರಿಗ್ರಹಬುದ್ಧಿ ತನಗೆ ತಾನೇ ಕಡಮೆಯಾಗುತ್ತದೆ ನಮ್ಮೊಳಗಿನ ಕೊಳೆ–ಕೆಡಕು ದಿನೇ ದಿನೇ ಕಡಮೆ ಆಗುತ್ತದೆ

ಅಹಿಂಸೆ ಈಗ ನಾವು ನೋಡುತ್ತಿರುವಷ್ಟು ಸ್ಥೂಲವಸ್ತುವಲ್ಲ ಯಾವ ಪ್ರಾಣಿಯನ್ನೂ ಕೊಲ್ಲಬಾರದು ಹೊಡೆಯಬಾರದು ಎಂಬುದಂತೂ ಅಹಿಂಸೆಯೆ —ಅಹಿಂಸೆಯ ಒಂದು ಅಂಶ ಮಾತ್ರ, ಅಲ್ಪಾಂಶ ಕೆಟ್ಟ ವಿಚಾರವೇ ಹಿಂಸೆ, ದುಡುಕು, ಅವಸರ ಹಿಂಸೆ, ಸುಳ್ಳಾಡುವುದು ಹಿಂಸೆ, ದ್ವೇಷ ಹಿಂಸೆ, ಪರರಿಗೆ ಕೆಡಕನ್ನು ಬಯಸುವುದು ಹಿಂಸೆ. ಇಷ್ಟೇ ಅಲ್ಲ ಜಗತ್ತಿಗೆ ಬೇಕಾದುದನ್ನು ಕೊಟ್ಟುಬಿಡದೆ ನಾವು ತೆಗೆದಿಟ್ಟುಕೊಳ್ಳುವುದೂ ಹಿಂಸೆಯೇ. ಆದರೆ ದಿನವೂ ನಾವು ತಿನ್ನುವುದನ್ನೇ ಜಗತ್ತು ಬೇಡುತ್ತದೆ ನಾವು ನಿಂತಲ್ಲಿಯೇ ನೂರಾರು ಸೂಕ್ಷ್ಮ ಜೀವಿಗಳಿವೆ ನಮ್ಮ ಕಾಲಿನ ಕೆಳಗೆ ಸಿಕ್ಕಿ ಸತ್ತುಹೋಗುತ್ತವೆ

ಆ ಸ್ಥಳ ಅವುಗಳದು ಹೀಗಾದರೆ ನಾವೇನು ಮಾಡಬೇಕು ? ಆತ್ಮಹತ್ಯೆ ಮಾಡಿಕೊಳ್ಳೋಣವೆ? ಅದರಿಂದ ಪ್ರಯೋಜನವಿಲ್ಲ ನಮ್ಮ ಆತ್ಮ ಈ ಮೈಗೆ ಅಂಟಿಕೊಂಡಿರುವ ವರೆಗೆ ಒಂದು ಮೈ ಹೋದರೆ ಇನ್ನೊಂದು ಬರುತ್ತದೆ ನಮ್ಮ ವಿಚಾರದಲ್ಲಿ ಈ ದೇಹದ ಸಂಸರ್ಗ ತಪ್ಪಿದರೆ, ನಮಗೆ ಮೈಯ ಮೋಹ ಬಿಟ್ಟರೆ, ಮೈಯೂ ನಮ್ಮನ್ನು ಬಿಡುತ್ತದೆ ಈ ಮೋಹರಹಿತ ಸ್ವರೂಪವೇ ಸತ್ಯನಾರಾಯಣ ದುಡುಕಿನಿಂದ, ಗಡಿಬಿಡಿಯಿಂದ ಈ ದರ್ಶನ ಆಗದು ಈ ಮೈ ನಮ್ಮದಲ್ಲ ನಮಗೆ ಕೊಟ್ಟಿರುವ ಮುಡಿಪು ಅದನ್ನು ಆ ರೀತಿ ಉಪಯೋಗಿಸುತ್ತ ನಾವು ಮುಂಬರಿಯಬೇಕು ಹೀಗಾದರೆ ಒಂದಲ್ಲ ಒಂದು ದಿನ ನಾವು ಈ ದೇಹದಿಂದ ಬಿಡುಗಡೆಯಾದೇವು

ಅಹಿಂಸೆಯ ವಿನಾ ಸತ್ಯದ ಶೋಧನೆ ಅಸಂಭವ ಎಂಬುದು ಇಷ್ಟರಿಂದ ಸ್ಪಷ್ಟವಾಗಿರಬೇಕು ಅಹಿಂಸೆ–ಸತ್ಯಗಳು ಒಂದು ನಾಣ್ಯದ ಎರಡು ಬದಿಗಳಂತೆ, ಅಥವಾ ಎರಡೂ ಕಡೆಯೂ ಏನೂ ಗುರುತು ಮಾಡದ ನಯವಾದ ಚಕ್ರದಂತೆ ಅದರಲ್ಲಿ ಕೆಳಗೆ ಯಾವುದು, ಮೇಲೆ ಯಾವುದು ? ಎರಡೂ ಒಂದೇ ನವು ಆದರೂ ಅಹಿಂಸೆ ಸಾಧನ, ಸತ್ಯ ಗುರಿ. ಸಾಧನ ನಮ್ಮ ಕೈಯೊಳಗಿನದು ಅದರಿಂದಲೇ ಅಹಿಂಸೆ ಪರಮಧರ್ಮ ಎಂದದ್ದು ಸತ್ಯ ಪರಮೇಶ್ವರ ಸಾಧನದ ಚಿಂತೆ ನಮಗಿರಲಿ ಗುರಿಯ ದರ್ಶನ ಎಂದಾದರೊಂದು ದಿನ ಆದೀತು ಇಷ್ಟೊಂದು ನಿಶ್ಚಯವಾದರೆ ಜಗತ್ತನ್ನೆ ಗೆದ್ದ ಹಾಗೆ ನಮ್ಮ ದಾರಿಯಲ್ಲಿ ಎಷ್ಟೇ ಸಂಕಟ ಬರಲಿ, ಬಾಹ್ಯದೃಷ್ಟಿಯಿಂದ ನಮಗೆ ಎಷ್ಟೇ ಸೋಲಾದಂತೆ ಕಾಣಲಿ, ನಾವು ವಿಶ್ವಾಸ ಬಿಡದೆ ಒಂದೇ ಮಂತ್ರವನ್ನು ಜಪಿಸಬೇಕು : ಇರುವುದು ಸತ್ಯವೊಂದೇ, ಅದೊಂದೇ, ಅದೇ ಪರಮೇಶ್ವರ ಅದರ ಸಾಕ್ಷಾತ್ಕಾರಕ್ಕೆ ಒಂದೇ ದಾರಿ, ಒಂದೇ ಸಾಧನ—ಅಹಿಂಸೆ ಅದನ್ನು ಎಂದಿಗೂ ಬಿಡೆ. ಯಾವ ಸತ್ಯರೂಪಿ ಪರಮೇಶ್ವರನ ಹೆಸರಿನಲ್ಲಿ ಈ ಪ್ರತಿಜ್ಞೆ ಮಾಡಿದೇವೋ ಅವನೇ ಅದನ್ನು ಪಾಲಿಸುವ ಬಲವನ್ನು ಕೊಡಲಿ

## ೩

# ಬ್ರಹ್ಮಚರ್ಯ

ಮಂಗಳ ಪ್ರಭಾತ, ೫-೮-೧೯೩೦

ನಮ್ಮ ವ್ರತಗಳಲ್ಲಿ ಮೂರನೆಯದು ಬ್ರಹ್ಮಚರ್ಯ ವಾಸ್ತವವಾಗಿ ಎಲ್ಲಾ ವ್ರತಗಳೂ ಸತ್ಯದಿಂದಲೇ ಹುಟ್ಟಿಬಂದಿವೆ ಇವು ಇರುವುದೂ ಸತ್ಯವ್ರತಕ್ಕಾಗಿಯೇ ಸತ್ಯದ ಆಶ್ರಯ ಪಡೆದು ಸತ್ಯವನ್ನೇ ಉಪಾಸನೆ ಮಾಡುವವನು ಮತ್ತಾವುದನ್ನಾದರೂ ಆರಾಧಿಸಿದರೆ, ವ್ಯಭಿಚಾರಿಯಾದಂತೆ. ಹೀಗಿರುವಾಗ ವಿಕಾರದ ಆರಾಧನೆ ಮಾಡುವುದಾದರೂ ಹೇಗೆ? ಯಾರ ಸಮಸ್ತ ಕಾರ್ಯವೂ ಕೇವಲ ಸತ್ಯದರ್ಶನಕ್ಕಾಗಿಯೇ ಮೀಸಲೋ ಅವನು ಸಂಸಾರ ಮಾಡುತ್ತ, ಸಂತಾನ ಪಡೆಯುತ್ತ ಕಾಲ ಕಳೆಯಲು ಸಾಧ್ಯವೆ? ಭೋಗವಿಲಾಸಗಳ ಮೂಲಕ ಯಾರಿಗೂ ಸತ್ಯ ಪ್ರಾಪ್ತಿಯಾಗಿಲ್ಲ ಅಂಥ ಒಂದು ದೃಷ್ಟಾಂತ ಇಂದಿನವರೆಗೂ ಇಲ್ಲ

ಅಹಿಂಸೆಯ ಪಾಲನೆಯನ್ನು ತೆಗೆದುಕೊಂಡರೆ ಬ್ರಹ್ಮಚರ್ಯದ ಹೊರತು ಅಹಿಂಸೆಯ ಪೂರ್ಣಪಾಲನೆ ಸಾಧ್ಯವಲ್ಲ ಎಂಬುದು ತಿಳಿಯುತ್ತದೆ ಅಹಿಂಸೆ ಎಂದರೆ ಸರ್ವವ್ಯಾಪಿ ಪ್ರೇಮ ಒಬ್ಬ ಗಂಡಸು ಒಬ್ಬ ಹೆಂಗಸಿಗೆ, ಒಬ್ಬ ಹೆಂಗಸು ಒಬ್ಬ ಗಂಡಸಿಗೆ ತಮ್ಮ ಪ್ರೇಮವನ್ನೆಲ್ಲ ಧಾರೆಯೆರೆದರೆ ಉಳಿದವರಿಗೆ ನೀಡಲು ಅವರ ಬಳಿ ಉಳಿಯುವುದೇನು? ಅದರ ಅರ್ಥ ಇಷ್ಟೇ ತಾನೆ— 'ಮೊಟ್ಟಮೊದಲು ನಾವಿಬ್ಬರೂ, ಉಳಿದವರ ಮಾತು ಆಮೇಲೆ' ಪತಿವ್ರತೆಯಾದ ಹೆಂಗಸು ತನ್ನ ಗಂಡನಿಗಾಗಿ, ಪತ್ನೀವ್ರತನಾದ ಗಂಡಸು ತನ್ನ ಹೆಂಡತಿಗಾಗಿ ಸರ್ವಸ್ವವನ್ನೂ ಅರ್ಪಿಸಲು ಸಿದ್ಧರಾಗಿರುತ್ತಾರೆ ಎಂದರೆ ಇವರು ಸರ್ವವ್ಯಾಪಿ ಪ್ರೇಮವನ್ನು ಪಾಲಿಸಲಾರರು ಎಂದು ಸ್ಪಷ್ಟವಾಗುತ್ತದೆ ಇವರು ಇಡೀ ಸೃಷ್ಟಿಯನ್ನು ತಮ್ಮ ಕುಟುಂಬ ಎಂದು ತಿಳಿಯಲಾರರು ಇವರಿಗೆ ತಮ್ಮದು ಎಂಬ ಕುಟುಂಬ ಒಂದು ಇದೆಯಲ್ಲ! ಆ ಕುಟುಂಬ ಎಷ್ಟೆಷ್ಟು ಬೆಳೆದರೆ ಅಷ್ಟಷ್ಟು ಇವರಿಗೆ ಸರ್ವವ್ಯಾಪಿ ಪ್ರೇಮ ಕಡಮೆಯಾಗುತ್ತದೆ ಇಡೀ ಜಗತ್ತಿನಲ್ಲಿಯೆ ಇದು ನಮಗೆ ಕಾಣಬರುತ್ತಿದೆ ಆದುದರಿಂದ ಅಹಿಂಸಾವ್ರತವನ್ನು ಪಾಲಿಸುವವನು ಮದುವೆಯ ಬಂಧನಕ್ಕೆ ಸಿಗಲಾರ ಇನ್ನು ವಿವಾಹೇತರ ಭೋಗ ವಿಕಾರಗಳ ಮಾತೇನು ಬಂತು?

ಹಾಗಾದರೆ ಮದುವೆಯಾಗಿರುವವರ ಗತಿಯೇನು? ಅವರಿಗೆ ಸತ್ಯ ಸಾಕ್ಷಾತ್ಕಾರ ಆಗುವುದೇ ಇಲ್ಲವೆ? ಅವರು ಜಗತ್ತಿಗಾಗಿ ಸರ್ವಾರ್ಪಣಮಾಡಲು ಸಾಧ್ಯವೇ ಇಲ್ಲವೆ? ಅವರಿಗೂ ಒಂದು ದಾರಿಯಿದೆ ಮದುವೆಯಾದವರು ಮದುವೆಯಾಗದವರಂತೆ ನಡೆದುಕೊಂಡರಾಯಿತು ಈ ಸ್ಥಿತಿಯನ್ನು ಸವಿದವರು ಇದಕ್ಕೆ ಸಾಕ್ಷಿ ಹೇಳಬಲ್ಲರು ಅನೇಕರು ಈ ಪ್ರಯೋಗ ಮಾಡಿ ಸಫಲರಾಗಿದ್ದಾರೆ ವಿವಾಹಿತ ಸ್ತ್ರೀಪುರುಷರು ತಾವು ಪರಸ್ಪರ ಅಣ್ಣ–ತಂಗಿಯರೆಂದು ತಿಳಿದು ಅದರಂತೆ ನಡೆದರೆ ಎಲ್ಲಾ ತೊಂದರೆಯೂ ತಪ್ಪುತ್ತದೆ ಲೋಕಸೇವೆಗೆ ಅವರು ಬಿಡುವಾಗುತ್ತಾರೆ. ಈ ಜಗತ್ತಿನ ಹೆಂಗಸರೆಲ್ಲರೂ ಅಕ್ಕ ತಂಗಿಯರು, ತಾಯಂದಿರು, ಮಕ್ಕಳು ಎಂಬ ವಿಚಾರ ಒಮ್ಮೆ ಹೊಳೆಯಿತೋ ಒಡನೆಯೇ ಮನುಷ್ಯನನ್ನು ಮೇಲಕ್ಕೆ ಒಯ್ಯುತ್ತದೆ, ಬಂಧನಗಳನ್ನು ಕಡಿದು ಹಾಕುತ್ತದೆ ಇದರಿಂದ ಗಂಡಹೆಂಡಿರಿಗೆ ಆಗುವ ನಷ್ಟವೇನೂ ಇಲ್ಲ, ಲಾಭವೇ ಆಗುತ್ತದೆ ಅವರ ಬಂಡವಾಳ ಹೆಚ್ಚುತ್ತದೆ, ಅವರ ಕುಟುಂಬ ಬೆಳೆಯುತ್ತದೆ ವಿಕಾರವನ್ನು ತೊಳೆದುಹಾಕಿದುದರಿಂದ ಅವರ ಪ್ರೇಮ ಬಲವಾಗುತ್ತದೆ ಈ ವಿಕಾರ ಅಳಿದುಹೋದರೆ ಒಬ್ಬರಿಗೊಬ್ಬರು ಹೆಚ್ಚುಹೆಚ್ಚಾಗಿ ಸೇವೆ ಮಾಡಬಲ್ಲರು ಅವರ ನಡುವೆ ಜಗಳಕ್ಕೆ ಅವಕಾಶ ಕಡಮೆಯಾಗುತ್ತದೆ ಪ್ರೇಮ ಸ್ವಾರ್ಥದ್ದು, ಏಕಾಂಗಿಯಾದುದು ಆದರೆ ಅಲ್ಲಿ ಜಗಳವೂ ಹೆಚ್ಚು!

ಮೇಲೆ ಹೇಳಿದ ಪ್ರಧಾನ ವಿಚಾರ ಹೃದಯದಲ್ಲಿ ನಾಟಿದರೆ ಬ್ರಹ್ಮಚರ್ಯದಿಂದ ಆಗಬಹುದಾದ ಶಾರೀರಕ ಲಾಭ, ವೀರ್ಯರಕ್ಷಣೆ ಮೊದಲಾದುವು ಬಹಳ ಗೌಣವಾಗುತ್ತವೆ. ತಿಳಿದೂ ತಿಳಿದೂ ಭೋಗವಿಲಾಸಕ್ಕಾಗಿ ವೀರ್ಯವನ್ನು ನಾಶಮಾಡಿಕೊಳ್ಳುವುದು, ಶರೀರವನ್ನು ಹಿಂಡಿಹಾಕುವುದು ಎಂಥ ಮೂರ್ಖತನ? ವೀರ್ಯದ ಉಪಯೋಗ ಗಂಡ–ಹೆಂಡತಿ ಇಬ್ಬರ ಮಾನಸಿಕ, ಶಾರೀರಕ ಶಕ್ತಿಯನ್ನು ಬೆಳೆಸಲಿಕ್ಕೆ. ವಿಷಯಭೋಗದಲ್ಲಿ ಅದನ್ನು ಉಪಯೋಗಿಸುವುದು ಅತ್ಯಂತ ದುರುಪಯೋಗ ಇಂಥ ದುರುಪಯೋಗದಿಂದ ಅನೇಕ ರೋಗ ಹುಟ್ಟುತ್ತವೆ

ಎಲ್ಲಾ ವ್ರತಗಳಂತೆ ಬ್ರಹ್ಮಚರ್ಯವೂ ಕಾಯೇನ ವಾಚಾ ಮನಸಾ ಪಾಲಿಸಬೇಕಾದುದು. ಶರೀರವನ್ನು ಸ್ವಾಧೀನದಲ್ಲಿಟ್ಟುಕೊಂಡಂತೆ ಕಂಡರೂ, ಮನಸ್ಸಿನಲ್ಲಿ ವಿಕಾರವನ್ನು ಪೋಷಿಸುವ ಮನುಷ್ಯ ಮೂಢ–ಮಿಥ್ಯಾಚಾರಿ ಎಂದು

ಗೀತೆ ಹೇಳಿದೆ ಎಲ್ಲರಿಗೂ ಇದು ಅನುಭವವಾಗುತ್ತದೆ ಮನಸ್ಸಿನ ವಿಕಾರವನ್ನು ಹಾಗೆಯೇ ಇರಗೊಟ್ಟು, ಬರೀ ಮೈಯನ್ನು ದಂಡಿಸಿದರೆ ಬಹಳ ಹಾನಿಯಾಗ ಬಹುದು ಮನಸ್ಸು ಎಲ್ಲಿಗೆ ಹೋಗುತ್ತದೆಯೋ ಅಲ್ಲಿಗೆ ದೇಹವನ್ನೂ ಅದು ಸೆಳೆದೇ ಸೆಳೆಯುತ್ತದೆ, ತಪ್ಪಿದ್ದಲ್ಲ

ಇಲ್ಲಿ ಒಂದು ಭೇದವನ್ನು ಅರಿತುಕೊಳ್ಳುವುದು ಅಗತ್ಯ ಮನಸ್ಸನ್ನು ವಿಕಾರವಶ ಮಾಡುವುದು ಒಂದು ವಿಷಯ, ಮನಸ್ಸು ತಾನೇ ನಿಮ್ಮ ಇಷ್ಟವಿಲ್ಲ ದಿದ್ದರೂ ವಿಕಾರವಶವಾದರೆ ಅದು ಬೇರೆ ವಿಷಯ ಈ ವಿಕಾರದಲ್ಲಿ ನಾವು ಸಹಾಯ ಮಾಡದಿದ್ದರೆ ಕಟ್ಟಕಡೆಗೆ ನಮ್ಮದೇ ಗೆಲವು.

ನಮಗೆ ಗಳಿಗೆ ಗಳಿಗೆಯಲ್ಲಿಯೂ ಅನುಭವವಾಗುತ್ತದೆ—ಶರೀರವೇನೋ ಸ್ವಾಧೀನದಲ್ಲಿರುತ್ತದೆ, ಮನಸ್ಸು ಸ್ವಾಧೀನದಲ್ಲಿರದು ಆದುದರಿಂದ ಶರೀರವನ್ನು ಸ್ವಾಧೀನದಲ್ಲಿಟ್ಟುಕೊಂಡು ಮನಸ್ಸನ್ನೂ ವಶಪಡಿಸಿಕೊಳ್ಳುವ ಪ್ರಯತ್ನವನ್ನು ಸತತವೂ ಮಾಡಬೇಕು ಆಗ ನಾವು ನಮ್ಮ ಕರ್ತವ್ಯವನ್ನು ಮಾಡಿದಂತೆ. ನಾವು ಮನಸ್ಸಿಗೆ ಅಧೀನರಾದೆವೋ, ಶರೀರವೊಂದು ದಿಕ್ಕಿಗೆ ಮನಸ್ಸೊಂದು ದಿಕ್ಕಿಗೆ ಎಳೆಯುತ್ತವೆ ಮಿಥ್ಯಾಚಾರ ಮೊದಲಾಗುತ್ತದೆ ಆದರೆ ಮನೋ ವಿಕಾರವನ್ನು ನಿಗ್ರಹಿಸುತ್ತಿರುವವರೆಗೆ ಶರೀರ–ಮನಸ್ಸುಗಳೆರಡೂ ಜೊತೆಯಾಗಿ ಹೋಗುತ್ತವೆ ಎನ್ನಬಹುದು

ಬ್ರಹ್ಮಚರ್ಯವ್ರತದ ಪಾಲನೆ ಬಹಳ ಕಠಿನ, ಅಸಂಭವವೇ ಎಂದು ಅಭಿಪ್ರಾಯವಿದೆ ಇದಕ್ಕೆ ಕಾರಣವನ್ನು ಹುಡುಕುವಾಗ ಬ್ರಹ್ಮಚರ್ಯಕ್ಕೆ ಬಹಳ ಸಂಕುಚಿತ ಅರ್ಥ ಮಾಡಿಕೊಂಡಿದಾರೆ ಜನ ಎಂಬುದು ತಿಳಿಯುತ್ತದೆ ಜನನೇಂದ್ರಿಯವಿಕಾರವನ್ನು ವಿರೋಧಿಸುವುದೇ, ಅದೇ ಬ್ರಹ್ಮಚರ್ಯ ಎಂದು ತಿಳಿದಿದಾರೆ ಈ ಅರ್ಥ ಅಪೂರ್ಣ, ತಪ್ಪು ಸರ್ವೇಂದ್ರಿಯನಿರೋಧವೇ ಬ್ರಹ್ಮಚರ್ಯ ಉಳಿದೆಲ್ಲಾ ಇಂದ್ರಿಯಗಳನ್ನೂ ಸ್ವೇಚ್ಛೆಯಾಗಿ ವಿಹರಿಸಲು ಬಿಟ್ಟು ಇದೊಂದೇ ಇಂದ್ರಿಯವನ್ನು ನಿಗ್ರಹಿಸುವ ಪ್ರಯತ್ನ ಮಾಡಿದರೆ ಅದು ನಿಷ್ಫಲವಾಗುತ್ತದೆ ಇದರಲ್ಲಿ ಸಂದೇಹವಿಲ್ಲ. ಕಿವಿಯಿಂದ ವಿಕಾರದ ಮಾತನ್ನು ಕೇಳುವುದು, ಕಣ್ಣಿನಿಂದ ವಿಕಾರಜನಕ ದೃಶ್ಯಗಳನ್ನು ನೋಡುವುದು, ನಾಲಗೆ ಯಿಂದ ವಿಕಾರೋತ್ತೇಜಕ ವಸ್ತುಗಳನ್ನು ಸವಿಯುವುದು, ಕೈಗಳಿಂದ ವಿಕಾರ ವನ್ನು ಉದ್ರೇಕಿಸುವ ಪದಾರ್ಥಗಳನ್ನು ಮುಟ್ಟುವುದು — ಇಷ್ಟೆಲ್ಲ ಮಾಡಿ

ಜನನೇಂದ್ರಿಯವನ್ನು ನಿಗ್ರಹಿಸಲು ಯತ್ನಿಸುವುದು ಬೆಂಕಿಯಲ್ಲಿ ಕೈಯಿಟ್ಟು ಕೈ ಸುಡಬಾರದು ಎಂದ ಹಾಗೆ ಆದುದರಿಂದ ಒಂದನ್ನು ನಿಗ್ರಹಿಸಬಯಸುವವನು ಎಲ್ಲವನ್ನೂ ನಿಗ್ರಹಿಸಲು ಮೊದಲೇ ನಿಶ್ಚಯಿಸಬೇಕು. ಬ್ರಹ್ಮಚರ್ಯದ ಸಂಕುಚಿತ ಅರ್ಥದಿಂದ ಬಹಳ ಹಾನಿಯಾಗಿದೆಯೆಂದು ನನಗೆ ಯಾವಾಗಲೂ ಅನಿಸಿದೆ ಎಲ್ಲಾ ಇಂದ್ರಿಯಗಳನ್ನೂ ಒಂದೇ ಸಲ ವಶವಡಿಸಿಕೊಳ್ಳುವ ಅಭ್ಯಾಸ ಮಾಡಿದರೇನೇ ಸಫಲತೆ ಎಂದು ನನ್ನ ಅನುಭವ ಇದರಲ್ಲಿ ಮುಖ್ಯ ವಸ್ತು ನಾಲಗೆ ಆದುದರಿಂದ ನಾಲಗೆಯ ಸಂಯಮಕ್ಕೆ ಆಶ್ರಮದಲ್ಲಿ ಪ್ರತ್ಯೇಕ ಸ್ಥಾನವನ್ನು ಕೊಟ್ಟಿದೇವೆ

ಬ್ರಹ್ಮಚರ್ಯದ ಮೂಲಾರ್ಥವನ್ನು ನೆನಪಿನಲ್ಲಿಡೋಣ ಬ್ರಹ್ಮಚರ್ಯ ಎಂದರೆ ಬ್ರಹ್ಮನ ಅಥವಾ ಸತ್ಯದ ಶೋಧನೆಯ ಚರ್ಯೆ ಅದಕ್ಕೆ ಸಂಬಂಧಿಸಿದ ಆಚಾರ ಈ ಮೂಲಾರ್ಥದಿಂದ ಸರ್ವೇಂದ್ರಿಯಸಂಯಮದ ವಿಶೇಷಾರ್ಥ ಹುಟ್ಟುತ್ತದೆ ಕೇವಲ ಜನನೇಂದ್ರಿಯಸಂಯಮದ ಅಪೂರ್ಣ ಅರ್ಥವನ್ನು ನಾವು ಮರೆತೇಬಿಡಬೇಕು

## ೪

## ಅಸ್ವಾದ

ಮಂಗಳ ಪ್ರಭಾತ, ೧೨-೮-೧೯೩೦

ಅಸ್ವಾದವ್ರತಕ್ಕೂ ಬ್ರಹ್ಮಚರ್ಯಕ್ಕೂ ಬಹಳ ನಿಕಟ ಸಂಬಂಧ ಈ ವ್ರತವನ್ನು ಪಾಲಿಸಿದರೆ ಬ್ರಹ್ಮಚರ್ಯಪಾಲನೆ, ಎಂದರೆ ಜನನೇಂದ್ರಿಯ ಸಂಯಮ ಬಹಳ ಸುಲಭ, ಸಹಜ ಆಗುತ್ತದೆ ಇದು ನನ್ನ ಅನುಭವ ಆದರೆ ಸಾಧಾರಣವಾಗಿ ಈ ವ್ರತಕ್ಕೆ ಪ್ರತ್ಯೇಕವಾಗಿ ಸ್ಥಾನ ಕೊಡುವ ರೂಢಿ ಇಲ್ಲ ಮಹಾಮಹಾ ಮುನೀಶ್ವರರೂ ಈ ವ್ರತ ಸಾಧಿಸಲು ಆಗಲಿಲ್ಲವೆಂದು ಇದಕ್ಕೆ ಪ್ರತ್ಯೇಕ ಸ್ಥಾನ ಕೊಡದೆ ಬಿಟ್ಟಿರಬಹುದೆ? ಹೇಗಾದರೂ ಇರಲಿ, ನಾವೇನೋ ಆಶ್ರಮದಲ್ಲಿ ಈ ವ್ರತಕ್ಕೆ ಪ್ರತ್ಯೇಕ ಸ್ಥಾನವನ್ನು ಕೊಟ್ಟಿದೇವೆ ಆದುದರಿಂದ ಇದನ್ನು ಕುರಿತು ಸ್ವತಂತ್ರವಾಗಿ ವಿಚಾರಮಾಡೋಣ.

ಅ-ಸ್ವಾದದ ಅರ್ಥ: ಸ್ವಾದವನ್ನು ಎಂದರೆ ರುಚಿಯನ್ನು ಭೋಗಿಸ ಕೂಡದು ಔಷಧ ತೆಗೆದುಕೊಳ್ಳುವಾಗ ಅದು ರುಚಿಯಾಗಿದೆಯೆ ಇಲ್ಲವೆ ಎಂದು ನೋಡುತ್ತೇವೆಯೆ? ಶರೀರಕ್ಕೆ ಔಷಧ ಅಗತ್ಯ ಎಂದು, ಉಚಿತ ಪ್ರಮಾಣದಲ್ಲಿ ತೆಗೆದುಕೊಳ್ಳುತ್ತೇವೆ ಅನ್ನದ ವಿಷಯದಲ್ಲಿಯೂ ಹೀಗೇ ತಿಳಿಯಬೇಕು ನಾವು ತಿನ್ನುವ ಸಮಸ್ತ ಪದಾರ್ಥವೂ ಅನ್ನವೇ ಹಾಲು, ಹಣ್ಣು ಕೂಡ ಅನ್ನವೇ ಗೊತ್ತಾದ ಪ್ರಮಾಣಕ್ಕಿಂತ ಕಡಮೆ ತೆಗೆದುಕೊಂಡರೆ ಔಷಧದಿಂದ ಲಾಭವಾಗದು, ಹೆಚ್ಚು ತೆಗೆದುಕೊಂಡರೆ ಹಾನಿ ಅನ್ನವೂ ಹಾಗೆಯೇ ಆದುದರಿಂದ ಬರೀ ರುಚಿಗಾಗಿ ಏನನ್ನಾದರೂ ಸವಿಯುವುದು ವ್ರತಭಂಗ ರುಚಿಯಾದ ಪದಾರ್ಥವನ್ನು ಹೆಚ್ಚಾಗಿ ತೆಗೆದುಕೊಳ್ಳುವುದಂತೂ ಅನಾಯಾಸವಾಗಿ ವ್ರತಭಂಗವಾದಂತೆ ಇದರಿಂದ ಒಂದು ಮಾತು ತಿಳಿಯು ತ್ತದೆ. ಒಂದು ಪದಾರ್ಥದ ರುಚಿಯನ್ನು ಹೆಚ್ಚಿಸಲು, ಬದಲಿಸಲು ಅಥವಾ ಅದರ ನೀರಸತೆಯನ್ನು ಕಳೆಯಲು, ಅದರಲ್ಲಿ ಉಪ್ಪನ್ನು ಬೆರಸುವುದು ವ್ರತ ಭಂಗವೇ ಆದರೆ ಆರೋಗ್ಯಕ್ಕಾಗಿ ಇಂತಿಷ್ಟು ಪ್ರಮಾಣ ಉಪ್ಪು ಅನ್ನದಲ್ಲಿ ಇರಬೇಕು ಎಂದಾದರೆ, ಅಷ್ಟನ್ನು ಮಾತ್ರ ಅನ್ನಕ್ಕೆ ಬೆರಸಿದರೆ ಅದು ವ್ರತಭಂಗ ಅಲ್ಲ ಶರೀರಪೋಷಣೆಗೆ ಅಗತ್ಯವಿಲ್ಲದಿದ್ದರೂ ಮನಸ್ಸಿಗೆ ಮೋಸ ಮಾಡಲು ಹಾಗೆಂದುಕೊಂಡು ಯಾವ ಪದಾರ್ಥವನ್ನು ಹೆಚ್ಚಾಗಿ ತೆಗೆದುಕೊಂಡರೂ ಅದು ಮಿಥ್ಯಾಚಾರ ಎನ್ನಬೇಕು

ಈ ದೃಷ್ಟಿಯಿಂದ ವಿಚಾರಮಾಡಿದರೆ, ನಾವು ತಿನ್ನುತ್ತಿರುವ ಅನೇಕ ಪದಾರ್ಥಗಳು ಶರೀರ ರಕ್ಷಣೆಗೆ ಅಗತ್ಯವಲ್ಲ ಆದುದರಿಂದ ಅವು ತ್ಯಾಜ್ಯ ಎಂಬುದು ತಿಳಿದುಬರುತ್ತದೆ ಈ ಪ್ರಕಾರ ಯಾರು ಅನೇಕ ಪದಾರ್ಥಗಳನ್ನು ತ್ಯಾಜ್ಯ ಎಂದು ಬಿಟ್ಟುಬಿಡುತ್ತಾನೋ ಅವನಿಗೆ ಸಹಜವಾಗಿಯೆ ಇಂದ್ರಿಯ ವಿಕಾರಗಳು ಶಾಂತವಾಗುತ್ತವೆ 'ನಾಲಗೆ ನಂಬಿ ನರ ಕೆಟ್ಟ', 'ಹೊಟ್ಟೆ— ನಿನ್ನಿಂದ ನಾ ಕೆಟ್ಟೆ'—ಈ ಗಾದೆಗಳಲ್ಲಿ ಬಹಳ ಅರ್ಥವಿದೆ ಈ ವಿಷಯಕ್ಕೆ ನಾವು ಗಮನವನ್ನೇ ಕೊಟ್ಟಿಲ್ಲ ಆದರಿಂದಾಗಿ ಈ ವ್ರತದ ದೃಷ್ಟಿಯಿಂದ ಆಹಾರವನ್ನು ನಿಶ್ಚಯಿಸುವುದು ಬಹಳ ಕಠಿನವಾಗಿದೆ

ಮಕ್ಕಳನ್ನು ಮುದ್ದುಮಾಡುವ ಭರದಲ್ಲಿ ತಂದೆತಾಯಿಗಳು ನಾನಾ ಬಗೆಯ ರುಚಿರುಚಿಯಾದ ತಿಂಡಿ ತಿನ್ನಿಸಿ ಅವರ ದೇಹವನ್ನು ಕೆಡಿಸುತ್ತಾರೆ.

ನಾಲಗೆಗೆ ಅವರು ತಿಂಡಿಪೋತತನವನ್ನು ಕಲಿಸುತ್ತಾರೆ. ಮಕ್ಕಳು ಬೆಳೆದು ದೊಡ್ಡವರಾದಾಗ ಅವರ ಮೈ ರೋಗಗ್ರಸ್ತ, ರುಚಿವಿಕಾರಮಯ ಆಗುತ್ತದೆ ಚಿಕ್ಕಂದಿನಲ್ಲಿ ಹೀಗೆ ಮೇರೆ ತಪ್ಪಿದುದರ ಕಹಿಯಾದ ಫಲವನ್ನು ಹೆಜ್ಜೆಹೆಜ್ಜೆಗೂ ಅನುಭವಿಸಬೇಕಾಗುತ್ತದೆ ವೈದ್ಯರಿಗೆ ಮದ್ದಿಗೆ ಹಣ ಸುರಿಯಬೇಕಾಗುತ್ತದೆ ಎಷ್ಟೋ ಹಣ ಹಾಳಾಗುತ್ತದೆ.

ಶರೀರವನ್ನೂ ಇಂದ್ರಿಯಗಳನ್ನೂ ವಶದಲ್ಲಿಟ್ಟುಕೊಳ್ಳುವ ಬದಲು ನಾವೇ ಅವುಗಳ ಗುಲಾಮರಾಗಿ ಹೆಳವರಂತೆ ಆಗುತ್ತೇವೆ ಈ ಜಗತ್ತಿನಲ್ಲಿ ಒಬ್ಬ ನಾದರೂ ನಿರೋಗಿ ಮನುಷ್ಯನನ್ನು ನಾನು ಕಂಡಿಲ್ಲ ಎಂದು ಒಬ್ಬ ಅನುಭವಸ್ಥ ವೈದ್ಯ ಒಮ್ಮೆ ಹೇಳಿದ್ದ ಸ್ವಾದದ—ರುಚಿಯ ಸುಳಿಗೆ ಎಳ್ಳಿನಷ್ಟಾದರೂ ಬಿದ್ದೆವೋ ಶರೀರ ಕೆಡುತ್ತದೆ. ಆ ಗಳಿಗೆಯಲ್ಲಿಯೆ ಆ ಮೈಗೆ ಉಪವಾಸ ಅಗತ್ಯವಾಯಿತು. ಅದೊಂದರಿಂದಲೇ ಮೈಯನ್ನು ಅಲ್ಪಸ್ವಲ್ಪ ಸರಿಪಡಿಸಲು ಸಾಧ್ಯ.

ಈ ವಿಚಾರಸರಣಿಯನ್ನು ಓದಿ ಯಾರೂ ಗಾಬರಿಯಾಗಬಾರದು ಅ-ಸ್ವಾದ ಎಷ್ಟು ಕಷ್ಟತರ ವ್ರತ ಎಂದು ಬೆದರಿ ವ್ರತ ತೊಡುವುದನ್ನೇ ಬಿಡಬೇಕಾದುದಿಲ್ಲ ಯಾವುದಾದರೂ ವ್ರತವನ್ನು ತೊಟ್ಟರೆ, ಆ ಗಳಿಗೆಯಿಂದಲೆ ನಮಗೆ ಆ ವ್ರತವನ್ನು ಪೂರ್ಣವಾಗಿ ಪಾಲನೆಮಾಡಲು ಶಕ್ತಿಯಿದೆ ಎಂದು ಅರ್ಥವಲ್ಲ. ಆ ವ್ರತವನ್ನು ಪಾಲಿಸಲು ಕಾಯಾ ವಾಚಾ ಮನಸಾ ದೃಢವಾಗಿ ಸಾಯುವವರೆಗೂ ಪ್ರಯತ್ನ ಮಾಡುತ್ತೇವೆ ಎಂದರ್ಥ ಒಂದು ವ್ರತ ಕಠಿನ ಎಂದು ಅದರ ಪರಿಭಾಷೆಯನ್ನು ಸಡಿಲಮಾಡಿ ಆತ್ಮವಂಚನೆ ಮಾಡಿಕೊಳ್ಳ ಬಾರದು ನಮ್ಮ ಅನುಕೂಲತೆಗಾಗಿ ಆದರ್ಶವನ್ನು ಕೆಳಗೆ ನೂಕುವುದು ಅಸತ್ಯ, ಆತ್ಮಪತನ. ಆದರ್ಶವನ್ನು ಅರಿತುಕೊಂಡು, ಅದು ಎಷ್ಟೇ ಕಠಿನವಾಗಿರಲಿ, ಅದನ್ನು ಸಾಧಿಸಲು ಮನಸಾರೆ ಪ್ರಯತ್ನಿಸುವುದೇ ಪರಮ ಅರ್ಥ, ಪುರುಷಾರ್ಥ ಪುರುಷ ಎಂದರೆ ಮನುಷ್ಯ ಎಂದಷ್ಟೇ ಅಲ್ಲ. ಪುರ ಎಂದರೆ ಮೈ, ಈ ಮೈಯಲ್ಲಿ ಇರುವವನು ಪುರುಷ. ಯಾರು ತ್ರಿಕಾಲದಲ್ಲಿಯೂ ಈ ಮಹಾವ್ರತಗಳನ್ನು ಸಂಪೂರ್ಣವಾಗಿ ಪಾಲಿಸುತ್ತಾನೋ ಅವನಿಗೆ ಈ ಲೋಕದಲ್ಲಿ ಮಾಡಬೇಕಾದು ದೇನೂ ಇಲ್ಲ, ಅವನು ಮುಕ್ತ, ಭಗವಂತ. ನಾವು ಅಲ್ಪರು, ಮುಮುಕ್ಷು, ಜಿಜ್ಞಾಸು, ಸತ್ಯಾಗ್ರಹಿಗಳು, ಸತ್ಯಶೋಧಕರು. ಆದುದರಿಂದ ಗೀತೆಯಲ್ಲಿ

ಹೇಳಿದಂತೆ, ಕ್ರಮಕ್ರಮವಾಗಿ ಅಭ್ಯಾಸ ಮಾಡುತ್ತಲೇ ಇರಬೇಕು ಹಾಗೆ ಸದಾ ಪ್ರಯತ್ನಶೀಲರಾಗಿದ್ದರೆ ಒಂದು ದಿನ ಭಗವಂತನ ಅನುಗ್ರಹಕ್ಕೆ ಪಾತ್ರ ರಾಗುತ್ತೇವೆ ಆಗ ನಮ್ಮ ರಾಗ–ರುಚಿ ಎಲ್ಲವೂ ಸುಟ್ಟು ಬೂದಿಯಾಗುತ್ತವೆ.

ಇಪ್ಪತ್ತುನಾಲ್ಕು ಗಂಟೆಯೂ ನಾವು ಆಹಾರದ ಯೋಚನೆ ಮಾಡುತ್ತಲೇ ಇರಬಾರದು ಸದಾ ಸಾವಧಾನ, ಎಚ್ಚರ ಇದ್ದರಾಯಿತು, ಬಹಳ ಅಗತ್ಯ ಅದರಿಂದ ಬಹುಬೇಗ ನಾವು ರುಚಿಯ ಸುಳಿಗೆ ಯಾವಾಗ ಬಿದ್ದೆವೋ, ಶರೀರ ಪೋಷಣೆಗಾಗಿಯೆ ಯಾವಾಗ ತಿನ್ನುತ್ತೇವೋ ತಿಳಿಯುತ್ತದೆ ಇದು ತಿಳಿದ ಮೇಲೆ ದೃಢನಿಶ್ಚಯದಿಂದ ರುಚಿಗಾಗಿ ತಿನ್ನುವುದನ್ನು ನಿಲ್ಲಿಸಬೇಕು ಈ ನಿಟ್ಟಿ ನಿಂದ ಆಲೋಚಿಸಿದರೆ ಅಸ್ವಾದ ದೃಷ್ಟಿಯಿಂದ ಸಾಮೂಹಿಕ ಭೋಜನಶಾಲೆ ನಮಗೆ ಬಹಳ ಸಹಾಯಕವಾಗುತ್ತದೆ ಇವೊತ್ತು ಏನು ಅಡಿಗೆ ಮಾಡಬೇಕು, ಏನು ತಿನ್ನಬೇಕು ಎಂಬ ಯೋಚನೆ ಇಲ್ಲದಾಗುತ್ತದೆ ಎಲೆಯಲ್ಲಿ ಬಡಿಸಿದುದು ಭಗವಂತನ ಕರುಣೆಯೆಂದು ತಿಳಿದು ಸಂತೋಷದಿಂದ ನಮ್ಮ ಮೈಗೆ ಎಷ್ಟು ಬೇಕೋ ಅಷ್ಟನ್ನೆ ತೆಗೆದುಕೊಳ್ಳಬೇಕು—ಹೀಗೆ ಮಾಡಿದರೆ ಅನಾಯಾಸವಾಗಿ ಅಸ್ವಾದವ್ರತ ಪಾಲನೆಯಾಗುತ್ತದೆ ಸಾಮೂಹಿಕ ಭೋಜನ ಶಾಲೆಯ ಯಜಮಾನ ನಮ್ಮ ಭಾರವನ್ನು ಹಗುರಮಾಡುತ್ತಾನೆ ನಮ್ಮ ವ್ರತರಕ್ಷಕ ನಾಗುತ್ತಾನೆ ರುಚಿಗಾಗಿ ಅಡಿಗೆ ಮಾಡದೆ, ಶರೀರಪೋಷಣೆಗಾಗಿ ಮಾತ್ರವೇ ಅಡಿಗೆ ಮಾಡುತ್ತಾನೆ ಆದರ್ಶಸ್ಥಿತಿಯಲ್ಲಿ ನಿಜವಾಗಿ ಬೆಂಕಿಯೇ ಬೇಡ, ಸಹಸ್ರಾಗ್ನಿಯಾದ ಸೂರ್ಯಕಿರಣಗಳಿಗೆ ಪಕ್ವವಾದ ಆಹಾರವೇ ಸರಿ ನಿಜವಾಗಿ ನೋಡಿದರೆ ಮನುಷ್ಯ ಕೇವಲ ಫಲಾಹಾರಿ ಪ್ರಾಣಿ ಆದರೆ ಇದು ಬಹಳ ಆಳವಾದ ಮಾತಾಯಿತು ಈಗ ಅದು ಬೇಡ ಅಸ್ವಾದ ಎಂದರೇನು, ಅದನ್ನು ಪಾಲಿಸಲು ಏನು ಅಡಚಣೆಗಳಿವೆ, ಬ್ರಹ್ಮಚರ್ಯಪಾಲನೆಗೂ ಅದಕ್ಕೂ ಎಷ್ಟು ನಿಕಟ ಸಂಬಂಧವಿದೆ ಎಂಬುವನ್ನು ತಿಳಿದುಕೊಂಡರೆ ಸಾಕು ತಿಳಿದು ಕೊಂಡು ಯಥಾಶಕ್ತಿ ಈ ವ್ರತದ ಪಾಲನೆ ಮಾಡಬೇಕು.

## ೫

# ಅಸ್ತೇಯ

ಮಂಗಳ ಪ್ರಭಾತ, ೧೬-೯-೧೯೩೦

ಈಗ ಅಸ್ತೇಯವ್ರತ ಹಿಂದಿನ ಎರಡು ವ್ರತಗಳಂತೆ ಇದೂ ಸತ್ಯ-ಅಹಿಂಸೆ ಅಥವಾ ಸತ್ಯದ ಗರ್ಭದಲ್ಲಿಯೆ ಅಡಗಿದೆ *

ಸತ್ಯದಿಂದ ಅಹಿಂಸೆ ಹುಟ್ಟೀತು ಎನ್ನಬೇಕು ಇಲ್ಲವೆ ಅವೆರಡೂ ಜೊತೆ ಎನ್ನಬೇಕು ಎರಡೂ ಒಂದೇ ವಸ್ತು ಆದರೂ ನನ್ನ ಮನಸ್ಸು ಸತ್ಯದ ಕಡೆಗೇ ಕಟ್ಟಕಡೆಗಂತೂ ಎರಡೂ ಇಲ್ಲ, ದ್ವಂದ್ವಕ್ಕೆ ಅತೀತ ಪರಮ ಸತ್ಯ ಒಂಟಿಯಾಗಿಯೇ ನಿಲ್ಲುತ್ತದೆ ಸತ್ಯ ಗುರಿ—ಅಹಿಂಸೆ ದಾರಿ ಅದರ ಪಾಲನೆ ಕಠಿನವಾದರೂ ಅಹಿಂಸೆ ಎಂದರೇನೋ ನಮಗೆ ಗೊತ್ತಿದೆ ಆದರೆ ಸತ್ಯದ ಅಂಶ ಮಾತ್ರವೆ ನಮಗೆ ಗೊತ್ತು ಸತ್ಯದ ಸಂಪೂರ್ಣ ಜ್ಞಾನವೂ ದೇಹಧಾರಿಗೆ ಬಹಳ ಕಠಿನ, ಅಹಿಂಸೆಯ ಸಂಪೂರ್ಣ ಪಾಲನೆಯೂ ಕಠಿನ

ಅಸ್ತೇಯ ಎಂದರೆ ಕದಿಯದಿರುವುದು ಕಳ್ಳತನ ಮಾಡುವವನಿಗೆ ಸತ್ಯ ಗೊತ್ತಿದೆ, ಅವನು ಅಹಿಂಸೆಯನ್ನು ಪಾಲಿಸಬಲ್ಲ ಎಂಬುದು ಸಾಧ್ಯವಿಲ್ಲ ಆದರೂ ನಾವೆಲ್ಲರೂ ತಿಳಿದೋ ತಿಳಿಯದೆಯೋ ಸ್ವಲ್ಪ ಕಳ್ಳತನದ ದೋಷಕ್ಕೆ ಗುರಿಯಾಗುತ್ತೇವೆ ಪರರ ಒಡವೆಯನ್ನು ಅವರ ಅಪ್ಪಣೆಯಿಲ್ಲದೆ ತೆಗೆದುಕೊಳ್ಳುವುದು ಕಳ್ಳತನ ತನ್ನದು ಎಂಬ ಪದಾರ್ಥವನ್ನೂ ಮನುಷ್ಯ ಕದಿಯುತ್ತಾನೆ. ತನ್ನ ಮಕ್ಕಳಿಗೆ ಗೊತ್ತಾಗದಂತೆ ಮರೆಯಾಗಿ ಗುಟ್ಟಾಗಿ ಒಬ್ಬ ತಂದೆ

---

* ಹೀಗೆ ಅದನ್ನು ತೋರಿಸಬಹುದು :



ಒಂದು ಪದಾರ್ಥವನ್ನು ತಿನ್ನುತ್ತಾನೆ. ಆಶ್ರಮದ ಉಗ್ರಾಣ ಎಲ್ಲರಿಗೂ ಸೇರಿದುದು. ಆದರೆ ಅದರೊಳಗಿಂದ ಒಂದು ಅಚ್ಚು ಬೆಲ್ಲವನ್ನು ಗುಟ್ಟಾಗಿ ಯಾರಾದರೂ ತೆಗೆದಿಟ್ಟುಕೊಂಡರೆ ಅವನು ಕಳ್ಳ ಒಬ್ಬ ಹುಡುಗ ಇನ್ನೊಬ್ಬನ ಲೇಖನಿಯನ್ನು ತೆಗೆದಿಟ್ಟುಕೊಂಡರೆ ಅವನು ಕಳವು ಮಾಡಿದ ಯಾರ ಪದಾರ್ಥವನ್ನಾದರೂ, ಅವರಿಗೆ ಗೊತ್ತಾಗಿದ್ದರೂ ಅವರ ಅಪ್ಪಣೆಯಿಲ್ಲದೆ ನಾವು ತೆಗೆದುಕೊಂಡರೆ ಅದು ಕಳ್ಳತನ ಒಂದು ಪದಾರ್ಥವನ್ನು ಇದು ಯಾರದೂ ಅಲ್ಲ ಎಂದು ನಾವು ತೆಗೆದುಕೊಳ್ಳುವುದೂ ಕಳವೇ ದಾರಿಯಲ್ಲಿ ಬಿದ್ದಿರುವ ಪದಾರ್ಥಕ್ಕೆ ನಾವು ಒಡೆಯರಲ್ಲ, ಸರಕಾರ ಆಶ್ರಮದ ಸುತ್ತ ಏನಾದರೂ ದೊರೆತರೆ ಅದನ್ನು ಆಶ್ರಮದ ಕಾರ್ಯದರ್ಶಿಗೆ ಒಪ್ಪಿಸಬೇಕು ಅದು ಆಶ್ರಮದ್ದಲ್ಲ ದಿದ್ದರೆ ಆತ ಅದನ್ನು ಪೋಲೀಸರಿಗೆ ಒಪ್ಪಿಸುತ್ತಾನೆ

ಇಲ್ಲಿಯವರೆಗೆ ಎಲ್ಲವನ್ನೂ ಸಹಜವಾಗಿ ತಿಳಿದುಕೊಳ್ಳಬಹುದು ಆದರೆ ಅಸ್ತೇಯ ಇದಕ್ಕಿಂತ ಬಹಳ ಮುಂದೆ ಹೋಗಿದೆ ಒಬ್ಬರಿಂದ ಒಂದು ಪದಾರ್ಥವನ್ನು ಕೇಳಿಯೆ ತೆಗೆದುಕೊಂಡರೂ ಅದು ನಮಗೆ ಅಗತ್ಯವಲ್ಲದು ದಾದರೆ ಕಳ್ಳತನ ಅನಾವಶ್ಯಕವಾದ ವಸ್ತು ಒಂದನ್ನೂ ತೆಗೆದುಕೊಳ್ಳಬಾರದು ಆಹಾರದ ವಿಷಯದಲ್ಲಿ ಈ ಬಗೆಯ ಕಳ್ಳತನ ಹೆಚ್ಚು ನನಗೆ ಒಂದು ಹಣ್ಣು ಅಗತ್ಯವಿಲ್ಲ ಆದರೂ ಅದನ್ನು ತೆಗೆದುಕೊಳ್ಳುತ್ತೇನೆ ಅಥವಾ ನನಗೆ ಬೇಕಾ ದುದಕ್ಕಿಂತ ಹೆಚ್ಚು ತೆಗೆದುಕೊಳ್ಳುತ್ತೇನೆ ಅದು ಕಳ್ಳತನ ತನಗೆ ಎಷ್ಟು ಬೇಕು ಎಂಬುದು ಮನುಷ್ಯನಿಗೆ ಯಾವಾಗಲೂ ಗೊತ್ತಿಲ್ಲ ನಾವೆಲ್ಲರೂ ಪ್ರಾಯಶಃ ನಮಗೆ ಬೇಕಾದುದಕ್ಕಿಂತ ಹೆಚ್ಚಾಗಿಯೇ ತೆಗೆದುಕೊಳ್ಳುತ್ತೇವೆ ಹೆಚ್ಚು ಅಗತ್ಯವನ್ನು ಹುಟ್ಟಿಸುತ್ತೇವೆ ಅದರಿಂದ ಕಳ್ಳರಾಗುತ್ತೇವೆ ವಿಚಾರ ಮಾಡಿದರೆ ನಮ್ಮ ಆವಶ್ಯಕತೆಗಳನ್ನು ಎಷ್ಟನ್ನೋ ಬಿಡಬಹುದು ಅಸ್ತೇಯ ವ್ರತವನ್ನು ಪಾಲಿಸುವವನು ಕ್ರಮೇಣ ತನ್ನ ಆವಶ್ಯಕತೆಗಳನ್ನು ತಗ್ಗಿಸುತ್ತಾನೆ ಜಗತ್ತಿನಲ್ಲಿರುವ ಬಡತನ ಹೆಚ್ಚು ಭಾಗ ಅಸ್ತೇಯವ್ರತಭಂಗದಿಂದಲೇ ಬಂದಿದೆ.

ಮೇಲೆ ಹೇಳಿದುದೆಲ್ಲ ಶಾರೀರಕ ಅಥವಾ ಹೊರಗಣ ಕಳ್ಳತನ. ಇದ ಕ್ಕಿಂತ ಸೂಕ್ಷ್ಮವಾದ, ಆತ್ಮವನ್ನು ಕೆಳಗೆ ಉರುಳಿಸುವ ಕಳ್ಳತನವೂ ಇದೆ— ಮಾನಸಿಕವಾದುದು ಪರರ ವಸ್ತುವನ್ನು ನಾವು ಪಡೆಯಬೇಕೆಂಬ ಬಯಕೆಯೆ, ಅದನ್ನು ಆಸೆಗಣ್ಣಿನಿಂದ ನೋಡುವುದೇ ಕಳ್ಳತನ. ಉಪವಾಸ ಮಾಡುವವನು

ಬಾಯಿಂದ ಏನೂ ತಿನ್ನ  ಆದರೆ ಇತರರು ತಿನ್ನುವುದನ್ನು ನೋಡಿ ಒಳಗೇ ರುಚಿಯನ್ನು ಸವಿದರೆ ಅವನು ಕಳವು ಮಾಡಿದ, ತನ್ನ ಉಪವಾಸವ್ರತ ಭಂಗ ಮಾಡಿದ  ಉಪವಾಸ ಮುಗಿದಮೇಲೆ ಪಾರಣೆಗೆ ಏನು ಊಟಮಾಡಬೇಕು ಎಂದು ಯೋಚಿಸುವ ಉಪವಾಸಿ ವ್ರತಭಂಗವನ್ನೂ ಮಾಡಿದ, ಕಳವನ್ನೂ ಮಾಡಿದ ಎನ್ನಬೇಕು.

ಅಸ್ತೇಯವ್ರತ ಪಾಲನೆ ಮಾಡುವವನು ಮುಂದೆ ಲಭಿಸಬಹುದಾದ ಪದಾರ್ಥಗಳ ಚಿಂತೆ ಮಾಡ.  ಈ ಭವಿಷ್ಯದ ಆಸೆಯೇ ಅನೇಕ ಕಳ್ಳತನಗಳ ಬೀಜ. ಇಂದು ಬರೀ ವಿಚಾರ, ನಾಳೆ ಆ ಪದಾರ್ಥವನ್ನು ಗಳಿಸುವ ಪ್ರಯತ್ನ ಅದಕ್ಕಾಗಿ ಒಳ್ಳೆಯದು, ಕೆಟ್ಟದು ಎಲ್ಲಾ ದಾರಿಯೂ ಸರಿಯಾಗಿಯೇ ಕಾಣುತ್ತದೆ.

ಪದಾರ್ಥಗಳ ಕಳ್ಳತನವಿದ್ದಂತೆ ವಿಚಾರದ ಕಳವೂ ಇದೆ.  ತನ್ನ ಮನಸ್ಸಿನಲ್ಲಿಯೆ ಉತ್ತಮ ವಿಚಾರವೊಂದು ಹುಟ್ಟದಿದ್ದರೂ ಅಹಂಕಾರದಿಂದ ಇದು ನನ್ನ ವಿಚಾರ ಎನ್ನುವವನು ವಿಚಾರಗಳ್ಳ.  ಲೋಕದಲ್ಲಿ ಇಂಥ ಕಳವನ್ನು ಅನೇಕ ಜನ ವಿದ್ವಾಂಸರೂ ಮಾಡಿದಾರೆ.  ಈಗಲೂ ಈ ವಿಚಾರಚೌರ್ಯ ಕಡಮೆಯಿಲ್ಲ  ಆಂಧ್ರದೇಶದಲ್ಲಿ ನಾನೊಂದು ಹೊಸ ಮಾದರಿ ರಾಟೆಯನ್ನು ನೋಡಿದೆ ಎನ್ನಿ  ಅದು ನಾನೇ ಕಂಡುಹಿಡಿದುದು ಎಂದು ಆಶ್ರಮದಲ್ಲಿ ಅದನ್ನು ಮಾಡಿಸತೊಡಗಿದರೆ ಅದು ಕಳ್ಳತನ.  ನಾನು ಅಸತ್ಯವನ್ನು ಹಿಡಿದೆ.

ಆದುದರಿಂದ ಅಸ್ತೇಯವ್ರತವನ್ನು ಪಾಲಿಸುವವನು ಬಹಳ ನಮ್ರ, ಬಹಳ ವಿಚಾರಶೀಲ, ಬಹಳ ಸಾವಧಾನಿ, ಬಹಳ ಸರಳ ಆಗಿರಬೇಕು.

೬

# ಅಪರಿಗ್ರಹ

ಮಂಗಳ ಪ್ರಭಾತ, ೨೬–೮–೧೯೩೦

ಅಪರಿಗ್ರಹ ಅಸ್ತೇಯಕ್ಕೇ ಸಂಬಂಧಿಸಿದುದು.  ನಿಜವಾಗಿ ಕದ್ದ ಪದಾರ್ಥ ವಲ್ಲದಿದ್ದರೂ ಅನಗತ್ಯವಾಗಿ ಸಂಗ್ರಹಿಸಿಟ್ಟುಕೊಂಡರೆ ಅದು ಕಳವು ಪದಾರ್ಥದ

ಹಾಗೆಯೇ ಪರಿಗ್ರಹ ಎಂದರೆ ಭವಿಷ್ಯಕ್ಕಾಗಿ ಕೂಡಿಸಿಡುವುದು ಸತ್ಯಶೋಧಕ, ಅಹಿಂಸಕ, ಪರಿಗ್ರಹ ಮಾಡಲಾರ ಪರಮಾತ್ಮ ಪರಿಗ್ರಹ ಮಾಡ, ನಾಳೆಗಾಗಿ ಏನೂ ತೆಗೆದಿಡ ತನಗೆ ಬೇಕಾದ ವಸ್ತುವನ್ನು ಅಂದಂದೇ ಉತ್ಪತ್ತಿ ಮಾಡಿಕೊಳ್ಳುತ್ತಾನೆ ನಮಗೆ ಆ ಪರಮಾತ್ಮನಲ್ಲಿ ವಿಶ್ವಾಸವಿದ್ದ ಪಕ್ಷದಲ್ಲಿ, ನಮಗೆ ಅಗತ್ಯವಾದ ಪದಾರ್ಥಗಳನ್ನು ಅವನು ದಿನವೂ ಕೊಡುತ್ತಾನೆ ಎಂದು ಅರಿಯಬೇಕು ಈ ವಿಶ್ವಾಸದಿಂದ ಬದುಕಿ ಬಾಳಿದ ಶರಣರ, ಭಕ್ತರ ಅನುಭವ ಇದು ದಿನದಿನಕ್ಕೆ ಆವಶ್ಯಕವಿದ್ದಷ್ಟನ್ನೇ ದಿನದಿನವೂ ಉತ್ಪನ್ನ ಮಾಡುವುದು ಈಶ್ವರೀಯ ನಿಯಮ ಇದನ್ನು ನಾವು ಅರಿತಿಲ್ಲ ಅರಿತಿದ್ದರೂ ಅಸಡ್ಡೆ ಮಾಡಿದೇವೆ ಇದರಿಂದ ಜಗತ್ತಿನಲ್ಲಿ ವಿಷಮತೆ ಹುಟ್ಟಿದೆ, ಅದರಿಂದ ಸಾವಿರ ಸಂಕಟ–ದುಃಖಗಳನ್ನು ಅನುಭವಿಸುತ್ತಿದೇವೆ ಶ್ರೀಮಂತರ ಬಳಿ ಅವರಿಗೆ ಅಗತ್ಯವಿಲ್ಲದ ಎಷ್ಟೋ ಪದಾರ್ಥ ಕಿಕ್ಕಿರಿ ತುಂಬಿರುತ್ತದೆ ಅದೆಲ್ಲವೂ ಅತ್ತ ಬಿಸುಟು ಇತ್ತ ಎಸೆದು ಹಾಳಾಗಿಹೋಗುತ್ತದೆ ಆ ಪದಾರ್ಥಗಳ ಅಭಾವದಿಂದ ಇತ್ತ ಕೋಟ್ಯಾಂತರ ಜನ ಅಂಡಲೆದು ಹಸಿವಿನಿಂದ ಚಳಿಯಿಂದ ಕಂಗೆಟ್ಟು ಸಾಯುತ್ತಾರೆ ಪ್ರತಿಯೊಬ್ಬರೂ ತನಗೆಷ್ಟು ಬೇಕೋ ಅಷ್ಟನ್ನೇ ಸಂಗ್ರಹಿಸಿದರೆ, ಯಾರಿಗೂ ಕೊರತೆಯಾಗದು ಎಲ್ಲರಿಗೂ ಸಂತೋಷವಾದೀತು ಈಗ ಇಬ್ಬರಿಗೂ ಅತೃಪ್ತಿ, ಅಭಾವ ಲಕ್ಷಾಧಿಪತಿ ಕೋಟೀಶ್ವರನಾಗಬೇಕೆನ್ನುತ್ತಾನೆ, ಬಡವ ಲಕ್ಷಾಧೀಶನಾಗಲು ಬಯಸುತ್ತಾನೆ ಒಪ್ಪತ್ತಿನ ಊಟ ಹೊಟ್ಟೆತುಂಬಾ ದೊರಕಿತಲ್ಲ ಎಂಬ ಸಂತೋಷ ಬಡವನಿಗಿಲ್ಲ, ಲಕ್ಷ ಇದೆಯಲ್ಲ ಎಂಬ ತೃಪ್ತಿ ಹಣಗಾರನಿಗಿಲ್ಲ ಬಡವನಿಗೆ ಹೊಟ್ಟೆ ತುಂಬಾ ಅನ್ನ ಸಿಗಬೇಕು ಅವನಿಗೆ ಅನ್ನ ಸಿಗುವಂತೆ ಮಾಡಬೇಕಾದುದು ಸಮಾಜದ ಧರ್ಮ ಅದಕ್ಕಾಗಿಯೂ ತನ್ನ ಆತ್ಮಸಂತೋಷಕ್ಕಾಗಿಯೂ ಶ್ರೀಮಂತ ಮುನ್ನೆಜ್ಜೆ ಹಾಕಬೇಕು ತನ್ನ ಅತ್ಯಂತ ಪರಿಗ್ರಹವನ್ನು ತ್ಯಜಿಸಿದರೆ ಬಡವನಿಗೆ ಅತ್ಯಗತ್ಯವಾದುದು ಸುಲಭವಾಗಿ ದೊರೆತು, ಇಬ್ಬರೂ ತೃಪ್ತಿಯ ಪಾಠ ಕಲಿಯಬಹುದು ಮನಸ್ಸಿನಿಂದಲೂ ಕರ್ಮದಿಂದಲೂ ದಿಗಂಬರನಾದವನು, ಹಕ್ಕಿಯಂತೆ ಇರಲು ನೆಲೆ, ಉಡಲು ಬಟ್ಟೆ, ಉಣಲು ನಾಳೆಗೆ ಹಿಟ್ಟು, ಇಲ್ಲದವನು ಆದರ್ಶ ಆತ್ಯಂತಿಕ ಅಪರಿಗ್ರಹಿ ಅಂಥವನಿಗೆ ನಿತ್ಯಯಾತ್ರೆಗೆ ಬೇಕಾದ ಅನ್ನವನ್ನು ಭಗವಂತ ಒದಗಿಸುತ್ತಾನೆ. ಅವನದು ಆ ಚಿಂತೆ. ಇಂಥ ಅವ

ಧೂತ ಅವಸ್ಥೆಯನ್ನು ಮುಟ್ಟುವವನು ಲೋಕದಲ್ಲಿ ಬಹಳ ವಿರಳ  ಆದರೆ ಸಾಧಾರಣ ತರದ ಸಾಧಕರು ಸತ್ಯಾಗ್ರಹಿಗಳು  ಈ ಆದರ್ಶ ಅಸಾಧ್ಯ ಎಂದು ಬೆದರಬೇಕಾಗಿಲ್ಲ  ಆದರ್ಶವನ್ನು ಸದಾ ಲಕ್ಷ್ಯದಲ್ಲಿಟ್ಟು ದಿನದಿನವೂ ನಮ್ಮ ಪರಿಗ್ರಹವೃತ್ತಿಯನ್ನು ಪರೀಕ್ಷಿಸುತ್ತ, ಸ್ವಲ್ಪಸ್ವಲ್ಪವಾಗಿ ಅದನ್ನು ತಗ್ಗಿಸುತ್ತ ಬರಬೇಕು  ಪರಿಗ್ರಹವನ್ನು ಹೆಚ್ಚಿಸುವುದಲ್ಲ ನಿಜವಾದ ಸಭ್ಯತೆಯ, ಸಂಸ್ಕೃತಿಯ ಲಕ್ಷಣ , ವಿಚಾರಪೂರ್ವಕ, ಇಚ್ಛಾಪೂರ್ವಕ ಅದನ್ನು ತಗ್ಗಿಸಿದಂತೆಲ್ಲ ನಿಜವಾದ ಸುಖ–ಸಂತೋಷ ಹೆಚ್ಚುತ್ತದೆ  ಈ ರೀತಿ ವಿಚಾರಮಾಡಿದರೆ, ಆಚರಣೆ ಮಾಡಿದರೆ, ಆಶ್ರಮದಲ್ಲಿ ನಮಗೆ ಅಗತ್ಯವೆಂದು ಹೇಳಲು ಬಾರದ ಎಷ್ಟೋ ಪದಾರ್ಥಗಳನ್ನು ನಾವು ಸಂಗ್ರಹಿಸಿದೇವೆ ಎಂಬದು ಕಾಣಬರುತ್ತದೆ  ಇಂಥ ಅನಾವಶ್ಯಕ ಪರಿಗ್ರಹದಿಂದ ನಮ್ಮ ನೆರೆಯವರಿಗೆ ಕದಿಯುವ ಬುದ್ಧಿಯನ್ನು ಹುಟ್ಟಿಸುತ್ತೇವೆ  ಅಭ್ಯಾಸದಿಂದ ಮನುಷ್ಯ ತನ್ನ ಅಗತ್ಯಗಳನ್ನು ತಗ್ಗಿಸಬಲ್ಲ, ತಗ್ಗಿಸಿದಷ್ಟು ಅವನಿಗೆ ಸುಖ–ಶಾಂತಿ ಸಿಗುತ್ತದೆ, ಎಲ್ಲ ಬಗೆಯಿಂದಲೂ ಆರೋಗ್ಯವಂತನಾಗುತ್ತಾನೆ

ಕೇವಲ ಸತ್ಯದ, ಆತ್ಮದ ದೃಷ್ಟಿಯಿಂದ ನೋಡಿದರೆ ಈ ಶರೀರವೂ ಒಂದು ಪರಿಗ್ರಹವೇ  ಭೋಗದಾಸೆಯೇ ಆತ್ಮಕ್ಕೆ ಶರೀರವನ್ನು ಅಂಟಿಸುತ್ತದೆ ಅದನ್ನು ನೆಲೆಯಾಗಿ ನಿಲ್ಲಿಸುತ್ತದೆ  ಭೋಗದಾಸೆ ಬಹಳ ಕ್ಷೀಣವಾದರೆ ಶರೀರದ ಅಗತ್ಯ ಇಲ್ಲದಾಗುತ್ತದೆ  ಹೊಸ ಶರೀರಕ್ಕಾಗಿ ಮತ್ತೆ ಜನ್ಮ ತಳೆವ ಆವಶ್ಯಕತೆ ಆಳಿದುಹೋಗುತ್ತದೆ  ಆತ್ಮ ಸರ್ವವ್ಯಾಪಕ  ಮೈಯ ಪಂಜರದಲ್ಲಿ ಆತ್ಮವೇಕೆ ಬಿದ್ದಿರಬೇಕು ?  ಈ ಪಂಜರವನ್ನು ಕಟ್ಟಿಡಲು ಏಕೆ ಅನರ್ಥ ಮಾಡಬೇಕು ? ಇತರರನ್ನು ಕೊಲ್ಲಬೇಕೆ ? ಹೀಗೆ ವಿಚಾರಮಾಡುತ್ತ ನಾವು ಆತ್ಯಂತಿಕ ತ್ಯಾಗದ ಬಳಿಗೆ ತಲಪುತ್ತೇವೆ  ಶರೀರವಿರುವವರೆಗೆ ಅದನ್ನು ಬರೀ ಸೇವೆಗಾಗಿಯೆ ಉಪಯೋಗಿಸಲು ಕಲಿಯುತ್ತೇವೆ. ಅನ್ನವಲ್ಲ—ಸೇವೆಯೇ ಶರೀರದ ನಿಜವಾದ ಆಹಾರವಾಗಿಬಿಡುತ್ತದೆ  ಆಗ ನಾವು ತಿಂದರೂ ಕುಡಿದರೂ, ಮಲಗಿದರೂ ಎದ್ದಿದ್ದರೂ ಎಲ್ಲವೂ ಸೇವೆಗಾಗಿಯೇ  ಅದರಿಂದ ಬರುವ ಸುಖ ನಿಜವಾದ ಸುಖ  ಹೀಗೆ ಮಾಡುತ್ತಿದ್ದರೆ ಕಟ್ಟಕಡೆಗೆ ಮನುಷ್ಯನಿಗೆ ಸತ್ಯದರ್ಶನವಾಗುತ್ತದೆ  ಈ ದೃಷ್ಟಿಯಿಂದ ನಾವೆಲ್ಲರೂ ಪರಿಗ್ರಹವನ್ನು ಕುರಿತು ಯೋಚನೆ ಮಾಡಬೇಕು.

ವಸ್ತುಗಳಿಗಿದ್ದಂತೆ ವಿಚಾರಗಳಲ್ಲಿಯೂ ಅಪರಿಗ್ರಹವಿರಬೇಕು, ಇಷ್ಟು ನೆನಪಿದ್ದರೆ ಸರಿ ತನ್ನ ಮೆದುಳಿನಲ್ಲಿ ನಿರರ್ಥಕ ಜ್ಞಾನವನ್ನು ತುಂಬಿಕೊಳ್ಳುವ ಮನುಷ್ಯ ಪರಿಗ್ರಹಿ ಅವನು ಅಪರಿಗ್ರಹವ್ರತಭಂಗಮಾಡಿದ ಈಶ್ವರ ವಿಮುಖವಾದ ವಿಚಾರ, ಈಶ್ವರನ ಕಡೆ ಒಯ್ಯದ ವಿಚಾರ—ಎಲ್ಲವೂ ಪರಿಗ್ರಹ ದಲ್ಲಿ ಬರುತ್ತವೆ ಅವು ತ್ಯಾಜ್ಯ ಈ ಸಂದರ್ಭದಲ್ಲಿ ಗೀತೆಯ ೧೦ನೆ ಅಧ್ಯಾಯ ದಲ್ಲಿ ಭಗವಂತ ಬಳಸಿರುವ ಜ್ಞಾನದ ಪರಿಭಾಷೆಯನ್ನು ನೆನಪಿಡುವುದು ಯೋಗ್ಯ ಅಮಾನಿತ್ವ ಇತ್ಯಾದಿ ಗುಣಗಳನ್ನು ಹೇಳಿ ಉಳಿದವೆಲ್ಲ ಅಜ್ಞಾನ ಎಂದಿದಾನೆ ಇದು ಸತ್ಯವಾದರೆ—ನಿಸ್ಸಂದೇಹವಾಗಿ ಇದು ಸತ್ಯ—ಇಂದು ನಾವು ಜ್ಞಾನವೆಂದು ಕೂಡಿಹಾಕುವುದರಲ್ಲಿ ಬಹಳ ಮಟ್ಟಿಗೆ ಅಜ್ಞಾನವೇ. ಅದರಿಂದ ಲಾಭಕ್ಕಿಂತ ಹಾನಿಯೇ ಹೆಚ್ಚು ಅದರಿಂದ ತಲೆ ತಿರುಗುತ್ತದೆ, ಬುದ್ಧಿ ಬಳಲುತ್ತದೆ ಕಡೆಗೆ ಬರೀ ಶೂನ್ಯ ಅತೃಪ್ತಿ ಬೆಳೆದು ಅನರ್ಥ ಹೆಚ್ಚುತ್ತದೆ ಆದುದರಿಂದ ಸೋಮಾರಿಗಳಾಗಬೇಕೆಂದು ಅರ್ಥವಲ್ಲ ಗಳಿಗೆ ಗಳಿಗೆಯೂ ಪ್ರವೃತ್ತಿಮಯ, ಕರ್ಮಮಯ ಆಗಬೇಕು ಈ ಪ್ರವೃತ್ತಿ ಸಾತ್ತ್ವಿಕವಾಗಬೇಕು, ಸತ್ಯದತ್ತ ಒಯ್ಯುವಂಥದಾಗಬೇಕು ಸೇವಾಧರ್ಮ ವನ್ನು ಸ್ವೀಕರಿಸಿದವನು ಒಂದು ಗಳಿಗೆಯೂ ಸೋಮಾರಿಯಾಗಿರಲಾರ ಆದರೆ ಮನುಷ್ಯ ಸಾರಾಸಾರ ವಿವೇಕವನ್ನು ಕಲಿಯಬೇಕು ಸೇವಾಪರಾಯಣನಿಗೆ ಈ ವಿವೇಕ ಸಹಜಪ್ರಾಪ್ತ

೭

## ಅಭಯ

ಮಂಗಳ ಪ್ರಭಾತ, ೨-೯-೧೯೩೦

ಗೀತೆಯ ಹದಿನಾರನೆಯ ಅಧ್ಯಾಯದಲ್ಲಿ ದೈವೀಸಂಪತ್ತಿಯ ವರ್ಣನೆ ಮಾಡುವಾಗ ಭಗವಂತ ಎಲ್ಲಕ್ಕೂ ಮೊದಲನೆ ಗುಣವಾಗಿ ಅಭಯವನ್ನು ಹೇಳಿದಾನೆ. ಆ ಶ್ಲೋಕದ ಛಂದಸ್ಸಿನ ಸೌಕರ್ಯಕ್ಕಾಗಿ ಈ ಗುಣ ಅಲ್ಲಿ ಬಂದಿದೆಯೋ, ಅಭಯಕ್ಕೆ ಪ್ರಥಮ ಸ್ಥಾನ ಕೊಡಬೇಕೆಂದೇ ಅಲ್ಲಿ ಹೇಳಿದಾರೋ

—ನನಗೆ ಈ ವಾದ ಬೇಕಾಗಿಲ್ಲ ಅದನ್ನು ನಿರ್ಣಯಿಸುವ ಯೋಗ್ಯತೆಯೂ ನನಗಿಲ್ಲ ಏನೇ ಇರಲಿ, ಅಭಯಕ್ಕೆ ದೊರೆತ ಈ ಪ್ರಥಮ ಸ್ಥಾನ ಬಹಳ ಉಚಿತವಾದುದು ಏಕೆಂದರೆ, ಅಭಯವಿಲ್ಲದೆ ಸತ್ಯಶೋಧನೆ, ಅಹಿಂಸಾಪಾಲನೆ ಹೇಗೆ ಸಾಧ್ಯ ? ಪ್ರೀತಮ ಹೇಳುವಂತೆ ' ದೇವರ ದಾರಿ ಧೀರರದು, ಹೇಡಿಗಳದಲ್ಲ.' ಹರಿ ಎಂದರೆ ಸತ್ಯ ಸತ್ಯವೇ ಹೇಡಿಯೆಂದರೆ ಅಂಜುಗುಳಿ, ಭಯಭೀತ. ಧೀರ ಎಂದರೆ ಭಯರಹಿತ, ಕತ್ತಿ ಕರಾರಿ ಹಿಡಿಯದ ವೀರ ಕತ್ತಿ ಶೌರ್ಯದ ಗುರುತಲ್ಲ, ಹೇಡಿತನದ ಗುರುತು.

ಅಭಯ ಎಂದರೆ ಹೊರಗಣ ಸಮಸ್ತ ಭಯದಿಂದಲೂ ಮುಕ್ತಿ ಸಾವಿನ ಭಯ, ಹಣ–ಸೊತ್ತು ಲೂಟಿಯಾದೀತೆಂಬ ಭಯ, ರೋಗಭಯ, ಏಟಿನ ಭಯ, ಗೌರವಹಾನಿಯ ಭಯ, ಯಾರನ್ನು ನೋಯಿಸಿದೆವೋ ಎಂಬ ಭಯ— ಹೀಗೆ ಎಷ್ಟೋ ಬಗೆಯ ಭಯ ಇವೆ ಸಾಮಾನ್ಯವಾಗಿ ಸಾವಿನ ಭಯವನ್ನು ಗೆದ್ದರೆ ಎಲ್ಲಾ ಭಯವನ್ನು ಗೆದ್ದಂತೆ ಎನ್ನುತ್ತಾರೆ ಇದು ಸರಿಯಲ್ಲ ಸಾವಿನ ಭಯವನ್ನು ಬಿಟ್ಟವರು ಎಷ್ಟೋ ಜನ ಉಳಿದ ಭಯಗಳಿಗೆ ತುತ್ತಾಗುತ್ತಾರೆ ತಾನು ಸಾಯಲು ಸಿದ್ಧನಾದವನು ಸ್ವಜನ–ಸುಹೃದರ ವಿಯೋಗವನ್ನು ಸಹಿಸಲಾರ ಒಬ್ಬ ಲೋಭಿ ಅವೆಲ್ಲವನ್ನೂ ಬಿಟ್ಟಾನು, ಶರೀರವನ್ನೂ ಬಿಟ್ಟಾನು, ಹಣವನ್ನು ಬಿಡು ಎಂದರೆ ಗಾಬರಿಯಾದಾನು. ತಾವು ಪ್ರತಿಷ್ಠೆ–ಗೌರವ ಎಂದು ತಿಳಿದುದನ್ನು ಉಳಿಸಿಕೊಳ್ಳಲು ಅನೇಕರು ನಾನಾ ದುಷ್ಕಾರ್ಯಗಳನ್ನು ಮಾಡುತ್ತಾರೆ ಲೋಕಾಪವಾದಕ್ಕೆ ಅಂಜಿ ಅನೇಕರು ತಮಗಿದು ಸರಿಯಾದ ದಾರಿ ಎಂದು ತಿಳಿದಿದ್ದರೂ ಹಿಂದೆ ಮುಂದೆ ನೋಡುತ್ತಾರೆ. ಸತ್ಯವನ್ನು ಹುಡುಕಲು ಬಯಸುವವನು ಈ ಭಯಗಳಿಗೆಲ್ಲ ತಿಲಾಂಜಲಿ ಕೊಡಬೇಕು ಸತ್ಯಶೋಧನೆಗಾಗಿ ಹರಿಶ್ಚಂದ್ರನಂತೆ ತನ್ನ ಸರ್ವಸ್ವವನ್ನೂ ಅರ್ಪಿಸಲು ಸಿದ್ಧನಾಗಬೇಕು ಹರಿಶ್ಚಂದ್ರನ ಕಥೆ ಕಟ್ಟುಕಥೆಯೇ ಆಗಿರಬಹುದು. ಆತ್ಮಾರ್ಥಿಗಳಾದವರು ಪ್ರತಿಯೊಬ್ಬರಿಗೂ ಆ ಅನುಭವವಾಗಿದೆ, ಆದುದರಿಂದ ಐತಿಹಾಸಿಕ ಕಥೆಗಳಿಗಿಂತಲೂ ಈ ಕಥೆಯ ಬೆಲೆ ಅನಂತಗುಣ ಹೆಚ್ಚು ಎಲ್ಲರೂ ಮನನಮಾಡಲು ಯೋಗ್ಯವಾಗಿದೆ

ಅಭಯ ವ್ರತದ ಪರಿಪೂರ್ಣ ಪಾಲನೆ ಬಹುಶಃ ಅಸಂಭವ ಆತ್ಮಸಾಕ್ಷಾತ್ಕಾರವಾದವನಿಗೇ ಸಂಪೂರ್ಣ ಭಯಮುಕ್ತಿ ಸಾಧ್ಯ ಅಭಯ ಎಂದರೆ

ಮೋಹರಹಿತ ಅವಸ್ಥೆಯ ಪರಾಕಾಷ್ಠೆ. ನಿಶ್ಚಯಪೂರ್ವಕ, ಸತತ ಪ್ರಯತ್ನ ದಿಂದ, ಆತ್ಮದ ಮೇಲೆ ಶ್ರದ್ಧೆಯನ್ನು ಬೆಳಸಿದರೆ ಅಭಯಗುಣ ಬೆಳೆಯುತ್ತದೆ

ನಾನು ಮೊದಲೇ ಹೇಳಿದಂತೆ, ನಾವು ಎಲ್ಲ ಹೊರಗಣ ಭಯಗಳನ್ನೂ ಬಿಡಬೇಕು ಒಳಗಿನ ಶತ್ರುಗಳಿಗೆ ಮಾತ್ರ ಅಂಜಿ ನಡೆಯಬೇಕು ಕಾಮ ಕ್ರೋಧಾದಿಗಳ ಭಯವೇ ವಾಸ್ತವಿಕ ಭಯ ಒಳಗಿನ ಈ ಶತ್ರುಗಳನ್ನು ಗೆದ್ದರೆ ಹೊರಗಣ ಭಯವೆಲ್ಲ ತಾನೇ ಕಳಚಿಬೀಳುತ್ತದೆ ಭಯ ಈ ದೇಹಕ್ಕೆ ಅಂಟಿಕೊಂಡೇ ಇದೆ. ದೇಹದ ವ್ಯಾಮೋಹ ಕಳೆದರೆ ಆ ಭಯ ಸಹಜವಾಗಿಯೇ ಬರುತ್ತದೆ ವಿಚಾರ ಮಾಡಿ ನೋಡಿದರೆ ಕಾಣುತ್ತದೆ: ಭಯವೆಂಬುದೆಲ್ಲ ಬರೀ ಕಲ್ಪನಾಸೃಷ್ಟಿ, ನಮ್ಮದೇ ಕಲ್ಪನೆ ಧನದ ಮೋಹ, ಕುಟುಂಬ–ಶರೀರ ಗಳ ಮೋಹವನ್ನು ಕಿತ್ತೊಗೆದರೆ ಆಮೇಲೆಲ್ಲಿಯ ಭಯ? 'ತೇನ ತ್ಯಕ್ತೇನ ಭುಂಜೀಥಾಃ'—ಇದು ರಾಮಬಾಣದಂಥ ವಚನ ಧನ, ಕುಟುಂಬ, ದೇಹ ಎಲ್ಲಿಯೂ ಹೋಗುವುದಿಲ್ಲ ಇದ್ದ ಹಾಗೇ ಇರುತ್ತವೆ. ಅವನ್ನು ಕುರಿತು ನಮ್ಮ ಕಲ್ಪನೆ, ನಮ್ಮ ವೃತ್ತಿ ಬದಲಾದರೆ ಸಾಕು ಇದು ನಮ್ಮದಲ್ಲ, ನನ್ನದೂ ಅಲ್ಲ—ಈಶ್ವರನದು, ನಾನೇ ಈಶ್ವರನ ಸೊತ್ತು, ನನ್ನದೆಂಬುದು ಈ ಲೋಕ ದಲ್ಲೇನೂ ಇಲ್ಲ ಎಂದಮೇಲೆ ಭಯವಿನ್ನೇಕೆ? ಆದುದರಿಂದ ಉಪನಿಷತ್ತು ಹೇಳಿದೆ ಅದನ್ನು ತ್ಯಜಿಸಿ ಭೋಗಿಸು ಎಂದರೆ ಅದಕ್ಕೆ ರಕ್ಷಕನಾಗು, ವಿಶ್ವಸ್ತ ನಾಗು ಆಗ ಅದನ್ನು ರಕ್ಷಿಸುವ ಶಕ್ತಿಯನ್ನು ಅವನು ನೀಡುತ್ತಾನೆ ಹೀಗೆ ನಾವು ಸ್ವಾಮಿಯಾಗದೆ ಸೇವಕರಾದರೆ, ಶೂನ್ಯದಂತಾದರೆ ಅನಾಯಾಸವಾಗಿ ಭಯವನ್ನು ಗೆಲ್ಲಬಹುದು, ಶಾಂತಿಯನ್ನು ಪಡೆಯಬಹುದು, ಸತ್ಯನಾರಾಯಣನ ದರ್ಶನ ಮಾಡಬಹುದು.

## ೮

## ಅಸ್ಪೃಶ್ಯತಾನಿವಾರಣೆ

ಮಂಗಳ ಪ್ರಭಾತ, ೯–೯–೧೯೩೦

ಅಸ್ವಾದವ್ರತದಂತೆ ಇದೂ ಒಂದು ಹೊಸ ವ್ರತ ಸ್ವಲ್ಪ ವಿಚಿತ್ರ ವಾಗಿಯೂ ಕಾಣುತ್ತದೆ ಆದರೆ ಎಷ್ಟು ವಿಚಿತ್ರವೋ ಅಷ್ಟೂ, ಅದಕ್ಕಿಂತ

ಹೆಚ್ಚೇ, ಅಗತ್ಯ. ಅಸ್ಪೃಶ್ಯತೆ ಎಂದರೆ ಹೊಲೆತನ, ಅವರನ್ನು ಮುಟ್ಟ ಬಾರದು, ಇವರನ್ನು ಮುಟ್ಟಕೂಡದು ಎಂಬ ಆಚಾರ. ಆಖಾನ ಮಾತಿನಲ್ಲಿ ಇದು ಕೊಳೆ, ಮೈಲಿಗೆ. ಧರ್ಮದ ಹೆಸರಿನಲ್ಲಿ ಧರ್ಮಕ್ಕೇ ಕಂಟಕವಾಗಿ ಧರ್ಮವನ್ನು ಕಲುಷಿತಗೊಳಿಸುವಂಥದು ಇದು.

ಒಬ್ಬನೇ ದೇವರು, ಒಂದೇ ಆತ್ಮ ಎಂದರೆ ಯಾರೂ ಅಸ್ಪೃಶ್ಯರಲ್ಲ ಭಂಗಿ, ಚಮ್ಮಾರ ಅಸ್ಪೃಶ್ಯರೆಂಬುದು ತಪ್ಪು ಹಾಗೆಯೆ ಹೆಣವೂ ಅಸ್ಪೃಶ್ಯ ವಲ್ಲ ಹೆಣವನ್ನು ನೋಡಿ ಕನಿಕರಿಸಬೇಕು ಹೆಣವನ್ನು ಮುಟ್ಟಿದಮೇಲೆ ಕ್ಷೌರ ಮಾಡಿಸಿಕೊಳ್ಳುವುದು, ಸ್ನಾನ ಮಾಡುವುದು ಆರೋಗ್ಯದೃಷ್ಟಿಯಿಂದ ಹೆಣವನ್ನು ಮುಟ್ಟಿದವನು ಸ್ನಾನಮಾಡಿ ಶುಚಿಯಾಗದಿದ್ದರೆ ಅವನನ್ನು ಕೊಳಕನೆನ್ನಿ—ಪಾತಕಿಯೆನ್ನಬೇಡಿ ತಾಯಿ ಮಕ್ಕಳ ಹೇಸಿಗೆಯನ್ನೆತ್ತಿ ಹಾಕಿ ತೊಳೆದಮೇಲೆ, ತಾನು ಕೈಕಾಲು ತೊಳೆಯದಿದ್ದರೆ ಮೀಯದಿದ್ದರೆ ಅಷ್ಟು ಹೊತ್ತು ಆಕೆ ಅಸ್ಪೃಶ್ಯಳೆನ್ನಿ ಆದರೆ ಆಡಾಡುತ್ತ ಮಗು ಬಂದು ಆಕೆಯನ್ನು ಮುಟ್ಟಿದರೆ ಅದಕ್ಕಾಗಲಿ ಅದರ ಆತ್ಮಕ್ಕಾಗಲಿ ಏನೂ ಮೈಲಿಗೆಯಾಗದು

ಆದರೆ ಭಂಗಿ, ಚಮ್ಮಾರ ಮುಂತಾದವರನ್ನು ಹುಟ್ಟನಿಂದಲೇ ಅಸ್ಪೃಶ್ಯ ರೆಂದು ತಿರಸ್ಕಾರದಿಂದ ಕಾಣುತ್ತೇವೆ. ಅವರು ಮಣಗಟ್ಟಲೆ ಸಾಬೂನು ಹಾಕಿ ಮೈ ತೊಳೆದರೂ, ಒಳ್ಳೆಯ ಬಟ್ಟೆ ತೊಟ್ಟರೂ, ವೈಷ್ಣವರಂತೆ ನಾಮ ವಿಟ್ಟರೂ, ತುಲಸೀ-ರುದ್ರಾಕ್ಷಿಗಳನ್ನು ಧರಿಸಿದರೂ, ನಿತ್ಯವೂ ಗೀತಾಪಾಠ ಮಾಡಿದರೂ, ಲೇಖನವ್ಯವಸಾಯ ಮಾಡಿದರೂ ಅವರು ಅಸ್ಪೃಶ್ಯರೇ ? ಇಂಥ ಧರ್ಮ ಧರ್ಮವಲ್ಲ, ಅಧರ್ಮ , ನಾಶಯೋಗ್ಯ ಆಶ್ರಮವ್ರತಗಳಲ್ಲಿ ಅಸ್ಪೃಶ್ಯತಾನಿವಾರಣೆಗೆ ಸ್ಥಾನ ಕೊಟ್ಟು—ಅಸ್ಪೃಶ್ಯತೆ ಹಿಂದೂ ಧರ್ಮದ ಅಂಗವಲ್ಲ, ಅದರೊಳಗೆ ಸೇರಿಕೊಂಡಿರುವ ಹಳಸು, ಕಳಂಕ, ಪಾಪ, ಅದನ್ನು ತೊಳೆದುಹಾಕಬೇಕಾದುದು ಪ್ರತಿಯೊಬ್ಬ ಹಿಂದುವಿಗೂ ಪರಮ ಕರ್ತವ್ಯ ಎಂಬುದನ್ನು ಪ್ರಕಟಿಸುತ್ತಿದೇವೆ ಆದುದರಿಂದ ಇದನ್ನು ಪಾಪ ಎಂದು ತಿಳಿಯುವ ಪ್ರತಿಯೊಬ್ಬ ಹಿಂದುವೂ ಅದಕ್ಕಾಗಿ ಪ್ರಾಯಶ್ಚಿತ್ತವೆಂದು ಅಸ್ಪೃಶ್ಯ ರನ್ನು ತನ್ನವರೆಂದು ತಿಳಿದು ನಡೆಯಬೇಕು ಪ್ರೇಮಪೂರ್ವಕ ಸೇವಾಭಾವ ದಿಂದ ಅವರನ್ನು ಸ್ಪರ್ಶಿಸಿ, ಅದರಿಂದ ತಾನು ಪವಿತ್ರನಾದೆನೆಂದು ತಿಳಿದು ಅವರ ದುಃಖವನ್ನು ದೂರಮಾಡಬೇಕು ವರ್ಷಾಂತರಗಳಿಂದ ದಲಿತನಾಗಿ

ಅವನಲ್ಲಿ ಅಜ್ಞಾನಾದಿದೋಷ ತುಂಬಿವೆ ಅವನ್ನು ದೂರಮಾಡಲು ಧೈರ್ಯ ಪೂರ್ವಕ ಸಹಾಯ ಮಾಡಿ ಇತರ ಹಿಂದುಗಳಿಗೂ ಅದೇ ರೀತಿ ಮಾಡಲು ಪ್ರೇರಣೆ ಕೊಡಬೇಕು

ಅಸ್ಪೃಶ್ಯತಾನಿವಾರಣೆಯನ್ನು ಈ ಅಧ್ಯಾತ್ಮದೃಷ್ಟಿಯಿಂದ ನೋಡಿದರೆ, ಇದರ ಐಹಿಕ ರಾಜಕೀಯ ಪರಿಣಾಮ ತುಚ್ಛವಾಗಿ ಕಂಡೀತು ಆ ಬಗೆಯ ಫಲಗಳನ್ನು ಬಯಸದೆ ವ್ರತಧಾರಿ ಅಸ್ಪೃಶ್ಯತಾನಿವಾರಣೆ ತನ್ನ ಧರ್ಮವೆಂದು ಮಾಡಿಯಾನು ಸತ್ಯ ಮುಂತಾದುದರ ಆಚರಣೆ ಮಾಡುವಾಗ ಐಹಿಕ ಫಲದ ವಿಚಾರ ಮಾಡಬಾರದು ಸತ್ಯಾಚರಣೆ ವ್ರತಧಾರಿಗೆ ಒಂದು ಯುಕ್ತಿ ಯಲ್ಲ ಅದು ಅವನ ಮೈಗೇ ಅಂಟಿಕೊಂಡ ವಸ್ತು, ಅವನ ಸ್ವಭಾವ ಅಸ್ಪೃಶ್ಯತಾನಿವಾರಣೆಯೂ ವ್ರತಧಾರಿಗೆ ಅದೇ ರೀತಿ

ಈ ವ್ರತದ ಮಹತ್ವ ತಿಳಿದರೆ, ಈ ದೋಷ ಬರೀ ಭಂಗಿ, ಚಮ್ಮಾರರನ್ನು ಮಾತ್ರವೇ ಮುಟ್ಟಿಲ್ಲ ಎಂಬುದು ತಿಳಿಯುತ್ತದೆ ದೋಷದ ಸ್ವಭಾವವೇ ಹಾಗೆ· ಮೊದಲು ಸಾಸಿವೆ ಕಾಳಿನಷ್ಟೆ ಕಾಣುತ್ತದೆ ಬರುಬರುತ್ತ ಗುಡ್ಡವಾಗಿ ಹೋಗುತ್ತದೆ ಆಮೇಲೆ ಮುಟ್ಟಿದ್ದನ್ನೆಲ್ಲಾ ನಾಶಮಾಡುತ್ತದೆ ಅಸ್ಪೃಶ್ಯ ತೆಯೂ ಹಾಗೇ ಅಸ್ಪೃಶ್ಯತೆಯನ್ನು ಪಾಲಿಸುವ ಜನರಿಗೆ ತಮ್ಮ ಸ್ನಾನ–ಶುಚಿ, ಊಟ–ತಿಂಡಿ—ಇವುಗಳಲ್ಲಿಯೇ ಕಾಲ ಕಳೆಯುತ್ತದೆ ಗಳಿಗೆಯೂ ಬಿಡುವಿಲ್ಲ ಇಂಥಲ್ಲಿ ಹೆಸರಿಗೆ ಈಶ್ವರನ ಪೂಜೆ, ಮಾಡುವುದೇನೋ ತನ್ನದೇ ಪೂಜೆ

ಆದುದರಿಂದ ಅಸ್ಪೃಶ್ಯತಾನಿವಾರಣೆ ಮಾಡುವವನು ಭಂಗಿ, ಚಮ್ಮಾರ ರನ್ನು ತನ್ನವರೆಂದು ಕಂಡರೆ ಸಾಲದು ತನ್ನಂತೆಯೆ ಅವರನ್ನು ಕಾಣಬೇಕು ಅಸ್ಪೃಶ್ಯತಾನಿವಾರಣೆ ಎಂದರೆ ಇಡೀ ಜಗತ್ತಿನೊಡನೆ ಮೈತ್ರಿ, ಲೋಕದ ಸೇವಕನಾಗುವುದು ಹೀಗೆ ಅಸ್ಪೃಶ್ಯತಾನಿವಾರಣೆ ಅಹಿಂಸೆಯಲ್ಲಿ ಲೀನ ವಾಗುತ್ತದೆ ಅಹಿಂಸೆಯೆಂದರೆ ಎಲ್ಲಾ ಜೀವಿಗಳಲ್ಲಿಯೂ ಪ್ರೇಮ. ಜೀವಿ ಜೀವಿಗಳಲ್ಲಿಯ ಭೇದವನ್ನು ತೊಡೆದುಹಾಕುವುದೇ ಅಸ್ಪೃಶ್ಯತಾನಿವಾರಣೆ ಜಗತ್ತಿನಲ್ಲಿ ಎಲ್ಲೆಲ್ಲೂ ಇಂಥ ಭೇದ ಹರಡಿದೆ ಆದರೆ ಹಿಂದೂ ಧರ್ಮದಲ್ಲಿ ಸೇರಿಕೊಂಡಿರುವ ಕಳಂಕದ ವಿಚಾರವನ್ನು ಇಲ್ಲಿ ಮಾಡಿದೇವೆ ಹಿಂದೂ ಧರ್ಮದಲ್ಲಿ ಅದಕ್ಕೆ ಧಾರ್ಮಿಕ ಸ್ಥಾನ ಕೊಟ್ಟಿದೆ ಅದರಿಂದ ಲಕ್ಷಾಂತರ, ಕೋಟ್ಯಾಂತರ ಮನುಷ್ಯರನ್ನು ಗುಲಾಮಗಿರಿಗಿಂತಲೂ ನೀಚಸ್ಥಿತಿಗೆ ತಳ್ಳಿದೇವೆ.

೯

# ಶರೀರಶ್ರಮ

ಮಂಗಳ ಪ್ರಭಾತ, ೬–೯–೧೯೩೦

ಶರೀರಶ್ರಮ ಮನುಷ್ಯನಿಗೆ ಅನಿವಾರ್ಯ ಎಂಬ ಮಾತು ನನಗೆ ಮೊಟ್ಟ ಮೊದಲು ಹೊಳೆದುದು ಟಾಲ್‌ಸ್ಟಾಯಿಯ 'ಅನ್ನದ ಕಾಯಕ'—'Bread Labour' ಎಂಬ ಪ್ರಬಂಧವನ್ನೋದಿದಾಗ ಇಷ್ಟು ಸ್ಪಷ್ಟವಾಗಿ ಈ ಮಾತನ್ನು ಅರಿತುಕೊಳ್ಳುವ ಮೊದಲೇ, ರಸ್ಕಿನ್ ಬರೆದಿರುವ 'Unto this Last' ಪುಸ್ತಕವನ್ನೋದಿದಮೇಲೆ, ಅದರಂತೆ ನಡೆಯಲು ಮೊದಲಿಟ್ಟದ್ದೆ. ಶರೀರಶ್ರಮ ಇಂಗ್ಲೀಷಿನ Bread Labourಗೆ ಅನುವಾದ ಅನ್ನಕ್ಕಾಗಿ ಪ್ರತಿಯೊಬ್ಬ ಮನುಷ್ಯನೂ ಕಾಯಕ ಅಥವಾ ಶರೀರಶ್ರಮ ಮಾಡಬೇಕು, ಕೈಕಾಲು ಆಡಿಸಬೇಕು ಎಂಬುದು ಈಶ್ವರೀ ನಿಯಮ ಇದನ್ನು ಮೊದಲು ಅರಿತುಕೊಂಡವನು ರಷ್ಯಾದ ಒಬ್ಬ ಅಪರಿಚಿತ ಲೇಖಕ—ಬುನ್ರೆಫ್. ಅವನ ವಿಚಾರವನ್ನು ಟಾಲ್‌ಸ್ಟಾಯ್ ವಿಸ್ತಾರವಾಗಿ ಪ್ರಚಾರಮಾಡಿದ ಭಗವದ್ ಗೀತೆಯ ಮೂರನೆಯ ಅಧ್ಯಾಯದಲ್ಲಿ ಇದೇ ತತ್ತ್ವ ನನ್ನ ಕಣ್ಣಿಗೆ ಕಾಣುತ್ತಿದೆ ಯಜ್ಞ ಮಾಡದೆ ತಿನ್ನುವವನು ಕಳ್ಳ-ಅನ್ನವನ್ನು ತಿನ್ನುತ್ತಾನೆ ಆ ಯಜ್ಞಕ್ಕೆ ಇಟ್ಟ ಬಹಳ ಕಠಿನ ಶಾಪವಿದು ಇದು ಯಜ್ಞ ಎಂದರೆ ಶರೀರಶ್ರಮ ಅಥವಾ ಅನ್ನದ ಕಾಯಕ ಎಂಬುದೇ ಶೋಭಿಸುತ್ತದೆ ಹೇಗಾದರೂ ಇರಲಿ, ನಮ್ಮ ಈ ವ್ರತದ ಉತ್ಪತ್ತಿ ಇದು

ಬುದ್ಧಿಯೂ ನಮ್ಮನ್ನು ಆ ನಿರ್ಧಾರಕ್ಕೇ ಒಯ್ಯುತ್ತದೆ ಶರೀರಶ್ರಮ ಮಾಡದವನಿಗೆ ತಿನ್ನಲು ಏನಧಿಕಾರ? 'ನಿನ್ನ ಬೆವರು ಸುರಿಸಿ ಹಿಟ್ಟು ತಿನ್ನು' ಎನ್ನುತ್ತದೆ ಬೈಬಲ್ ಎಂಥ ಕೋಟ್ಯಾಧೀಶನೇ ಆಗಲಿ ತನ್ನ ಹಾಸಿಗೆಯ ಮೇಲೆಯೆ ಬಿದ್ದಿದ್ದು ಯಾರಾದರೂ ತನ್ನ ಬಾಯೊಳಗೇ ಅನ್ನ ಹಾಕುವಂತೆ ಏರ್ಪಾಡು ಮಾಡಿಕೊಂಡರೆ, ಹಾಗೆ ಬಹಳ ದಿನ ತಿನ್ನಲಾರ ಅವನಿಗೆ ಆನಂದವೇ ಇರದು ಆದುದರಿಂದ ವ್ಯಾಯಾಮಾದಿಗಳನ್ನು ಮಾಡಿ ಹಸಿವಾಗು ವಂತೆ ಮಾಡಿಕೊಳ್ಳುತ್ತಾನೆ ಆಗಲೂ ತನ್ನ ಕೈ–ಬಾಯಿಂದಲೇ ತಾನೆ ಊಟ ಮಾಡಬೇಕು ಬಡವನಾಗಲಿ ಭಾಗ್ಯವಂತನಾಗಲಿ ಹೀಗೆ ಶರೀರವ್ಯಾಯಾಮ

ಮಾಡಲೇಬೇಕಾಗಿದ್ದರೆ, ಅನ್ನಕ್ಕಾಗಿ ಏಕೆ ಶರೀರಶ್ರಮ ಮಾಡಲಾಗದು? ಅನ್ನದ ಕಾಯಕವೇಕೆ ಮಾಡಬಾರದು? ಅಂಗಸಾಧನೆ ಮಾಡು, ಶ್ವಾಸೋಚ್ಛ್ವಾಸದ ವ್ಯಾಯಾಮ ಮಾಡು ಎಂದು ರೈತರಿಗೆ ಹೇಳುತ್ತಾರೆಯೆ? ಈ ಲೋಕದಲ್ಲಿ ರೈತರೇ ಹೆಚ್ಚು, ನೂರಕ್ಕೆ ತೊಂಬತ್ತು ಉಳಿದ ಹತ್ತು ಜನರೂ ರೈತರ ಮೇಲ್ಪಂಕ್ತಿಯನ್ನೇ ಅನುಸರಿಸಿದರೆ ಲೋಕದಲ್ಲಿ ಎಷ್ಟು ಸುಖ, ಶಾಂತಿ, ಆರೋಗ್ಯ ವೃದ್ಧಿ ಆದೀತು! ಕನಿಷ್ಠಪಕ್ಷ ತಮ್ಮ ಅನ್ನಕ್ಕಾಗಿ ಎಷ್ಟು ಬೇಕೋ ಅಷ್ಟಾದರೂ ಕಾಯಕ ಮಾಡಿದರೆ? ಕೃಷಿಗೆ ಬುದ್ಧಿ ಜೊತೆಯಾದರೆ ಈಗ ವ್ಯವಸಾಯಕ್ಕೆ ಇರುವ ಅನೇಕ ತೊಡಕು ಸುಲಭವಾಗಿ ಪರಿಹಾರವಾದಾವು. ಶರೀರಪರಿಶ್ರಮದ ಈ ನಿರಪವಾದ ನಿಯಮವನ್ನು ಎಲ್ಲರೂ ಒಪ್ಪಿದರೆ ಉಚ್ಚ-ನೀಚದ ಭೇದ ಮಾಯವಾದೀತು ವರ್ಣವ್ಯವಸ್ಥೆಯಲ್ಲಿ ಈ ಭೇದವೆ ಇರಲಿಲ್ಲ. ಅಲ್ಲಿಯೂ ಇದು ಹೊಕ್ಕಿದೆ ಈಗಂತೂ ಧಣಿ-ಆಳು ಎಂಬ ಭೇದ ಸರ್ವವ್ಯಾಪಕವಾಗಿದೆ ಬಡವರಿಗೆ ಭಾಗ್ಯವಂತರನ್ನು ಕಂಡರೆ ಹೊಟ್ಟೆಯುರಿ ಎಲ್ಲರೂ ಅನ್ನದ ಕಾಯಕ ಮಾಡಿದರೆ ಉಚ್ಚ-ನೀಚ ಭೇದ ಅಳಿಯುತ್ತದೆ, ಆಗ ಶ್ರೀಮಂತರಿದ್ದರೆ ಕೇವಲ ವಿಶ್ವಸ್ತರಂತೆ, ಟ್ರಸ್ಟಿಗಳಂತೆ ಇದ್ದಾರು, ತಮ್ಮ ಭಾಗ್ಯವನ್ನು ಲೋಕಸೇವೆಗಾಗಿ ಉಪಯೋಗಿಸಿಯಾರು

ಅಹಿಂಸೆಯ ಪಾಲನೆಗೆ, ಸತ್ಯಾರಾಧನೆಗೆ ಬ್ರಹ್ಮಚರ್ಯವನ್ನು ಸಹಜವಾಗಿ ಮಾಡಿಕೊಳ್ಳುವ ಪ್ರಯತ್ನಕ್ಕೆ, ಶರೀರಶ್ರಮ ರಾಮಬಾಣದಂಥ ಸಹಾಯ. ನಿಜವಾಗಿ ನೋಡಿದರೆ, ಈ ಕಾಯಕ ಕೃಷಿಗೇ ಸಂಬಂಧಿಸಿದುದು ಈಗಿನ ಸ್ಥಿತಿಯಲ್ಲಿ ಎಲ್ಲರೂ ವ್ಯವಸಾಯ ಮಾಡುವಂತಿಲ್ಲ ಆದುದರಿಂದ ವ್ಯವಸಾಯವನ್ನು ಆದರ್ಶವಾಗಿ ಎಣಿಸಿ ಅದರ ಬದಲು ನೂಲಬಹುದು, ನೇಯಬಹುದು, ಮರಗೆಲಸ ಮಾಡಬಹುದು, ಕಬ್ಬಿಣಗೆಲಸ ಮಾಡಬಹುದು ಪ್ರತಿಯೊಬ್ಬನೂ ತನಗೆ ತಾನೇ ಭಂಗಿಯಾಗಬೇಕು ಉಂಡವನು ಶೌಚಕ್ಕೆ ಹೋಗಲೇಬೇಕು ತನ್ನ ಶೌಚವನ್ನು ತಾನೇ ಬಳಿದೋ ಎತ್ತಿಯೋ ಹಾಕುವ ವ್ಯವಸ್ಥೆಯೇ ಉತ್ತಮ ವ್ಯವಸ್ಥೆ ಇದು ಸಾಧ್ಯವಲ್ಲವಾದರೆ ಪ್ರತಿಯೊಂದು ಕುಟುಂಬವೂ ತಮ್ಮ ಶೌಚದ ವ್ಯವಸ್ಥೆ ಮಾಡಿಕೊಳ್ಳಬೇಕು ಭಂಗಿಗಳದೇ ಒಂದು ಗುಂಪಾಗಿ, ಅದೇ ಒಂದು ವೃತ್ತಿಯಾಗಿ ಮಾಡಿದ ಸಮಾಜದಲ್ಲಿ ಏನೋ ಒಂದು ಮಹಾದೋಷವಿದೆ ಎಂದು ನನಗೆ ಕೆಲವು ವರ್ಷಗಳಿಂದ ಅನಿಸುತ್ತಿದೆ. ಆರೋಗ್ಯ

ರಕ್ಷಕವಾದ ಈ ಅತ್ಯಾವಶ್ಯಕ ಕೆಲಸವನ್ನು ನೀಚಾತಿನೀಚವೆಂದು ಯಾವ ಮಹಾರಾಯ ಮೊಟ್ಟಮೊದಲು ನಿರ್ಣಯಿಸಿದನೋ ಇತಿಹಾಸದಿಂದ ತಿಳಿಯು ವುದಿಲ್ಲ ಯಾರೇ ಇರಲಿ, ನಮಗೆ ಅವನು ಉಪಕಾರ ಮಾಡಲಿಲ್ಲ ನಾವೆಲ್ಲರೂ ಭಂಗಿಗಳೇ ಎಂಬ ಭಾವನೆ ಚಿಕ್ಕಂದಿನಿಂದಲೂ ಬೇರೂರಬೇಕು ಅದಕ್ಕೆ ಸಹಜೋಪಾಯ ಈ ಮಾತನ್ನು ಅರಿತವನು ಪ್ರತಿಯೊಬ್ಬನೂ ಶೌಚವನ್ನು ಬಳಿಯುವ ಕೆಲಸದಿಂದ ತನ್ನ ಪರಿಶ್ರಮವನ್ನು ಮೊದಲಿಡುವುದು ಜ್ಞಾನ ಪೂರ್ವಕ, ವಿಚಾರಪೂರ್ವಕ ಹೀಗೆ ಮಾಡಿದರೆ ಅವನ ಧರ್ಮದ ಸತ್ಯಸ್ವರೂಪ ಆ ಗಳಿಗೆಯಲ್ಲಿಯೆ ತಿಳಿದೀತು

## ೧೦

## ಸರ್ವಧರ್ಮ ಸಮಭಾವ – ೧

ಮಂಗಳ ಪ್ರಭಾತ, ೨೬–೯–೧೯೩೦

ನಮ್ಮ ವ್ರತಗಳಲ್ಲಿ ಸಹಿಷ್ಣುತೆಗೆ ನಾನು ಈ ಹೊಸ ಹೆಸರು ಕೊಟ್ಟಿದೇನೆ ಸಹಿಷ್ಣುತೆ ಇಂಗ್ಲೀಷಿನ 'ಟಾಲರೆನ್ಸ್' ಶಬ್ದದ ಅನುವಾದ ನನಗದು ರುಚಿಸ ಲಿಲ್ಲ ಇತರ ಧರ್ಮಗಳ ಸಹನೆ ಎಂದರೆ ಅವುಗಳಲ್ಲಿ ಏನೋ ನ್ಯೂನತೆಯಿದೆ ಎಂದು ಅರ್ಥಬರುತ್ತದೆ ಅಹಿಂಸೆ ನಮಗೆ ಇತರ ಧರ್ಮಗಳಲ್ಲಿ ಸಮಭಾವ ವನ್ನು ಕಲಿಸುತ್ತದೆ ಪರಧರ್ಮಗಳ ಸಮಭಾವದಲ್ಲಿ ನಮ್ಮ ಧರ್ಮ ಅಪೂರ್ಣ ವಿದ್ದರೂ ಇರಬಹುದೆಂಬ ಅಂಗೀಕಾರವಿದೆ ಸತ್ಯಾರಾಧನೆ, ಅಹಿಂಸಾವ್ರತ ಇದನ್ನೇ ಕಲಿಸುತ್ತವೆ ಸಂಪೂರ್ಣ ಸತ್ಯವನ್ನು ನಾವು ಕಂಡುದೇ ಆದರೆ ಅದಕ್ಕಾಗಿ ಆಗ್ರಹವೇಕೆ? ಆಗ ನಾವು ಪರಮೇಶ್ವರನೇ ಆದೇವು ಏಕೆಂದರೆ, ಸತ್ಯವೇ ಪರಮೇಶ್ವರ ನಾವು ಸಾಧಕರು—ಪೂರ್ಣ ಸತ್ಯವನ್ನರಿಯೆವು ಆದುದರಿಂದಲೇ ಸತ್ಯದ ಆಗ್ರಹ, ಪುರುಷಾರ್ಥದ ಅವಕಾಶ ಇದರಲ್ಲಿ ನಮ್ಮ ಅಪೂರ್ಣತೆಯನ್ನು ನಾವು ಒಪ್ಪಿದೆವು ನಾವು ಅಪೂರ್ಣರಾದಮೇಲೆ ನಾವು ಕಲ್ಪಿಸಿದ ಧರ್ಮವೂ ಅಪೂರ್ಣ ಸ್ವತಂತ್ರ ಧರ್ಮವೇ ಸಂಪೂರ್ಣ ಧರ್ಮ ನಾವು ದೇವರನ್ನು ಕಂಡಿಲ್ಲ ಹಾಗೆಯೆ ಸಂಪೂರ್ಣ ಧರ್ಮವನ್ನೂ ಕಂಡಿಲ್ಲ ನಾವು ಕಲ್ಪಿಸಿಕೊಂಡ ಧರ್ಮ ಅಪೂರ್ಣ ಅದರಲ್ಲಿ ಸದಾ ಪರಿವರ್ತನೆಯಾಗು

ತ್ತಿರುತ್ತದೆ  ಆದುದರಿಂದಲೇ ನಾವು ಉತ್ತರೋತ್ತರ ಮೇಲೇರಬಲ್ಲೆವು! ಈಶ್ವರನ ಕಡೆ, ಸತ್ಯದ ಕಡೆ ದಿನದಿನವೂ ಮುಂದೆ ಸಾಗಬಲ್ಲೆವು  ಮನುಷ್ಯ ಕಲ್ಪಿತವಾದ ಎಲ್ಲ ಧರ್ಮಗಳೂ ಅಪೂರ್ಣ ಎಂದರೆ ಒಂದನ್ನು ಶ್ರೇಷ್ಠ ಇನ್ನೊಂದನ್ನು ಕನಿಷ್ಠ ಎನ್ನುವ ಅವಕಾಶವೇ ಇಲ್ಲ  ಎಲ್ಲವೂ ಸತ್ಯವೇ ಆದರೆ ಎಲ್ಲವೂ ಅಪೂರ್ಣ, ಆದುದರಿಂದ ದೋಷಕ್ಕೆ ಪಾತ್ರ. ಸಮಭಾವ ವಿದ್ದರೂ ದೋಷಗಳನ್ನು ನೋಡಬಹುದು  ನಮ್ಮ ಧರ್ಮದ ದೋಷಗಳನ್ನೂ ನಾವು ಅರಿಯಬೇಕು  ದೋಷಗಳಿವೆಯಲ್ಲ ಎಂದು ಧರ್ಮವನ್ನೇ ಬಿಡ ಬೇಕಾಗಿಲ್ಲ  ದೋಷಗಳನ್ನು ಬಿಡಬೇಕು  ಹೀಗೆ ಸಮಭಾವವನ್ನಿಟ್ಟರೆ ಉಳಿದ ಧರ್ಮಗಳಲ್ಲಿ ಗ್ರಾಹ್ಯವಾದುದಕ್ಕೆ ನಮ್ಮ ಧರ್ಮದಲ್ಲಿ ಸ್ಥಾನ ಕೊಡಲು ಸಂಕೋಚವಿರಬಾರದು  ಹಾಗೆ ಮಾಡಲೇಬೇಕು

ಈಗ ಒಂದು ಪ್ರಶ್ನೆ ಏಳುತ್ತದೆ  ಹಾಗಿದ್ದರೆ ಇಷ್ಟು ಬೇರೆ ಬೇರೆ ಧರ್ಮ ಗಳೇಕೆ? ಆತ್ಮ ಒಂದೇ  ಅದು ಚೇತನಗೊಳಿಸುವ ದೇಹಗಳು ಅನೇಕ ದೇಹಗಳ ಸಂಖ್ಯೆಯನ್ನು ನಾವು ಕಡಮೆ ಮಾಡಲಾರೆವು  ಆದರೆ ಆತ್ಮದ ಏಕತೆಯನ್ನು ಒಪ್ಪುತ್ತೇವೆ  ಒಂದು ಗಿಡಕ್ಕೆ ಒಂದೇ ಬುಡ, ಎಷ್ಟೋ ಕೊಂಬೆ, ಎಲೆ  ಹಾಗೆಯೆ ಇರುವುದು ಧರ್ಮ  ಆದರೆ ಮಾನವಲೋಕದಲ್ಲಿ ಅದು ಬಹುಧಾ ಆಗುತ್ತದೆ

ಎಲ್ಲಾ ಧರ್ಮಗಳೂ ಈಶ್ವರದತ್ತ  ಆದರೆ ಮನುಷ್ಯಕಲ್ಪಿತವಾದು ದರಿಂದ, ಮನುಷ್ಯರ ಮೂಲಕ ಅದರ ಪ್ರಚಾರವಾಗುವುದರಿಂದ ಅದು ಅಪೂರ್ಣ  ಈಶ್ವರದತ್ತ ಧರ್ಮ ಅಗತ್ಯ  ಮನುಷ್ಯ ಅದನ್ನು ಭಾಷೆಯ ಮೂಲಕ ಪ್ರಕಟಿಸುತ್ತಾನೆ  ಅದಕ್ಕೆ ಅರ್ಥ ಹಚ್ಚುತ್ತಾನೆ  ಯಾರ ಅರ್ಥ ವನ್ನು ಸತ್ಯ ಎನ್ನೋಣ? ಪ್ರತಿಯೊಬ್ಬರೂ ತಮ್ಮ ತಮ್ಮ ದೃಷ್ಟಿಯಿಂದ ಸತ್ಯವೇ  ಎಲ್ಲರೂ ಸುಳ್ಳು ಆಗುವುದೂ ಅಸಂಭವವಲ್ಲ  ಆದುದರಿಂದ ಎಲ್ಲ ಧರ್ಮಗಳಲ್ಲಿಯೂ ನಾವು ಸಮಭಾವವಿಡಬೇಕು  ಇದರಿಂದ ತನ್ನ ಧರ್ಮದಲ್ಲಿ ಉದಾಸೀನತೆ ಹುಟ್ಟದು  ಸ್ವಧರ್ಮದ ಅಂಧಪ್ರೇಮ ಕಳಿದು ಹೋಗಿ ಜ್ಞಾನಮಯ ಪ್ರೇಮ ಬರುತ್ತದೆ  ಪ್ರೇಮ ಹೆಚ್ಚು ಸಾತ್ತ್ವಿಕ, ನಿರ್ಮಲ ಆಗುತ್ತದೆ  ಸರ್ವಧರ್ಮಗಳಲ್ಲಿ ಸಮಭಾವ ಬಂದರೆ ನಮ್ಮ ದಿವ್ಯಚಕ್ಷು ಅರಳುತ್ತದೆ. ಧರ್ಮಾಂಧತೆ–ದಿವ್ಯದರ್ಶನಗಳಲ್ಲಿ ಉತ್ತರ–ದಕ್ಷಿಣದಷ್ಟು ಅಂತರ

ಧರ್ಮಜ್ಞಾನವಾದರೆ ಅಂತರಾಯ ಅಳಿದು ಸಮಭಾವ ಹುಟ್ಟುತ್ತದೆ ಈ ಸಮಭಾವವನ್ನು ವಿಕಾಸಗೊಳಿಸಿದರೆ ನಾವು ನಮ್ಮ ಧರ್ಮವನ್ನು ಹೆಚ್ಚು ಅರಿಯಬಲ್ಲೆವು

ಇದರಿಂದ ಧರ್ಮ–ಅಧರ್ಮಗಳ ಭೇದ ನಶಿಸದು ಇಲ್ಲಿ ಹೇಳುವುದು ಧರ್ಮವೆಂದು ನಿರ್ಧರವಾಗಿರುವವುಗಳ ಮಾತು ಈ ಎಲ್ಲ ಧರ್ಮಗಳ ಮೂಲ ಸಿದ್ಧಾಂತವೂ ಒಂದೇ ಎಲ್ಲದರಲ್ಲೂ ಶರಣ–ಶರಣೆಯರು ಹುಟ್ಟಿದಾರೆ ಈಗಲೂ ಇದಾರೆ

## ೧೧

## ಸರ್ವಧರ್ಮ ಸಮಭಾವ – ೨

ಮಂಗಳ ಪ್ರಭಾತ, ೩೦–೯–೧೯೩೦

ಈ ವಿಷಯ ಬಹಳ ಮಹತ್ವದ್ದು. ಇನ್ನೂ ಸ್ವಲ್ಪ ವಿಸ್ತಾರವಾಗಿ ಬರೆಯುತ್ತೇನೆ ನನ್ನ ಕೆಲವು ಅನುಭವಗಳನ್ನು ಬರೆದರೆ, ಬಹುಶಃ, ಸಮ ಭಾವದ ಅರ್ಥ ಹೆಚ್ಚು ಸ್ಪಷ್ಟವಾದೀತು ಸಬರ್ಮತಿಯಲ್ಲಿರುವ ಹಾಗೆ ಫೀನಿಕ್ಸ್ ಆಶ್ರಮದಲ್ಲಿಯೂ ನಿತ್ಯವೂ ಪ್ರಾರ್ಥನೆ ನಡೆಯುತ್ತಿತ್ತು ಅಲ್ಲಿ ಹಿಂದೂ, ಮುಸಲ್ಮಾನ್, ಕ್ರೈಸ್ತರು ಎಲ್ಲರೂ ಇದ್ದರು ಸ್ವರ್ಗೀಯ ಸೇಠ್ ರುಸ್ತುಂಜೀಯೋ ಅವರ ಮಕ್ಕಳೋ ಆಗಾಗ ಪ್ರಾರ್ಥನಾಸಭೆಗಳಿಗೆ ಬರುತ್ತಿದ್ದರು ಸೇಠ್ ರುಸ್ತುಂಜೀಗೆ 'ಮನೇ ವಹಾಲುಂ ವಹಾಲುಂ ದಾದಾ ರಾಮಜೀನು ನಾಮ್' —ನನಗೆ ರಾಮನಾಮ ಪ್ರಿಯ—ಎಂಬ ಗುಜರಾತಿ ಕೀರ್ತನೆ ಬಹಳ ಇಷ್ಟ ವಾಗಿತ್ತು ನನಗೆ ನೆನಪಿದೆ, ಒಂದು ದಿನ ಮಗನಲಾಲನೋ ಅಥವಾ ಕಾಶಿಯೋ ಈ ಕೀರ್ತನೆಯನ್ನು ನಮ್ಮೆಲ್ಲರಿಗೂ ಹೇಳಿ ಹಾಡಿಸುತ್ತಿದ್ದರು ಸೇಠ್ ರುಸ್ತುಂಜೀ ಬಹಳ ಉಲ್ಲಾಸದಿಂದ—ದಾದಾ ರಾಮಜೀಗೆ ಬದಲು ದಾದಾ ಹೋರಮಜದ್ ಹೇಳಿ, ನೋಡೋಣ—ಎಂದರು ಹಾಡು ಹೇಳುವವರೂ ಒಡನೆಯೆ ಈ ಸಲಹೆಯನ್ನು ನಡಸಿಯೇ ಬಿಟ್ಟರು ಆಮೇಲೆ ರುಸ್ತುಂಜೀ ಇದಿರಿಗಿದ್ದಾಗಲಂತೂ ಅದೇ ರೀತಿ ಹಾಡುತ್ತಿದ್ದೆವು. ಅವರಿಲ್ಲದಾಗಲೂ

ಒಮ್ಮೊಮ್ಮೆ ನಾವು 'ದಾದಾ ಹೋರಮುಜದ್' ಎಂದೇ ಭಜನೆಮಾಡುತ್ತಿದ್ದೆವು. ಸ್ವರ್ಗೀಯ ದಾವೂದ್ ಸೇರರ ಮಗ ಹುಸೇನ್ ಆಗಾಗ ಆಶ್ರಮದಲ್ಲಿಯೆ ಇದ್ದು ಬಿಡುತ್ತಿದ್ದ ಬಹಳ ಉತ್ಸಾಹದಿಂದ ಪ್ರಾರ್ಥನೆಯಲ್ಲಿ ಭಾಗವಹಿಸುತ್ತಿದ್ದ. ವಾದ್ಯದ ಜೊತೆಗೆ ತನ್ನ ಮಧುರಸ್ವರದಿಂದ 'ಯೇ ಬಹಾರೇ ಬಾಗ್ ದುನಿಯಾ ಚಂದ ರೋಜ್'—ಈ ಲೋಕವೆಂಬ ತೋಟ ಅರಳುವುದು ಒಂದೇ ಗಳಿಗೆ—ಎಂಬ ಹಾಡನ್ನು ನಮಗೆಲ್ಲರಿಗೂ ಕಲಿಸಿದ ಅನೇಕ ಸಲ ನಾವೂ ಪ್ರಾರ್ಥನೆಯಲ್ಲಿ ಇದನ್ನು ಹಾಡುತ್ತಿದ್ದೆವು ಆ ಹಾಡನ್ನು ಆಶ್ರಮ ಭಜನಾವಳಿಯಲ್ಲಿ ಸೇರಿಸಿರುವುದು ಸತ್ಯಪ್ರಿಯ ಹುಸೇನನ ನೆನಪಿಗಾಗಿ ಅವನಿಗಿಂತ ಹೆಚ್ಚು ತತ್ಪರತೆಯಿಂದ ಸತ್ಯಾಚರಣೆಮಾಡಿದ ನವಯುವಕನನ್ನು ನಾನು ಕಂಡಿಲ್ಲ. ಜೋಸೆಫ್ ರಾಯಪ್ಪನ್ ಆಗಾಗ ಆಶ್ರಮಕ್ಕೆ ಬರುತ್ತಿದ್ದ ಆತ ಕ್ರೈಸ್ತ. ಆತನಿಗೆ ಇಷ್ಟವಾದ ಭಜನೆ 'ವೈಷ್ಣವ ಜನ' ಆತನಿಗೆ ಸಂಗೀತ ಚೆನ್ನಾಗಿ ಬರುತ್ತಿತ್ತು ಒಂದು ಸಲ 'ವೈಷ್ಣವ'ಕ್ಕೆ ಬದಲು 'ಕ್ರಿಶ್ಚನ್ ಜನತೋ' ಎಂದು ಹಾಡಿದ ಎಲ್ಲರೂ ಆತನಿಗೆ ಜೊತೆಗೂಡಿಸಿದರು ಆಗ ಜೋಸೆಫ್‌ನ ಆನಂದಕ್ಕೆ ಮೇರೆಯಿರಲಿಲ್ಲ, ನಾನು ಗಮನಿಸಿದೆ.

ಆತ್ಮಸಂತೋಷಕ್ಕಾಗಿ ನಾನು ಬೇರೆ ಬೇರೆ ಧರ್ಮದ ಗ್ರಂಥಗಳನ್ನು ತಿರುವಿಹಾಕುತ್ತಿದ್ದಾಗ ಕ್ರಿಸ್ತೀ, ಇಸ್ಲಾಂ, ಜರಥುಸ್ತ್ರ, ಯಹೂದೀ, ಹಿಂದೂ ಧರ್ಮಗ್ರಂಥಗಳ ಪರಿಚಯವನ್ನು ಸಾಕಷ್ಟು ಮಾಡಿಕೊಂಡೆ ಈ ಅಧ್ಯಯನ ಮಾಡುವಾಗ ಸರ್ವಧರ್ಮಗಳಲ್ಲಿಯೂ ನನ್ನಲ್ಲಿ ಸಮಭಾವವಿತ್ತು ಎಂದು ಹೇಳಬಲ್ಲೆ ಆಗ ನನಗೆ ಈ ಜ್ಞಾನವಿರಲಿಲ್ಲ—ಸಮಭಾವ ಶಬ್ದದ್ದಾದರೂ ಪೂರಾ ಪರಿಚಯ ಆಗ ನನಗಿತ್ತೋ ಇಲ್ಲವೋ! ಆದರೂ ಹಿಂದಿನದನ್ನು ನೆನಪುಮಾಡಿಕೊಂಡರೆ, ಆ ಧರ್ಮಗಳ ಬಗ್ಗೆ ಟೀಕೆ-ಟಿಪ್ಪಣಿ ಮಾಡುವ ಆಸೆ ಎಳ್ಳಷ್ಟೂ ನನಗಿದ್ದ ಹಾಗೆ ತೋರುವುದಿಲ್ಲ ನಮ್ಮ ಧರ್ಮಗ್ರಂಥಗಳ ಹಾಗೆಯೆ ಅವೂ ಎಂದು ತಿಳಿದು ಆದರಪೂರ್ವಕವಾಗಿ ಅವನ್ನು ಓದಿದೆ ಎಲ್ಲದರಲ್ಲೂ ಮೂಲ ನೈತಿಕ ಸಿದ್ಧಾಂತ ಒಂದೇ ಎಂಬುದನ್ನೂ ಕಂಡೆ ಅನೇಕ ವಿಷಯ ನನಗೆ ಆಗ ಅರ್ಥವಾಗಲಿಲ್ಲ ಹಿಂದೂ ಧರ್ಮಗ್ರಂಥಗಳಲ್ಲಿಯೂ ಅಷ್ಟೆ ಈಗಲೂ ಅನೇಕ ವಿಷಯ ತಿಳಿದಿಲ್ಲ ಆದರೆ ನಮಗೆ ತಿಳಿಯಲಾರದುದೆಲ್ಲ ತಪ್ಪು ಎಂದು ತಿಳಿಯುವುದು ಬಹಳ ದುಡುಕು, ಅಪರಾಧ ಎಂದು ನನ್ನ

ಅನುಭವ ತೋರಿಸುತ್ತಿದೆ  ಮೊದಲು ಅರ್ಥವಾಗದಿದ್ದ ಎಷ್ಟೋ ಮಾತು ಈಗ ಬೆಳ್ಳಂಬೆಳಕಾಗಿ ಕಾಣುತ್ತಿವೆ  ಸಮಭಾವವನ್ನು ಅಭ್ಯಾಸಮಾಡಿದರೆ ಅನೇಕ ಗ್ರಂಥಿಗಳು ತಾವೇ ಬಿಚ್ಚಿಹೋಗುತ್ತವೆ  ಅಷ್ಟೇ ಅಲ್ಲ, ಕೆಲವು ವೇಳೆ ದೋಷ ಕಂಡರೂ ಅದನ್ನು ಹೇಳುವಲ್ಲಿ ನಮ್ರತೆ, ವಿವೇಕ ಕಾಣಬರುತ್ತವೆ  ಯಾರಿಗೂ ನೋವು ಆಗದು

ಒಂದು ಮಾತು ಉಳಿಯುತ್ತದೆ  ಸರ್ವಧರ್ಮಸಮಭಾವದಿಂದ ಧರ್ಮ-ಅಧರ್ಮದ ಭೇದ ಹೋಗದು  ಅಧರ್ಮದ ಬಗ್ಗೆ ಸಮಭಾವ ತೋರಿಸುವ ಅಭ್ಯಾಸವನ್ನು ನಾವು ಮಾಡಬಾರದು  ಹಾಗಾದರೆ, ಪ್ರತಿಯೊಬ್ಬನೂ ಧರ್ಮಾಧರ್ಮದ ನಿರ್ಣಯ ಮಾಡತೊಡಗಿದರೆ, ಇನ್ನು ಸಮಭಾವವೆಲ್ಲಿ ಬಂತು ಎಂದು ಕೇಳಬಹುದು  ಹೀಗೆ ನಿರ್ಣಯ ಮಾಡುವಾಗ ತಪ್ಪಾಗುವ ಸಂಭವವೂ ಉಂಟು  ಆದರೆ ನಮ್ಮೊಳಗೆ ನಿಜವಾದ ಅಹಿಂಸೆಯಿದ್ದರೆ ನಮ್ಮನ್ನು ಈ ವೈರಭಾವ ಬಾಧಿಸದು  ಅಧರ್ಮವನ್ನು ಕಂಡರೂ ಅದನ್ನು ಆಚರಿಸುವ ಅಧರ್ಮಿ ಸೋದರನಲ್ಲಿ ನಮಗೆ ಪ್ರೇಮಭಾವನೆ ತಾನೆ ? ಇದರಿಂದ ಅವನಾದರೂ ನಮ್ಮ ದೃಷ್ಟಿಯನ್ನು ಒಪ್ಪಿಕೊಂಡಾನು, ನಮ್ಮ ತಪ್ಪನ್ನಾದರೂ ನಮಗೆ ತೋರಿಸಿಕೊಟ್ಟಾನು. ಅಥವಾ ಪರಸ್ಪರ ಮತಭೇದವನ್ನು ಸೈರಿಸಿಕೊಂಡೇವು. ಇದಿರಾಳಿ ಅಹಿಂಸಕನಲ್ಲದಿದ್ದರೆ ನಮ್ಮ ಬಗ್ಗೆ ಕಠೋರವಾಗಿ ನಡೆದುಕೊಂಡಾನು. ಆದರೂ ನಾವು ನಿಜವಾಗಿಯೂ ಅಹಿಂಸೆಯ ಆರಾಧಕರಾದರೆ ನಮ್ಮ ಮೃದುತ್ವ ಅವನ ಕಠೋರತನವನ್ನು ಗೆದ್ದೀತು  ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲ  ಪರರ ತಪ್ಪನ್ನು ತೋರಿಸುವಾಗಲೂ ನಾವು ಅವರನ್ನು ಪೀಡಿಸಬಾರದು, ನಾವೇ ಕಷ್ಟ ಸೈರಿಸಬೇಕು  ಈ ಸ್ವರ್ಣನಿಯಮವನ್ನು ಪಾಲಿಸುವವನು ಎಲ್ಲಾ ಸಂಕಟಗಳನ್ನೂ ಜಯಿಸುತ್ತಾನೆ.

# ೧೨

# ನಮ್ರತೆ

ಮಂಗಳ ಪ್ರಭಾತ, ೭-೧೦-೧೯೩೦

ವ್ರತಗಳಲ್ಲಿ ನಮ್ರತೆಗೇ ಒಂದು ಬೇರೆ ಸ್ಥಾನ ಸಿಗಲಿಲ್ಲ, ಸಿಗಲೂ ಆರದು ಅಹಿಂಸೆಗೆ ಇದು ಒಂದು ಅರ್ಥ ಅದರಲ್ಲಿ ಇದು ಅಂತರ್ಗತ ಎನ್ನಿ, ಏಕೆಂದರೆ ಅಭ್ಯಾಸದಿಂದ ಬರುವಂಥದಲ್ಲ ನಮ್ರತೆ. ಸ್ವಭಾವದಲ್ಲಿಯೇ ಇರಬೇಕು ಮೊದಲು ಆಶ್ರಮದ ನಿಯಮಾವಳಿ ರಚಿತವಾದಾಗ, ಅದರ ಪ್ರತಿಗಳನ್ನು ನಾನು ಗೆಳೆಯರಿಗೆ ಕಳಿಸಿದ್ದೆ. ಸರ್ ಗುರುದಾಸ ಬ್ಯಾನರ್ಜಿ, ನಮ್ರತೆಗೆ ವ್ರತಗಳಲ್ಲಿ ಒಂದು ಸ್ಥಾನ ಕೊಡುವಂತೆ ಸೂಚಿಸಿದರು. ಇದಕ್ಕೆ ವ್ರತಗಳಲ್ಲಿ ಸ್ಥಾನ ಕೊಡಲು ಸಾಧ್ಯವಿಲ್ಲ ಎಂದು ಈಗ ಏನು ಕಾರಣ ಹೇಳಿದೇನೋ ಅದೇ ಕಾರಣವನ್ನೇ ಆಗಲೂ ಹೇಳಿದೆ

ವ್ರತಗಳಲ್ಲಿ ನಮ್ರತೆಗೆ ಸ್ಥಾನ ಕೊಡದಿದ್ದರೂ ವ್ರತಗಳಿಗಿಂತಲೂ ಹೆಚ್ಚು ಆವಶ್ಯಕವಾದ ಗುಣ ಇದು ಅವುಗಳಷ್ಟಾದರೂ ಖಂಡಿತ ಆವಶ್ಯಕ ಆದರೆ ಯಾರಿಗೂ ನಮ್ರತೆ ಅಭ್ಯಾಸದಿಂದ ಲಭಿಸಿದಂತಿಲ್ಲ ಸತ್ಯದ ಅಭ್ಯಾಸ ಸಾಧ್ಯ ದಯೆಯ ಅಭ್ಯಾಸವೂ ಸಾಧ್ಯ ಆದರೆ ನಮ್ರತೆಯ ಅಭ್ಯಾಸ ಎಂದರೆ ದಂಭದ ಅಭ್ಯಾಸ ಮಾಡಿದ ಹಾಗೇ ಎನ್ನಬಹುದು ನಮ್ರತೆಯೆಂದರೆ ದೊಡ್ಡವರು ಪರಸ್ಪರ ತೋರಿಸುವ ಮಾನ-ಮರ್ಯಾದೆ ಅಲ್ಲ ಒಬ್ಬ ಹೊರಗೆ ಸಾಷ್ಟಾಂಗ ನಮಸ್ಕಾರವನ್ನೆ ಮಾಡಬಹುದು ಇನ್ನೊಬ್ಬನಿಗೆ ಆದರೆ ಅವನ ಮನಸ್ಸಿನಲ್ಲಿ ಆ ಇನ್ನೊಬ್ಬನ ಬಗ್ಗೆ ಬರೀ ತಿರಸ್ಕಾರವೇ ತುಂಬಿದ್ದರೆ, ಅದು ನಮ್ರತೆಯಲ್ಲ— ಧೂರ್ತತನ ಒಬ್ಬ ರಾಮನಾಮ ಜಪಮಾಡುತ್ತಾನೆ, ತುಲಸೀಮಾಲೆ ತಿರುಗಿಸುತ್ತಾನೆ, ಮುನಿಯ ಹಾಗೆ ಸಮಾಜದಲ್ಲಿ ಓಡಾಡುತ್ತಾನೆ—ಒಳಗಡೆ ಅವನಲ್ಲಿ ಸ್ವಾರ್ಥ ತುಂಬಿದ್ದರೆ ಅದು ನಮ್ರತೆಯಲ್ಲ, ಪಾಷಂಡತನ.

ನಮ್ರ ಮನುಷ್ಯನಿಗೆ ತನ್ನ ನಮ್ರತೆಯ ಅರಿವೇ ಇರದು ಎಲ್ಲಿ, ಯಾವಾಗ ತಾನು ನಮ್ರನಾಗಿದ್ದನೋ ಗೊತ್ತಿಲ್ಲ ಸತ್ಯಾದಿಗಳನ್ನು ನಾವು ಅಳೆದು ನೋಡಬಹುದು ನಮ್ರತೆಯನ್ನು ಅಳೆಯಲು ಸಾಧ್ಯವಿಲ್ಲ ಸ್ವಾಭಾವಿಕ ನಮ್ರತೆ ಒಳಗೆ ಅಡಗಿರಲಾರದು ಆದರೂ ನಮ್ರ ಮನುಷ್ಯ ತಾನು ಅದನ್ನು

ನೋಡಲಾರ ವಶಿಷ್ಠ-ವಿಶ್ವಾಮಿತ್ರರ ಉದಾಹರಣೆಗಳನ್ನು ಆಶ್ರಮದಲ್ಲಿ ಅನೇಕ ಸಲ ನಾವು ಕೇಳಿದೇವೆ ನಮ್ಮ ನಮ್ರತೆ ಶೂನ್ಯದವರೆಗೂ ತಲಪ ಬೇಕು ನಾನೂ ಒಬ್ಬ ಗಣ್ಯ ಎಂಬ ಭೂತ ಆವೇಶವಾಯಿತೋ ನಮ್ರತೆ ಗಾಳಿಗೆ ಹಾರಿಹೋಯಿತು ಎಲ್ಲಾ ವ್ರತಗಳೂ ಮಣ್ಣುಪಾಲು ವ್ರತಗಳನ್ನು ಪಾಲಿಸುವವನು ಮನಸ್ಸಿನಲ್ಲಿ ತನ್ನ ವ್ರತಪಾಲನೆಯ ಅಭಿಮಾನ ತಾಳಿದರೆ ಸಾಕು, ಆ ವ್ರತಗಳ ಬೆಲೆಯೆ ನಾಶವಾಗುತ್ತದೆ ಅವನು ಸಮಾಜಕ್ಕೆ ವಿಷವಾಗುತ್ತಾನೆ ಸಮಾಜವೂ ಅವನ ವ್ರತಗಳಿಗೆ ಬೆಲೆ ಕೊಡದು, ಅವನಿಗೂ ಅದರ ಫಲ ಸಿಗದು ನಮ್ರತೆಯೆಂದರೆ ಅಹಂಭಾವದ ಆತ್ಯಂತಿಕ ಶೂನ್ಯತೆ ವಿಚಾರಮಾಡಿದರೆ ಈ ಜಗತ್ತಿನಲ್ಲಿ ಪ್ರಾಣಿಗಳೆಲ್ಲವೂ ಒಂದು ಅಣುವಿನಷ್ಟಾದರೂ ಮಹತ್ವದವಲ್ಲ ಎಂಬುದು ತಿಳಿಯುತ್ತದೆ ದೇಹಧಾರಿಗಳಂತೆ ನಾವು ಕೇವಲ ಕ್ಷಣಜೀವಿಗಳು ಕಾಲದ ಅನಂತಚಕ್ರದಲ್ಲಿ ನೂರು ವರ್ಷ ಯಾವ ಲೆಕ್ಕ ? ಆದರೆ ನಾವು ಈ ಅಹಂಭಾವದ ಸುಳಿಯಿಂದ ಪಾರಾದರೆ, ನಾವು ಏನೂ ಇಲ್ಲ— ಶೂನ್ಯ ಆದರೆ, ಆಗ ನಾವು ಎಲ್ಲವೂ ಆಗುತ್ತೇವೆ ನಾವೂ ಏನೋ ಸ್ವಲ್ಪ ಇದೇವೆ ಎಂದರೆ—ಈಶ್ವರನಿಂದ, ಪರಮಾತ್ಮನಿಂದ, ಸತ್ಯದಿಂದ ನಾವು ಬೇರೆ ಯಾದಂತೆ. ಆ ಏನೋ ಸ್ವಲ್ಪ ಅಳಿದರೆ ಪರಮಾತ್ಮನಲ್ಲಿ ಬೆರೆತಂತೆ ಸಮುದ್ರ ದಲ್ಲಿರುವ ನೀರಿನ ಹನಿಹನಿಗೂ ಸಮುದ್ರದ ಮಹತ್ತು ಇದೆ ಆದರೆ ಅದಕ್ಕೆ ಆ ಜ್ಞಾನವಿಲ್ಲ ಆ ಹನಿ ಸಮುದ್ರವನ್ನು ಬಿಟ್ಟು ಬೇರೆಯಾಗಿ ನಾನೂ ಇದೇನೆ ಎಂದಿತೋ ಒಣಗಿಯೇ ಹೋಯಿತು ನಮ್ಮ ಬಾಳನ್ನು ನೀರಿನ ಗುಳ್ಳೆಗೆ ಹೋಲಿಸುತ್ತಾರೆ. ಇದರಲ್ಲಿ ಸ್ವಲ್ಪವೂ ತಪ್ಪಿಲ್ಲ.

ಇಂಥ ನಮ್ರತೆ, ಶೂನ್ಯತೆ ಅಭ್ಯಾಸಮಾಡಿದರೆ ಬಂದೀತೆ ? ಆದರೆ ವ್ರತಗಳನ್ನು ಸರಿಯಾಗಿ ಅರಿತುಕೊಂಡರೆ ನಮ್ರತೆ ತಾನೇ ಬರುತ್ತದೆ. ಸತ್ಯ ವನ್ನು ಪಾಲಿಸಬಯಸುವವನು ಅಹಂಕಾರಿ ಹೇಗೆ ಆದಾನು ? ಪರರಿಗಾಗಿ ಪ್ರಾಣ ತೊರೆಯಲು ಸಿದ್ಧನಾದವನು ತನಗಾಗಿ ಒಂದು ಸ್ಥಾನವನ್ನು ಹುಡುಕು ತ್ತಾನೆಯೆ ? ಪರರಿಗಾಗಿ ಪ್ರಾಣ ತೆರಲು ತೀರ್ಮಾನಿಸಿದಾಗಲೇ ಅವನು ತನ್ನ ಮೈಯನ್ನು ಬಿಸುಟ ಇಂಥ ನಮ್ರತೆ ಪುರುಷಾರ್ಥಹೀನತೆಯಾದೀತೆ ? ಹಿಂದೂ ಧರ್ಮದಲ್ಲಿ ಆಲಸ್ಯ, ವಾಖಂಡಿತನಗಳನ್ನೂ ನಮ್ರತೆಯೆನ್ನುವುದುಂಟು ನಿಜವಾಗಿ ನಮ್ರತೆ ತೀವ್ರತರ ಪುರುಷಾರ್ಥ ಪರಮಾರ್ಥಕ್ಕಾಗಿ ಈ ನಮ್ರತೆ

ಭಗವಂತ ಹಗಲಿರುಳೂ ಬಿಡುವಿಲ್ಲದೆ ಅನವರತವೂ ಕೆಲಸ ಮಾಡುತ್ತಿದಾನೆ. ಒಂದು ಗಳಿಗೆ ಕಾಲು ನೀಡಲು ಕೂಡ ಬಿಡುವಿಲ್ಲ ನಾವು ಭಗವಂತನವರಾದರೆ, ಅವನಲ್ಲಿ ಲೀನವಾದರೆ ನಮ್ಮ ಉದ್ಯೋಗವೂ ಅವನದಕ್ಕೆ ಸಮಾನವಾಗಿ ಅನವರತವಾಗಬೇಕು ಸಮುದ್ರದಿಂದ ಬೇರೆ ಸಿಡಿದ ಹನಿಗೆ ಒಂದು ಗಳಿಗೆ ವಿರಾಮ ಸಿಕ್ಕೀತೇನೋ! ಸಮುದ್ರದ ಹನಿಗೆ ವಿರಾಮ? ಕಲ್ಪನೆ ಕೂಡ ಸಾಧ್ಯವಿಲ್ಲ ಸಮುದ್ರಕ್ಕೆ ವಿರಾಮವೇ ಇಲ್ಲವಲ್ಲ ನಮಗೂ ಅಷ್ಟೇ ಈಶ್ವರ ರೂಪ ಸಮುದ್ರದಲ್ಲಿ ನಾವು ಮುಳುಗಿದೆವೋ ನಮ್ಮ ಆರಾಮ–ವಿರಾಮ ಮುಗಿಯಿತು ಆಗ ಆರಾಮ ಅಗತ್ಯವೂ ಇಲ್ಲ ಆಗ ನಿದ್ದೆಯೂ ಕೆಲಸವೇ ಹೃದಯದಲ್ಲಿ ಭಗವದ್ವಿಚಾರವನ್ನು ಪ್ರತಿಷ್ಠಿಸಿ ನಿದ್ದೆಮಾಡುತ್ತೇವೆ ಈ ಮಹಾ ಅಶಾಂತಿಯಲ್ಲಿಯೆ ನಿಜವಾದ ಶಾಂತಿ, ಆರಾಮ ಇದೆ ಆದುದರಿಂದ ನಿಜವಾದ ನಮ್ರತೆ ಪ್ರಾಣಿಮಾತ್ರದ ಸೇವೆಗಾಗಿ ನಮ್ಮಿಂದ ಸರ್ವಸಮರ್ಪಣವನ್ನು ಬಯಸುತ್ತದೆ ಆ ಅವಸ್ಥೆಯನ್ನು ವರ್ಣಿಸುವುದು ಕಷ್ಟ, ಆದರೆ ಅನುಭವಿಸಲು ಸಾಧ್ಯ, ಸರ್ವಾರ್ಪಣೆ ಮಾಡಿದವರಿಗೆ ಈ ಅನುಭವವಾಗಿದೆ ನಮಗೂ ಅದು ಸಾಧ್ಯ. ಇದನ್ನು ಅನುಭವಿಸಲೆಂದೇ ನಾವೆಲ್ಲರೂ ಈ ಆಶ್ರಮದಲ್ಲಿ ಸೇರಿದೇವೆ. ನಮ್ಮ ಎಲ್ಲ ವ್ರತಗಳೂ ಕಾರ್ಯವೂ ಈ ಅನುಭವಕ್ಕಾಗಿಯೇ ನಮ್ಮೊಳಗೆ ಸತ್ಯವಿದ್ದರೆ ಒಂದಲ್ಲ ಒಂದು ದಿನ ನಮಗೆ ಅದು ಲಭಿಸುತ್ತದೆ

## ೧೩

## ಸ್ವದೇಶಿ

ಸ್ವದೇಶಿ ಈ ಯುಗದ ಮಹಾವ್ರತ ಆತ್ಮದ ಧರ್ಮಕ್ಕೆ, ಪ್ರಕೃತಿ ನಿಯಮಕ್ಕೆ ಯಾವ ಶಾಸನವೂ ಅಗತ್ಯವಿಲ್ಲ ಅವು ಸ್ವಯಂ-ಭೂ, ಸ್ವಯಂ-ಪ್ರವರ್ತಿತ ಅಜ್ಞಾನದಿಂದಲೋ, ಬೇರೆ ಕಾರಣದಿಂದಲೋ ಮನುಷ್ಯ ಈ ಧರ್ಮಗಳನ್ನು ಅಸಡ್ಡೆಮಾಡುತ್ತಾನೆ, ಮೀರಿ ನಡೆಯುತ್ತಾನೆ. ಆಗ ಆ ಧರ್ಮವನ್ನು ಪಾಲನೆಮಾಡಲು ಮನುಷ್ಯನಿಗೆ ವ್ರತಗಳು ಬೇಕಾಗುತ್ತವೆ ಸ್ವಭಾವತಃ ಶಾಕಾಹಾರಿಯಾದವನು ಮಾಂಸಾಹಾರವನ್ನು ಮುಟ್ಟುವುದಿಲ್ಲ

ಎಂಬ ವ್ರತ ಹಿಡಿಯಬೇಕಾಗಿಲ್ಲ ಅವನಿಗೆ ಮಾಂಸದಲ್ಲಿ ಸೆಳೆತವಿಲ್ಲ, ಅಸಹ್ಯವೇ ಇದೆ.

ಸ್ವದೇಶಿ ಆತ್ಮದ ಧರ್ಮ. ಈಗ ಅದು ಮರೆತುಹೋಗಿದೆ ಆದುದರಿಂದ ಅದನ್ನೊಂದು ವ್ರತವಾಗಿ ತೊಡಬೇಕಾಗಿದೆ ಸ್ವದೇಶೀಯ ಕಟ್ಟಕಡೆಯ ಆಧ್ಯಾತ್ಮಿಕ ಅರ್ಥ, ಸಮಸ್ತ ಸ್ಥೂಲ ಸಂಬಂಧಗಳಿಂದಲೂ ಆತ್ಯಂತಿಕ ಮುಕ್ತಿ ದೇಹವೂ ಆತ್ಮಕ್ಕೆ ಪರದೇಶಿಯೇ ಬೇರೆ ಆತ್ಮದೊಡನೆ ಏಕರೂಪವಾಗಲು ಈ ದೇಹ ಅಡ್ಡಿ ಆತ್ಮದ ದಾರಿಯಲ್ಲಿ ಇದು ಅಡಚಣೆ, ಆತಂಕ ಸಮಸ್ತ ಜೀವರಾಶಿಯೊಡನೆ ಐಕ್ಯವನ್ನು ಸಾಧಿಸುತ್ತ ಸ್ವದೇಶೀ ಧರ್ಮವನ್ನು ಅರಿತು ಅನುಸರಿಸುವ ಸಾಧಕ ದೇಹವನ್ನೂ ತ್ಯಜಿಸುತ್ತಾನೆ ದೇಹಮುಕ್ತಿಯನ್ನು ಪಡೆಯುತ್ತಾನೆ

ಸ್ವದೇಶಿಗೆ ಈ ಅರ್ಥ ಸರಿಯೆಂದರೆ, ನಮ್ಮ ನೆರೆಹೊರೆಯವರ ಸೇವೆಯಲ್ಲಿ ನಾವು ನಿರತರಾಗಿರಬೇಕಾದುದೇ ಸ್ವದೇಶೀ ಧರ್ಮ, ಇದು ಸುಲಭವಾಗಿ ತಿಳಿಯುತ್ತದೆ. ನೆರೆಹೊರೆಯವರ ಸೇವೆ ಮಾಡುವಾಗ ದೂರದಲ್ಲಿರುವವರನ್ನು ಕೈಬಿಟ್ಟಂತಾಯಿತು, ಅವರಿಗೆ ಹಾನಿಯಾಯಿತು ಎನಿಸುವ ಸಂಭವವಿದೆ ಅದು ಬರೀ ಆಭಾಸ ಸ್ವದೇಶಿಯ ಶುದ್ಧಸೇವೆಯಿಂದ ಪರದೇಶಿಗಳ ಶುದ್ಧ ಸೇವೆಯೂ ಆಗುತ್ತದೆ ‘ಯಥಾ ಪಿಂಡೇ ತಥಾ ಬ್ರಹ್ಮಾಂಡೇ’ ಇದಕ್ಕೆ ವಿರುದ್ಧವಾಗಿ, ದೂರದಲ್ಲಿರುವವರ ಸೇವೆ ಮಾಡುವ ಮೋಹವನ್ನಿಟ್ಟುಕೊಂಡರೆ, ಅದಂತೂ ಸಾಧಿಸುವುದೇ ಇಲ್ಲ, ಇಲ್ಲಿ ನೆರೆಹೊರೆಯ ಸೇವೆಯೇನೋ ಬಿಟ್ಟು ಹೋಗುತ್ತದೆ. ಇಲ್ಲಿಯೂ ಇಲ್ಲ, ಅಲ್ಲಿಯೂ ಇಲ್ಲ—ಎರಡೂ ಇಲ್ಲವಾಗುತ್ತದೆ. ನಾನಿರುವ ಕಡೆ ನನ್ನನ್ನು ನಂಬಿರುವ ಬಂಧುಬಳಗ ಸ್ವಲ್ಪ, ನೆರೆಹೊರೆಯ ಗ್ರಾಮವಾಸಿಗಳು ಕೆಲವರು ಇದಾರೆ ಕೆಲಮಟ್ಟಿಗೆ ಅವರು ನನ್ನ ಮೇಲೆ ಆಧಾರಗೊಂಡಿದಾರೆ ನನ್ನ ಆಸರೆ–ಆಧಾರಗಳಿಗೆ ಅವರಿಗೊಂದು ಹಕ್ಕು ಇದೆ ಇವರೆಲ್ಲರನ್ನೂ ನಾನು ಕೈಬಿಟ್ಟು ದೂರದವರ ಸೇವೆಮಾಡಲು ಬಯಸಿದರೆ ಇವರ ಆಧಾರ ಕಡಿದುಹೋಯಿತು ನಿರಾಧಾರರಾದರು ದೂರದವರಿಗಂತೂ ನನ್ನ ಸೇವೆ ಸಲ್ಲಲಿಲ್ಲ ಅಲ್ಲಿನ ವಾತಾವರಣ ಕೆಟ್ಟಿತು ಎರಡೂ ಕಡೆ ನಷ್ಟ. ಸ್ವದೇಶೀ ವ್ರತಭಂಗದ ಫಲ ಇದು.

ಇಂಥ ಅನೇಕ ದೃಷ್ಟಾಂತಗಳನ್ನು ಕೊಟ್ಟು ಸ್ವದೇಶೀ ಧರ್ಮವನ್ನು ಸಿದ್ಧಮಾಡಬಹುದು ಇದಕ್ಕಾಗಿಯೇ ಗೀತೆಯ 'ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ' ವಚನ ಹುಟ್ಟಿದೆ ಪ್ರಾಕೃತಿಕ ಜೀವನದಲ್ಲಿ ಇದರ ಅರ್ಥ—ಸ್ವದೇಶಿ ಗೀತೆ ಸ್ವಧರ್ಮಕ್ಕೆ ಹೇಳಿದ ಮಾತೇ ಸ್ವದೇಶಿಗೂ ಅನ್ವಯಿಸುತ್ತದೆ 'ಸ್ವದೇಶಿಯನ್ನು ಪಾಲಿಸುತ್ತ ಸತ್ತರೂ ಚಿಂತೆಯಿಲ್ಲ, ಪರದೇಶಿ ಭಯಾನಕ'

ಸ್ವದೇಶಿಯನ್ನು ಅರ್ಥ ಮಾಡಿಕೊಳ್ಳದಿದ್ದಾಗಲೇ ಎಲ್ಲಾ ಗಡಿಬಿಡಿ ನನ್ನ ಕುಟುಂಬದ ಮೋಹದಿಂದ ಅದನ್ನು ಪೋಷಿಸಲು ಕಳವು ಮಾಡಿದರೆ ಅದು ಸ್ವದೇಶಿಯಲ್ಲ ಕುಟುಂಬಕ್ಕಾಗಿ ನಾನು ನ್ಯಾಯವಾಗಿ ಮಾಡಬೇಕಾದುದನ್ನು ಮಾಡಬೇಕು ಅದು ಧರ್ಮ ಆ ಧರ್ಮಪಾಲನೆಯೇ ನನಗೆ ಸರ್ವವ್ಯಾಪಿ ಧರ್ಮದ ಜ್ಞಾನವಾಗಬೇಕು ಸ್ವಧರ್ಮದ ಪಾಲನೆಯಿಂದ ಪರಧರ್ಮಿಗಾಗಲಿ ಪರಧರ್ಮಕ್ಕಾಗಲಿ ಎಂದಿಗೂ ಹಾನಿಯಾಗದು! ಆಗಬಾರದು ಹಾನಿಯಾದರೆ ನಾವು ಹಿಡಿದ ಧರ್ಮ ಸ್ವಧರ್ಮವಲ್ಲ, ಸ್ವಾಭಿಮಾನ ಅದನ್ನು ಬಿಡಬೇಕು.

ಸ್ವದೇಶೀ ಧರ್ಮವನ್ನು ಪಾಲಿಸುವಾಗ ಮತ್ತೊಮ್ಮೆ ತನ್ನ ಕುಟುಂಬವನ್ನು ಬಲಿದಾನ ಕೊಡಲೂ ಬೇಕಾಗಬಹುದು ಹಾಗೆ ಮಾಡಿದಾಗ ಅದರಿಂದಲೂ ಕುಟುಂಬದ ಸೇವೆಯಾಗಬೇಕು ತನ್ನನ್ನು ತಾನು ಕಳೆದುಕೊಂಡು ತನ್ನ ತಾನುಳಿಸಿಕೊಂಡಂತೆ, ಕುಟುಂಬವನ್ನು ಕಳೆದುಕೊಂಡು ಕುಟುಂಬವನ್ನು ಕಾಪಾಡಬಹುದು ದೃಷ್ಟಾಂತಕ್ಕಾಗಿ ನಮ್ಮೂರಿಗೆ ಪ್ಲೇಗಿನ ಪಿಡುಗು ಬಡಿಯಿತು ಎನ್ನಿ. ಪ್ಲೇಗು ಬಡಿದ ರೋಗಿಗಳ ಸೇವೆ ಮಾಡುತ್ತ ನಾನೂ ನನ್ನ ಹೆಂಡತಿಮಕ್ಕಳೂ ಎಲ್ಲರೂ ರೋಗಕ್ಕೆ ತುತ್ತಾಗಿ ಸತ್ತೆವೆನ್ನಿ ಆದರಿಂದ ನಾನು ನನ್ನ ಕುಟುಂಬವನ್ನು ಕೊಂದಂತಾಗಲಿಲ್ಲ, ಕುಟುಂಬದ ಸೇವೆ ಮಾಡಿದೆ ಸ್ವದೇಶಿಯಲ್ಲಿ ಸ್ವಾರ್ಥವಿಲ್ಲ, ಇದ್ದರೆ ಅದು ಶುದ್ಧಸ್ವಾರ್ಥ ಶುದ್ಧ ಸ್ವಾರ್ಥ ಎಂದರೆ ಪರಮಾರ್ಥ ಶುದ್ಧಸ್ವದೇಶಿಯೆಂದರೆ ಪರಮಾರ್ಥದ ಪರಾಕಾಷ್ಠೆ

ಈ ವಿಚಾರಧಾರೆಯನ್ನು ಅನುಸರಿಸಿಯೇ ನಾನು ಖಾದಿಯಲ್ಲಿ ಶುದ್ಧ ಸಾಮಾಜಿಕ ಧರ್ಮವನ್ನು ಕಂಡೆ. 'ಈ ದೇಶದಲ್ಲಿ ಈ ಕಾಲಕ್ಕೆ ಎಲ್ಲರೂ

ಅಗತ್ಯವಾಗಿ ಪಾಲಿಸಬೇಕಾದ, ಎಲ್ಲರೂ ಸುಲಭವಾಗಿ ತಿಳಿದುಕೊಳ್ಳಬಲ್ಲ ಸ್ವದೇಶೀ ಧರ್ಮ ಯಾವುದು ? ಎಲ್ಲರೂ ಸುಲಭವಾಗಿ ಪಾಲಿಸಬಲ್ಲ, ಹಿಂದೂಸ್ಥಾನದ ಈ ಕೋಟ್ಯಾಂತರ ಜನರನ್ನು ರಕ್ಷಿಸಬಲ್ಲ ಸ್ವದೇಶೀ ಧರ್ಮ ಯಾವುದು ?' —ಈ ಪ್ರಶ್ನೆ ಹಾಕಿಕೊಂಡೆ ಉತ್ತರ ಬಂತು—ಖಾದಿ, ಖಾದಿಯೊಂದೇ ಇದೆಲ್ಲಕ್ಕೂ ಉತ್ತರ

ಖಾದಿಯ ಮೂಲಕ ನಾವು ಸ್ವದೇಶೀ ಧರ್ಮವನ್ನು ಪಾಲಿಸಿದರೆ ಪರದೇಶಿ ಗಿರಣಿಗಳವರಿಗೆ ನಷ್ಟವಾದೀತೆಂದು ಯಾರೂ ಭಾವಿಸಬೇಕಾಗಿಲ್ಲ ಕಳ್ಳ ತಾನು ಕದ್ದ ಪದಾರ್ಥವನ್ನು ಹಿಂದಕ್ಕೆ ಕೊಟ್ಟರೆ, ಕದಿಯದಂತೆ ಅವನಿಗೆ ಅಡ್ಡಿ ಮಾಡಿದರೆ, ಅವನಿಗಾದ ನಷ್ಟವೇನು ? ಲಾಭವೇ ಆಯಿತು ಹೆಂಡ ಕುಡಿಯುವವರು ಕುಡಿತವನ್ನು, ಅಫೀಮು ತಿನ್ನುವವರು ಅಫೀಮನ್ನು ಬಿಟ್ಟರೆ ಹೆಂಡದ ಅಂಗಡಿಯವನಿಗೆ ಅಫೀಮಿನಂಗಡಿಯವನಿಗೆ ನಷ್ಟವೇನಾಗಲಿಲ್ಲ, ಲಾಭವೇ ಆಯಿತು ಈ ಪಾಪದ ಸಂಪಾದನೆ ನಾಶವಾದರೆ ಅವನಿಗಾಗಲಿ ಜಗತ್ತಿಗಾಗಲಿ ಕಿಂಚಿತ್ತೂ ನಷ್ಟವಿಲ್ಲ, ಲಾಭವೇ

ಆದರೆ ಹೇಗೋ ಒಂದೆರಡೆಳೆ ದಾರವನ್ನು ರಾಟೆಯಲ್ಲಿ ನೂತು ಖಾದಿ ಬಟ್ಟೆ ತೊಟ್ಟರೆ ಸ್ವದೇಶೀ ಧರ್ಮದ ಪೂರ್ಣ ಪಾಲನೆಯಾಗಲಿಲ್ಲ ಹಾಗೆ ತಿಳಿದವರು ಭ್ರಾಂತಿಯಲ್ಲಿ ಮುಳುಗಿದಾರೆ ಸಾಮಾಜಿಕ ಸ್ವದೇಶಿಗೆ ಖಾದಿ ಮೊದಲನೆ ಮೆಟ್ಟಲು, ಸ್ವದೇಶಿಯ ಕೊನೆಯಲ್ಲ ಬಟ್ಟೆ ಮಾತ್ರ ಖಾದಿ, ಉಳಿದುದೆಲ್ಲವೂ ಪರದೇಶಿ—ಇಂಥವರು ಅನೇಕರು ಇವರನ್ನು ಸ್ವದೇಶೀ ಧರ್ಮಪಾಲಕರು ಎನ್ನಲು ಸಾಧ್ಯವಿಲ್ಲ ಇವರು ನೀರು ಹರಿದತ್ತ ಹೋಗುವ ಜನ ಸ್ವದೇಶೀ ವ್ರತವನ್ನು ಪಾಲಿಸುವವನು ತನ್ನ ನೆರೆಹೊರೆಯನ್ನು ನಿರೀಕ್ಷಿಸಿ, ಅವರು ಕೈಯಿಂದ ಮಾಡಿದ ಪದಾರ್ಥಗಳನ್ನೇ ಕೊಂಡು ಸಾಧ್ಯವಿದ್ದಷ್ಟು ಅವರ ಸೇವೆ ಮಾಡಿಯಾನು ಸ್ವದೇಶೀ ಪದಾರ್ಥ ತುಟ್ಟಿಯಾಗಲಿ ಕೀಳುತರದ್ದಾಗಲಿ ಅದನ್ನೇ ಕೊಂಡಾನು ಆ ದೋಷಗಳನ್ನು ಅವರು ಸುಧಾರಿಸಿಕೊಳ್ಳುವಂತೆ ಹೇಳಿ ಪ್ರಯತ್ನಿಸಿಯಾನು ಆ ದೋಷಗಳಿಗಂಜಿ ಅವನ್ನು ಬಿಟ್ಟು ಪರದೇಶೀ ಪದಾರ್ಥಗಳನ್ನು ಉಪಯೋಗಿಸಲಾರ ಅಂಥವನು ವ್ರತಧಾರಿ

ಆದರೆ ಸ್ವದೇಶೀ ಧರ್ಮವನ್ನರಿತವನು ತನ್ನ ಬಾವಿಯೊಳಗೇ ಮುಳುಗಲಾರ. ಪರದೇಶದ್ದಾದ ಮಾತ್ರಕ್ಕೇ ಅದನ್ನು ಬಿಡುವುದು, ಸ್ವದೇಶದಲ್ಲಿ

ತಯಾರಾಗಲಾರದ ಅಥವಾ ಬಹು ಕಷ್ಟಸಾಧ್ಯವಾದ ಪದಾರ್ಥಗಳನ್ನು ಪರ ದೇಶದ ಮೇಲಣ ದ್ವೇಷದಿಂದ ಸ್ವದೇಶದಲ್ಲಿ ಮಾಡುತ್ತ ಕೂಡುವುದು ಸ್ವದೇಶೀ ಧರ್ಮವಲ್ಲ, ರಾಷ್ಟ್ರದ ಹಣ–ಕಾಲಗಳ ಅಪವ್ಯಯ ಸ್ವದೇಶೀ ಧರ್ಮವನ್ನು ಪಾಲಿಸುವವನು ಪರದೇಶವನ್ನು ದ್ವೇಷಿಸಲಾರ ಪೂರ್ಣ ಸ್ವದೇಶಿಯಲ್ಲಿ ಯಾರ ದ್ವೇಷವೂ ಇಲ್ಲ ಸ್ವದೇಶಿ ಸಂಕುಚಿತ ಧರ್ಮವಲ್ಲ ಪ್ರೇಮದಲ್ಲಿ ಅಹಿಂಸೆಯಲ್ಲಿ ಹುಟ್ಟಿಬಂದ ಸುಂದರ ಧರ್ಮ *

೧೪

## ವ್ರತಗಳ ಆವಶ್ಯಕತೆ

ಮಂಗಳ ಪ್ರಭಾತ, ೧೪–೧೦–೧೯೩೦

ಈ ಪತ್ರಮಾಲೆಯಲ್ಲಿ ವ್ರತಗಳ ಮಹತ್ವವನ್ನು ಕುರಿತು ಅಲ್ಲಲ್ಲಿ ಸ್ವಲ್ಪ ಬರೆದೇ ಇದೇನೆ ಆದರೂ ಬಾಳಿನಲ್ಲಿ ವ್ರತಗಳು ಎಷ್ಟು ಅಗತ್ಯ ಎಂಬುದನ್ನು ಚರ್ಚಿಸುವುದು ಅಗತ್ಯ

ಒಂದು ಪ್ರಬಲ ಸಂಪ್ರದಾಯವಿದೆ ಇಂಥಿಂಥ ನಿಯಮಗಳನ್ನು ಪಾಲಿಸ ಬೇಕು, ಅದು ಸರಿ ಆದರೆ ಅವನ್ನೇ ವ್ರತವಾಗಿ ತೊಡುವ ಅಗತ್ಯವಿಲ್ಲ, ಈ ಮಾತು ಮನೋದೌರ್ಬಲ್ಯಸೂಚಕ, ಸ್ವಲ್ಪಮಟ್ಟಿಗೆ ಹಾನಿಕಾರಕ ಎಂದು ಹೇಳುತ್ತಾರೆ ಒಂದು ವ್ರತ ಹಿಡಿದಮೇಲೆ ಆ ನಿಯಮ ಒಂದು ಆತಂಕ ರೂಪದ್ದು ಅಥವಾ ಪಾಪಮಯವಾದುದು ಎಂದು ತಿಳಿದರೆ, ಆಗಲೂ ಆ ವ್ರತ ವನ್ನು ಬಿಡದಂತೆ ನಡಸಬೇಕೆಂದರೆ ಎಷ್ಟು ಅಸಹ್ಯ ಎನ್ನುತ್ತಾರೆ ಒಂದು ಉದಾಹರಣೆ ಕೊಟ್ಟು, ಹೆಂಡ ಕುಡಿಯದಿರುವುದು ಒಳ್ಳೆಯದು, ಕುಡಿಯ ಬಾರದು, ಆದರೆ ಯಾವಾಗಲಾದರೂ ಒಂದು ಸಲ ಕುಡಿದರೆ ಏನು ತಪ್ಪು ?

---

* ಈ ಪ್ರವಚನ ಯರವಡಾ ಮಂದಿರದಲ್ಲಿ ೧೯೩೦ರಲ್ಲಿ ಬರೆದುದಲ್ಲ ೧೯೩೧ರಲ್ಲಿ ಹೊರಗೆ ಬಂದಮೇಲೆ ಬರೆದುದು ರಾಜಕೀಯ ವಿಷಯಗಳನ್ನು ಕುರಿತು ಬರೆಯಬಾರ ದೆಂಬ ನಿರ್ಬಂಧವಿತ್ತು ಸೆರೆಯಲ್ಲಿ. ರಾಜಕೀಯದ ಪರೋಕ್ಷ ಸಂಬಂಧವಿಲ್ಲದೆ ಸಾಧ್ಯವಿಲ್ಲ ಎಂದು ಇದನ್ನು ಆಗ ಬರೆಯಲಿಲ್ಲ.

ಔಷಧಕ್ಕಾಗಿ ಕುಡಿದರೆ ತಪ್ಪಿಲ್ಲವಲ್ಲ. ಆದುದರಿಂದ ಕುಡಿಯುವುದಿಲ್ಲವೆಂದು ವ್ರತ ಹಿಡಿದರೆ ನಮ್ಮ ಕೈಕಾಲನ್ನು ನಾವೇ ಕತ್ತರಿಸಿಕೊಂಡಂತೆ ಇದೇ ಮಾತೇ ಇತರ ವಿಷಯಗಳಿಗೂ ಒಳ್ಳೆಯದಕ್ಕಾಗಿ ಸುಳ್ಳು ಹೇಳಬಾರದೇಕೆ ?

ಈ ತರ್ಕದಲ್ಲಿ ನನಗೆ ಹುರುಳು ಕಾಣದು ವ್ರತ ಎಂದರೆ ದೃಢನಿಶ್ಚಯ ಅಡ್ಡಿ-ಅಡಚಣೆಗಳನ್ನು ದಾಟಿಹೋಗಲಿಕ್ಕೇ ವ್ರತಗಳ ಆವಶ್ಯಕತೆ ಅನನುಕೂಲವಾದರೂ ಭಂಗವಾಗದಿದ್ದರೆ-ಅದು ದೃಢನಿಶ್ಚಯ ಇಂಥ ದೃಢನಿಶ್ಚಯವಿಲ್ಲದೆ ಮನುಷ್ಯ ಉತ್ತರೋತ್ತರ ಮೇಲೇರಲಾರ ಎಂಬುದಕ್ಕೆ ಇಡೀ ಲೋಕದ ಅನುಭವವೇ ಸಾಕ್ಷಿ ಆದರೆ ಪಾಪವನ್ನು ಮಾಡುವ ವ್ರತ ಇರಲಾರದು ಮೊದಲು ಪುಣ್ಯವಾಗಿ ಕಂಡುಬಂದ ವ್ರತ ಆಮೇಲೆ ಪಾಪ ಎಂದು ನಿರ್ಧಾರವಾದರೆ, ಆ ವ್ರತವನ್ನು ಬಿಡಬೇಕಾದುದೇ ಧರ್ಮ. ಆದರೆ ಇಂಥ ಸಂದೇಹಗ್ರಸ್ತ ವಿಷಯಗಳ ಬಗ್ಗೆ ಯಾರೂ ವ್ರತ ತೊಡರು, ತೊಡಲೂ ಬಾರದು ಸರ್ವಮಾನ್ಯವಾದ ಧರ್ಮಗಳ ವಿಷಯದಲ್ಲಿ, ನಮಗೆ ಅದರ ಅಡಚಣೆ ರೂಢಿಗತವಾಗದಿರುವಾಗ, ವ್ರತ ಹಿಡಿಯಬೇಕು ಅಂಥ ಸಂದರ್ಭಗಳಲ್ಲಿ ಪಾಪದ ಸಂಭವ ಬರೀ ಊಹೆ ನಾನು ಸತ್ಯ ಹೇಳಿದರೆ ಯಾರಿಗಾದರೂ ಹಾನಿಯಾದೀತಲ್ಲ ಎಂದು ಸತ್ಯವಾದಿ ಆಲೋಚಿಸುತ್ತ ಕುಳಿತುಕೊಳ್ಳುವುದಿಲ್ಲ ಸತ್ಯದಿಂದ ಲೋಕದಲ್ಲಿ ಯಾರಿಗೂ ಹಾನಿಯಾಗದು ಎಂಬ ದೃಢವಿಶ್ವಾಸ ಅವನಿಗಿರಬೇಕು ಮದ್ಯಪಾನದ ವಿಷಯದಲ್ಲಿಯೂ ಇದೇ ಆ ವ್ರತ ಹಿಡಿಯುವಾಗಲೇ ಔಷಧಕ್ಕಾಗಿ ಅದರಲ್ಲಿ ಅಪವಾದಕ್ಕೆ ಅವಕಾಶ ಮಾಡಬೇಕು, ಇಲ್ಲವೆ ವ್ರತ ಹಿಡಿದ ಮೇಲೆ ಏನೇ ಆಗಲಿ, ಪ್ರಾಣವೇ ಹೋಗಲಿ, ಅದನ್ನು ನಡೆಯಿಸಬೇಕು ಔಷಧರೂಪದಲ್ಲಿ ಹೆಂಡ ಕುಡಿಯಲಿಲ್ಲ, ಈ ದೇಹ ಬಿದ್ದೇಹೋಯಿತು ಏನಾಯಿತು ? ಹೆಂಡ ಕುಡಿದರೆ ತಾನೆ ಈ ದೇಹ ಉಳಿದೇ ಉಳಿಯುತ್ತದೆಂದು ಹೇಳಬಲ್ಲವರು ಯಾರು ? ಒಂದು ವೇಳೆ ಆ ಗಳಿಗೆಯಲ್ಲಿ ದೇಹವನ್ನು ಕಾಪಾಡಿದೆವು ಮರುಗಳಿಗೆಯಲ್ಲಿ ಮತ್ತೇನಾದರೂ ಕಾರಣದಿಂದ ದೇಹ ಬಿದ್ದುಹೋಗುವುದಿಲ್ಲ ಎಂಬ ಭರವಸೆಯೇನಿದೆ ? ಅದಕ್ಕೆ ಬದಲು—ಶರೀರ ಬಿದ್ದುಹೋದರೂ ಚಿಂತೆಯಿಲ್ಲ, ಹೆಂಡ ಕುಡಿಯೆ ಎಂಬವನ ದೃಷ್ಟಾಂತ ಹೆಂಡ ಕುಡಿಯುವ ಜನರ ಮೇಲೆ ಎಂಥ ಅದ್ಭುತ ಪ್ರಭಾವ ಬೀರೀತೋ, ಅದರಿಂದ ಲೋಕಕ್ಕೆ ಎಷ್ಟು ಲಾಭವಾದೀತೋ ! ಶರೀರ ಇರಲಿ ಹೋಗಲಿ, ನನಗೆ ಧರ್ಮ

ಪಾಲನೆಯೇ ಕರ್ತವ್ಯ—ಎಂಬ ಭವ್ಯನಿಶ್ಚಯ ಮಾಡಿದವನೇ ಎಂದಾದರೊಂದು ದಿನ ಈಶ್ವರನ ದರ್ಶನವನ್ನು ಪಡೆಯಬಲ್ಲ

ವ್ರತ ಹಿಡಿಯುವುದು ದೌರ್ಬಲ್ಯಸೂಚಕವಲ್ಲ, ಬಲಸೂಚಕ ಇಂಥದನ್ನು ಮಾಡುವುದು ಸರಿ ಎಂದಮೇಲೆ, ಮಾಡಲೇಬೇಕು, ನಿಶ್ಚಯವನ್ನೆ ವ್ರತ ಎನ್ನುತ್ತಾರೆ ಇದರಲ್ಲಿ ಬಲವಿದೆ ಇದನ್ನು ವ್ರತ ಎನ್ನಬೇಡಿ, ಬೇರೆ ಹೆಸರಿನಿಂದ ಕರೆದರೂ ಚಿಂತೆಯಿಲ್ಲ ಆದರೆ ಸಾಧ್ಯವಿದ್ದಷ್ಟು ಮಾಡುತ್ತೇನೆ ಎನ್ನುವವನು ತನ್ನ ಡೌರ್ಬಲ್ಯವನ್ನೋ ಅಭಿಮಾನವನ್ನೋ ತೋರಿಸುತ್ತಾನೆ ಅದನ್ನು ಅವನು ನಮ್ರತೆ ಎಂದರೂ ಅಷ್ಟೇ ಅದರಲ್ಲಿ ನಮ್ರತೆಯ ಗಂಧವೇ ಇಲ್ಲ. ನನ್ನ ಬಾಳಿನಲ್ಲಿಯೂ ಇತರರ ಬಾಳಿನಲ್ಲಿಯೂ ನೋಡಿದೇನೆ 'ಈ ಸಾಧ್ಯ ಇದ್ದಷ್ಟು' ಎಂಬ ಮಾತು ಶುಭನಿಶ್ಚಯದಲ್ಲಿ ವಿಷ ಬೆರೆಸಿಬಿಡುತ್ತದೆ. 'ಸಾಧ್ಯ ಇದ್ದಷ್ಟು' ಮಾಡುತ್ತೇನೆ ಎಂದರೆ ಇದಿರಿಗೆ ಬಂದ ಮೊಟ್ಟಮೊದಲನೆ ಆತಂಕಕ್ಕೆ ಸೋತುಬೀಳುತ್ತೇನೆ ಎಂದು 'ಸಾಧ್ಯವಿದ್ದಷ್ಟು ಸತ್ಯವಾಗಿ ನಡೆಯುತ್ತೇನೆ' ಎಂಬುದರಲ್ಲಿ ಅರ್ಥವೇ ಇಲ್ಲ ಇಂಥ ತಾರೀಖಿಗೆ ಇಷ್ಟು ಹಣವನ್ನು 'ಸಾಧ್ಯ ಇದ್ದಷ್ಟು' ತೀರಿಸುತ್ತೇನೆ ಎಂದು ಪತ್ರ ಬರೆದುಕೊಟ್ಟರೆ ಯಾರು ಹಣ ಕೊಡುತ್ತಾರೆ? ಅದೇ ರೀತಿ, ಸಾಧ್ಯವಿದ್ದಷ್ಟು ಸತ್ಯವನ್ನು ಪಾಲಿಸುತ್ತೇನೆ ಎಂಬ ಪತ್ರವೂ ದೇವರ ಅಂಗಡಿಯಲ್ಲಿ ನಡೆಯದು

ದೇವರು ಸ್ವಯಂ ನಿಶ್ಚಯದ, ವ್ರತದ ಸಂಪೂರ್ಣ ಮೂರ್ತಿ ಅವನ ನಿಯಮಗಳಿಗೆ ಒಂದು ಅಣುವಿನಷ್ಟಾದರೂ ತಪ್ಪಿದರೆ ಅವನ ಈಶ್ವರತ್ವವೇ ಉಳಿಯದು ಸೂರ್ಯ ಮಹಾವ್ರತಧಾರಿ ಅವನಿಂದಲೇ ಜಗತ್ತಿನ ಕಾಲದ ನಿರ್ಮಾಣ, ಅವನಿಂದಲೇ ಶುದ್ಧಪಂಚಾಂಗದ ರಚನೆ ಸಾಧ್ಯ. ಸೂರ್ಯ ಸದಾ ಮೂಡುತ್ತಾನೆ, ಮೂಡುತ್ತಲೇ ಇರುತ್ತಾನೆ ಆದುದರಿಂದಲೇ ನಾವು ಸುರಕ್ಷಿತರು ಸಮಸ್ತ ವ್ಯಾಪಾರಕ್ಕೂ ಆಧಾರ ಒಂದು ದೃಢಪ್ರತಿಜ್ಞೆ ವ್ಯಾಪಾರಿಗಳು ಪರಸ್ಪರ ಮಾತಿಗೆ ಕಟ್ಟುಬೀಳದಿದ್ದರೆ ವ್ಯಾಪಾರವೇ ನಿಂತುಹೋದೀತು ವ್ರತ ಸರ್ವವ್ಯಾಪಕ ಹೀಗಿರುವಾಗ ನಮ್ಮ ಜೀವನವನ್ನು ದೃಢಗೊಳಿಸುವ ಪ್ರಶ್ನೆ ಬಂದಾಗ, ಈಶ್ವರದರ್ಶನದ ಮಾತು ಬಂದಾಗ ನಮಗೆ ವ್ರತ ಅಗತ್ಯವಾಗುತ್ತದೆ ಆದುದರಿಂದ ವ್ರತಗಳ ಆವಶ್ಯಕತೆಯ ಬಗ್ಗೆ ನಮಗೆ ಎಳ್ಳಷ್ಟೂ ಸಂಶಯವಿರಲಾಗದು.

# ೧೫

# ಯಜ್ಞ – ೧

ನಾವು ಪದೇ ಪದೇ ಯಜ್ಞ ಎಂಬ ಮಾತನ್ನು ಬಳಸುತ್ತೇವೆ ನೂಲುವುದನ್ನು ದಿನಚರಿಯ ಮಹಾಯಜ್ಞವಾಗಿ ಮಾಡಿದೇವೆ ಆದುದರಿಂದ ಯಜ್ಞ ಶಬ್ದದ ನಾನಾ ಅರ್ಥಗಳನ್ನು ಅರಿತುಕೊಳ್ಳುವುದು ಅಗತ್ಯ

ಯಜ್ಞ ಎಂದರೆ ಯಾವ ಬಗೆಯ ಪ್ರತಿಫಲಾಪೇಕ್ಷೆಯೂ, ಐಹಿಕ-ಪಾರಮಾರ್ಥಿಕ ಯಾವುದೂ ಇಲ್ಲದೆ ಪರಹಿತಾರ್ಥವಾಗಿ ಮಾಡಿದ ಕರ್ಮ ಕರ್ಮ ಎಂದರೆ ಇಲ್ಲಿ ವ್ಯಾಪಕ ಅರ್ಥ, ವಿಚಾರ, ಮಾತು, ಕೃತಿ ಎಲ್ಲವೂ ಕರ್ಮ. ಪರ ಎಂದರೆ ಬರೀ ಮಾನವರಲ್ಲ, ಸಮಸ್ತ ಪ್ರಾಣಿಕೋಟಿ ಆದುದರಿಂದ ಮಾನವಜಾತಿಯ ಕಲ್ಯಾಣಕ್ಕಾಗಿಯಾದರೂ ಪ್ರಾಣಿಗಳನ್ನು ಆಹುತಿ ಕೊಡುವುದು ಯಜ್ಞವಲ್ಲ ಅಹಿಂಸೆಯ ದೃಷ್ಟಿಯಿಂದಲೂ ಅದು ಯಜ್ಞವಲ್ಲ ವೇದಗಳಲ್ಲಿ ಪಶುಯಜ್ಞದ ಪ್ರಸ್ತಾಪವಿದ್ದರೂ ಬಾಧಕವಿಲ್ಲ ಸತ್ಯ-ಅಹಿಂಸೆಗಳ ಒರೆಗಲ್ಲಿಗೆ ಇಂಥ ಯಜ್ಞ ನಿಲ್ಲಲಾರವು ನಮಗಷ್ಟೇ ಸಾಕು ನನಗೆ ವೇದಗಳ ಜ್ಞಾನವಿಲ್ಲ, ಒಪ್ಪಿಕೊಳ್ಳುತ್ತೇನೆ ಈ ಲೋಪದಿಂದ ನನಗೇನೂ ಚಿಂತೆಯಿಲ್ಲ ವೈದಿಕಸಮಾಜದಲ್ಲಿ ಈ ಬಗೆಯ ಪಶುಯಜ್ಞ ಇತ್ತು ಎಂದು ಸಿದ್ಧಮಾಡಿದರೂ, ಅಹಿಂಸೆಯ ಉಪಾಸಕನಿಗೆ ಅದೊಂದು ಮೇಲ್ಪಂಕ್ತಿಯಾಗಲಾರದು

ವಿಶಾಲವಾದ ಕ್ಷೇತ್ರದಲ್ಲಿ ಆದಷ್ಟು ಹೆಚ್ಚು ಜನರ ಕಲ್ಯಾಣಕ್ಕೆ ಸಹಾಯಕವಾಗಿರಬೇಕು, ಅನಾಯಾಸವಾಗಿ ಅತ್ಯಧಿಕ ಸಂಖ್ಯೆಯ ಜನ ಸ್ತ್ರೀಪುರುಷರು ಅದನ್ನು ಮಾಡುವಂತಿರಬೇಕು, ಇಂಥ ಕರ್ಮ-ಕೆಲಸ ಮಹಾಯಜ್ಞವಾಗಬಲ್ಲದು ಉತ್ತಮವಾದ ಒಂದರ ಕಲ್ಯಾಣಕ್ಕಾಗಿ ಇನ್ನೊಂದನ್ನು ಬಲಿಕೊಡುವುದು, ಆ ರೀತಿಯ ಯೋಚನೆ ಮಾಡುವುದು, ಯಜ್ಞವೇ ಅಲ್ಲ, ಮಹಾಯಜ್ಞದ ಮಾತೇನು ಬಂತು? ಗೀತೆ ಹೇಳುತ್ತದೆ, ಅನುಭವ ತೋರಿಸಿ ಕೊಡುತ್ತಿದೆ—ಯಜ್ಞಾರ್ಥವಾಗಿ ಮಾಡದಿದ್ದ ಕರ್ಮವೆಲ್ಲವೂ ಬಂಧನ

ಈ ಅರ್ಥದಲ್ಲಿ ಯಜ್ಞವಿಲ್ಲದೆ ಒಂದು ಗಳಿಗೆಯೂ ಈ ಲೋಕವಿರಲಾರದು. ಆದುದರಿಂದಲೇ ಗೀತೆ ಎರಡನೆಯ ಅಧ್ಯಾಯದಲ್ಲಿ ಸಾಂಖ್ಯ ಅಥವಾ

ಜ್ಞಾನವನ್ನು ಕುರಿತು ಹೇಳಿ, ಮೂರನೆಯ ಅಧ್ಯಾಯದಲ್ಲಿ ಆ ಜ್ಞಾನವನ್ನು ಪಡೆಯುವುದು ಹೇಗೆಂಬುದನ್ನು ಹೇಳುತ್ತದೆ ಈ ಸೃಷ್ಟಿ ಹುಟ್ಟಿದಾಗಲೇ ಯಜ್ಞವೂ ಹುಟ್ಟಿತು ಎಂದೂ ಘೋಷಿಸುತ್ತದೆ ಈ ದೇಹವನ್ನು ನಮಗೆ ಕೊಟ್ಟಿರುವುದು ಸಮಸ್ತ ಸೃಷ್ಟಿಯ ಸೇವೆಗಾಗಿ ಆದುದರಿಂದಲೇ ಯಜ್ಞ ಮಾಡದೆ ಹೊಟ್ಟೆಗೆ ತಿನ್ನುವವನನ್ನು 'ಕಳ್ಳ-ಅನ್ನ'ವನ್ನು ತಿಂದ ಎನ್ನುತ್ತದೆ ಗೀತೆ ಪವಿತ್ರ ಜೀವನವನ್ನು ನಡೆಸಬಯಸುವವನ ಪ್ರತಿಯೊಂದು ಕೃತಿಯೂ ಯಜ್ಞವಾಗಬೇಕು ಯಜ್ಞ ನಾವು ಹುಟ್ಟಿದಾಗಲೇ ಬಂತು ಆಜೀವವೂ ನಾವು ಸಾಲಗಾರರು ಜೀತದಾಳಿಗೆ ಅವನ ಧಣಿ ಅನ್ನ–ಬಟ್ಟೆ ಕೊಡುತ್ತಾನೆ. ಅದೇ ರೀತಿ ಜಗನ್ನಿಯಾಮಕ ನಮಗೆ ಕೊಟ್ಟುದನ್ನು ಕೃತಜ್ಞತೆಯಿಂದ ಸ್ವೀಕರಿಸಬೇಕು ನಮಗೆ ದೊರೆತುದು ಒಂದು ದಾನವೆಂದು ತಿಳಿಯಬೇಕು. ನಾವು ಸಾಲಗಾರರು ಸಾಲ ತೀರಿಸಿದುದಕ್ಕೆ ನಮಗೇನೂ ಬಹುಮಾನ ಕೊಡಬೇಕಾಗಿಲ್ಲ ಅದರಿಂದ ನಮಗೇನೂ ಸಿಗದಿದ್ದರೆ ಒಡೆಯನನ್ನು ತೆಗಳುವ ಕಾರಣವಿಲ್ಲ ನಮ್ಮ ದೇಹ ಅವನದು ಇದನ್ನು ಕಾಪಾಡಬಹುದು, ಬಿಸುಡಬಹುದು, ಅವನ ಇಷ್ಟ ಇದರಲ್ಲಿ ದೂರಿಗೂ ಅವಕಾಶವಿಲ್ಲ, ಕನಿಕರಕ್ಕೂ ಇಲ್ಲ ಭಗವಂತನ ಯೋಜನೆಯಲ್ಲಿ ನಮ್ಮ ಸ್ಥಾನವೇನೆಂಬುದನ್ನು ಅರಿತರೆ ಇದು ಸಹಜಸ್ಥಿತಿ, ಸಂತೋಷಕರ ಸ್ಥಿತಿ, ನಾವು ಬಯಸಬಹುದಾದುದು ಎನಿಸುತ್ತದೆ ಈ ಪರಮಾನಂದವನ್ನು ಅನುಭವಿಸಲು ಮನುಷ್ಯನಿಗೆ ಬಹಳ ದೃಢವಾದ ಭಕ್ತಿ ಬೇಕು 'ನೀನು ಎಳ್ಳಷ್ಟೂ ಚಿಂತಿಸಬೇಡ' ಎಂಬುದೇ ಎಲ್ಲಾ ಧರ್ಮಗಳ ಸಂದೇಶ

ಇದರಿಂದ ಯಾರೂ ಭೀತರಾಗಬೇಕಾದುದಿಲ್ಲ ಪರಿಶುದ್ಧ ಮನಸ್ಸಿನಿಂದ ಸೇವಾಪರಾಯಣನಾದವನಿಗೆ ದಿನೇ ದಿನೇ ಸೇವೆ ಎಷ್ಟು ಹೆಚ್ಚು ಹೆಚ್ಚು ಅಗತ್ಯ ಎಂಬುದು ತಿಳಿಯುತ್ತದೆ ಅವನ ಶ್ರದ್ಧೆ ದಿನವೂ ಬೆಳೆಯುತ್ತದೆ ಸ್ವಾರ್ಥವನ್ನು ಬಿಡದವನು ಸೇವಾಮಾರ್ಗವನ್ನು ತುಳಿಯಲೇ ಆರ ತಿಳಿದೋ ತಿಳಿಯದೆಯೋ ಪ್ರತಿಯೊಬ್ಬರೂ ಏನಾದರೊಂದು ಸೇವೆಮಾಡುತ್ತೇವೆ ಈ ಸೇವೆಯ ಅಭ್ಯಾಸವನ್ನೇ ಉದ್ದೇಶ್ಯಪೂರ್ವಕ ಮಾಡಿದರೆ, ನಮ್ಮ ಸೇವಾಸಕ್ತಿ ಕ್ರಮೇಣ ಬಲವಾಗುತ್ತದೆ ಅದರಿಂದ ನಮಗಷ್ಟೇ ಅಲ್ಲ, ಇಡೀ ಜಗತ್ತಿಗೇ ಆನಂದವಾಗುತ್ತದೆ.

# ೧೬

# ಯಜ್ಞ – ೨

ಯಜ್ಞವನ್ನು ಕುರಿತು ಕಳೆದ ವಾರ ಬರೆದೆ ಇನ್ನೂ ಬರೆಯಬೇಕು ಎನಿಸುತ್ತದೆ ಮಾನವಸೃಷ್ಟಿಯ ಜೊತೆಯಲ್ಲಿಯೆ ನಿರ್ಮಿತವಾದ ಈ ತತ್ತ್ವವನ್ನು ಇನ್ನೂ ಸ್ವಲ್ಪ ವಿಚಾರಮಾಡುವುದು ಯೋಗ್ಯವಾದೀತು ಯಜ್ಞ ಎಂದರೆ ಇಡೀ ದಿನ ಇಪ್ಪತ್ನಾಲ್ಕು ಗಂಟೆಯೂ ಮಾಡಬೇಕಾದ ಕರ್ತವ್ಯ–ಸೇವೆ ಅದರಿಂದಲೇ 'ಪರೋಪಕಾರಾಯ ಸತಾಂ ವಿಭೂತಯಃ' ಎಂಬ ಸೂತ್ರ ಅನುಚಿತ ಉಪಕಾರದಲ್ಲಿ ಅನುಗ್ರಹದ ವಾಸನೆಯಿದೆ ಏನೂ ಆಸೆಯಿಲ್ಲದೆ ಲೋಕಸೇವೆ ಮಾಡುವುದು ಯಾರ ಮೇಲೂ ಅನುಗ್ರಹವಲ್ಲ ಸಾಲ ತೀರಿಸಿದಾಗ ನಮ್ಮ ಭಾರವೇ ಕಡಮೆಯಾಯಿತು, ನಮ್ಮ ಕರ್ತವ್ಯಪಾಲನೆಯಾಯಿತು ಹಾಗೆಯೇ, ಸಜ್ಜನರು ಮಾತ್ರವೇ ಮಾನವಜಾತಿಗೆ ತಮ್ಮ ಶಕ್ತಿಸರ್ವಸ್ವವನ್ನು ಅರ್ಪಿಸಬೇಕೆಂದಲ್ಲ ಎಲ್ಲರೂ ಅರ್ಪಿಸಬೇಕು ಇದು ನಿಯಮವಾದರೆ ಬಾಳಿನಲ್ಲಿ ಭೋಗಕ್ಕೆ ಸ್ಥಾನವೇ ಇಲ್ಲ, ತ್ಯಾಗವೇ ಜೀವನಸೂತ್ರ ಮೃಗಗಳು ಬೇರೆ, ಮನುಷ್ಯ ಬೇರೆ ಎಂದು ಮಾಡುವುದು ಈ ತ್ಯಾಗದ ಧರ್ಮವೇ

ಹೀಗೆ ಅರ್ಥಮಾಡಿದರೆ ಬಾಳು ನೀರಸ, ಕಲಾವಿಹೀನ ಆಗುತ್ತದೆ ಗೃಹಸ್ಥನಿಗೆ ಅದರಲ್ಲಿ ಸ್ಥಾನವೇ ಇಲ್ಲದಾಗುತ್ತದೆ ಎನ್ನುತ್ತಾರೆ ಕೆಲವರು ತ್ಯಾಗ ಎಂದರೆ ಲೋಕವನ್ನು ಬಿಟ್ಟು ಕಾಡಿಗೆ ಹೋಗುವುದಲ್ಲ ಜೀವನದ ಸಮಸ್ತ ಕಾರ್ಯಗಳಲ್ಲಿಯೂ ತ್ಯಾಗವೃತ್ತಿ ಓತಪ್ರೋತವಾಗಿರಬೇಕು ಬಾಳು ಬರೀ ಭೋಗವಲ್ಲ, ಕರ್ತವ್ಯ ಎಂದು ತಿಳಿದ ಗೃಹಸ್ಥನ ಗಾರ್ಹಸ್ಥ್ಯ ಮುಳುಗಿ ಹೋಗದು. ತ್ಯಾಗಬುದ್ಧಿಯಿಂದ ಕೆಲಸ ಮಾಡುವ ವರ್ತಕನ ಕೈಯಲ್ಲಿ ಕೋಟಿಗಟ್ಟಲೆ ರೂಪಾಯಿ ಓಡಾಡೀತು ಆದರೆ ಅವನ ಶಕ್ತಿಯೆಲ್ಲ ಸೇವೆಗಾಗಿಯೆ ವಿನಿಯೋಗವಾಗುತ್ತದೆ. ಆದುದರಿಂದ ಅವನು ಮೋಸ ಮಾಡ, ಜೂಜಾಡ ಸರಳ ಜೀವನವನ್ನು ನಡೆಸಿಯಾನು ಲಕ್ಷಾಂತರ ಹಣ ಕಳೆದುಕೊಂಡರೂ ಚಿಂತೆಯಿಲ್ಲ ಒಂದು ಜೀವಂತ ಪ್ರಾಣಿಗೂ ಅವನು ಹಿಂಸೆ ಮಾಡ ಇಂಥ ವರ್ತಕ ಕೇವಲ ನನ್ನ ಕಲ್ಪನೆ ಎನ್ನಬೇಡಿ ಇಂಥ ವರ್ತಕರು ಬಹಳ ವಿರಳ, ಕೋಟಿಗೊಬ್ಬರು ಎಂಬುದು ನಿಜ. ಆದರೆ ಒಬ್ಬನಾದರೂ ಉದಾಹರಣೆಗಾಗಿ

ಇದ್ದರೆ, ಇದು ಕಲ್ಪನೆಯಲ್ಲ ವರ್ಧಮಾನಿನಲ್ಲಿ ಒಬ್ಬ ಉದಾರಿ ಸಿಂಪಿಗನಿದ್ದ, ನಾವೆಲ್ಲರೂ ಬಲ್ಲೆವು ಅಂಥ ಒಬ್ಬ ನಾಪಿತನನ್ನು ನಾನು ಬಲ್ಲೆ ಅಂಥ ನೇಕಾರನೊಬ್ಬನನ್ನು ನಾವೆಲ್ಲರೂ ಬಲ್ಲೆವು ಸ್ವಲ್ಪ ಆಳವಾಗಿ ವಿಚಾರಿಸಿದರೆ, ಜೀವನದ ಪ್ರತಿಯೊಂದು ಕ್ಷೇತ್ರದಲ್ಲಿಯೂ ಸರ್ವಸಮರ್ಪಣೆ ಮಾಡಿದ ಜನರು ಸಿಕ್ಕೇ ಸಿಗುತ್ತಾರೆ ಈ ಸರ್ವಸ್ವದಾನಿಗಳು ಕೆಲಸಮಾಡಿ ಬದುಕನ್ನು ನಡೆಸುತ್ತಾರೆ ಆದರೆ ಬದುಕು, ಅನ್ನ—ಅವರ ಗುರಿಯಲ್ಲ ಅವರು ಮಾಡುವ ಕೆಲಸದಿಂದ ಬದುಕು ಸಾಗುತ್ತದೆ, ಅನ್ನವು ಸಿಗುತ್ತದೆ ಮೋತೀಲಾಲ ಸಿಂಪಿಗ. ಕಡೆಯವರೆಗೂ ಸಿಂಪಿಗನಾಗಿಯೇ ಇದ್ದ ಆದರೆ ಅವನ ಮನೋವೃತ್ತಿ ಬದಲಾಯಿತು ಕೆಲಸ ಪೂಜೆಯಾಯಿತು ಲೋಕಕಲ್ಯಾಣವನ್ನು ಅವನು ಚಿಂತಿಸತೊಡಗಿದ ಅವನ ಬಾಳು ನಿಜವಾದ ಅರ್ಥದಲ್ಲಿ ಕಲಾಮಯವಾಯಿತು. ತ್ಯಾಗಮಯ ಜೀವನವೇ ಕಲೆಯ ಪರಾಕಾಷ್ಠೆ, ಪೂರ್ಣಾನಂದ ಇದು ಭಾರ, ಏನೋ ಕಾಟ ಎಂದು ತಿಳಿದರೆ ಅದು ಯಜ್ಞವಲ್ಲ ಭೋಗಸಾಧನೆಯಿಂದ ವಿನಾಶ, ತ್ಯಾಗಸಾಧನೆಯಿಂದ ಅಮರತ್ವ ಆನಂದಕ್ಕೆ ಪ್ರತ್ಯೇಕ ಅಸ್ತಿತ್ವವಿಲ್ಲ. ನಮ್ಮ ಜೀವನದೃಷ್ಟಿಯನ್ನು ಅದು ಅವಲಂಬಿಸಿದೆ ಒಬ್ಬನಿಗೆ ನಾಟಕದ ಪರದೆ ನೋಡಿದರೆ ಸಂತೋಷ ಇನ್ನೊಬ್ಬನಿಗೆ ಆಕಾಶದಲ್ಲಿ ಕ್ರೀಡಿಸುವ ನಿರಂತರ ನವೋನವ ದೃಶ್ಯಗಳನ್ನು ಕಂಡರೆ ಆನಂದ ಆನಂದ ವೈಯಕ್ತಿಕ, ರಾಷ್ಟ್ರೀಯ ಶಿಕ್ಷಣದ ವಿಷಯ ಹೇಗೆ ಕಲಿತರೆ ಹಾಗೆ ಮಕ್ಕಳಾಗಿದ್ದಾಗ ನಮಗೆ ಇಂಥದರಲ್ಲಿ ಆನಂದವಿದೆ ಎಂದು ಕಲಿಸಿದರೆ ದೊಡ್ಡವರಾದಮೇಲೆ ಅದೇ ಬೇರೆ ಬೇರೆ ರಾಷ್ಟ್ರೀಯ ಅಭಿರುಚಿಗಳನ್ನು ಇಲ್ಲಿ ಉದಾಹರಿಸಬಹುದು

ನಾವು ನಿಷ್ಕಾಮಸೇವೆ ಮಾಡುತ್ತಿದೇವೆ, ಜನರು ಕೊಟ್ಟುದನ್ನೆಲ್ಲ ನಾವು ಪರಿಗ್ರಹಿಸಬಹುದು—ನಮಗೆ ಅದು ಬೇಕಿರಲಿ ಬೇಡದಿರಲಿ—ಎಂದು ಕೆಲವರು ತ್ಯಾಗಿಗಳು ತಿಳಿದಿದಾರೆ ಈ ಅಭಿಪ್ರಾಯ ಹುಟ್ಟಿತೋ, ಆ ಮನುಷ್ಯ ಸೇವಕತನವನ್ನು ಬಿಟ್ಟು ಜನರ ಮೇಲೆ ಅಧಿಕಾರ ನಡೆಸುವ ಪಾಳೆಯಗಾರನಾಗುತ್ತಾನೆ.

ಸೇವಾಪರಾಯಣ ತನ್ನ ಅನುಕೂಲ ಅನನುಕೂಲಗಳ ಚಿಂತೆಯನ್ನು ಒಂದು ಗಳಿಗೆಯೂ ಮಾಡ. ಅದನ್ನೆಲ್ಲ ನೋಡಬೇಕಾದವನು ಭಗವಂತ. ಆದುದರಿಂದ ದಾರಿಯಲ್ಲಿ ದೊರೆತುದನ್ನೆಲ್ಲ ಅವನು ಪರಿಗ್ರಹಿಸ, ಎಷ್ಟು ಬೇಕೋ

ಅದನ್ನೇ ಉಳಿದುದನ್ನು ತ್ಯಜಿಸುತ್ತಾನೆ ಆವನು ಪರಮಶಾಂತ, ಕ್ರೋಧ ಮುಕ್ತ ಸಂಕಟ ಬಂದರೂ ಸೈರಣೆ ಕಳೆದುಕೊಳ್ಳಲಾರ ಪುಣ್ಯಕ್ಕೆ ಪುಣ್ಯವೇ ಫಲ ಹಾಗೇ ಸೇವೆಗೆ ಸೇವೆಯೇ ಫಲ ಎಂದರಿತು ಅವನು ಸಂತುಷ್ಟನಾಗಿರುತ್ತಾನೆ

ಸೇವೆಯಲ್ಲಿ ಅಶ್ರದ್ಧೆ, ಆಲಸ್ಯ ಕೂಡದು ತನ್ನ ಸ್ವಂತ ಕೆಲಸವಾದರೆ ಶ್ರದ್ಧೆಯಿಂದ ಮಾಡಬೇಕು, ಸ್ವಲಾಭವಿಲ್ಲದ ಸಾರ್ವಜನಿಕ ಕೆಲಸವನ್ನು ಹೇಗೆ ಮಾಡಿದರೂ ಸರಿಯೆ, ಯಾವಾಗ ಮಾಡಿದರೂ ಸರಿಯೆ ಎನ್ನುವವನಿಗೆ ಯಜ್ಞ ಶಾಸ್ತ್ರದ ಓನಾಮವೇ ಗೊತ್ತಿಲ್ಲ ಪರಾರ್ಥವಾಗಿ ಮಾಡಿದ ಸ್ವಯಂಸೇವೆ ಸ್ವಂತ ಕಾರ್ಯಕ್ಕಿಂತ ಹೆಚ್ಚಿನದು ತನ್ನ ಅತ್ಯುತ್ತಮ ಶಕ್ತಿಸಾಮರ್ಥ್ಯದಿಂದ ಅದನ್ನು ಮಾಡಬೇಕು ಶುದ್ಧಭಕ್ತ ಯಾವ ಬಗೆಯ ಊನವೂ ಇಲ್ಲದೆ ಮಾನವಸೇವೆಗಾಗಿ ಸರ್ವಾರ್ಪಣೆ ಮಾಡುತ್ತಾನೆ ಅವನೇ ಶುದ್ಧಭಕ್ತ

---

## ವ್ರತಶ್ಲೋಕ

**ಅಹಿಂಸಾ ಸತ್ಯ ಅಸ್ತೇಯ ಬ್ರಹ್ಮಚರ್ಯ ಅಸಂಗ್ರಹ ।**
**ಶರೀರಶ್ರಮ ಅಸ್ವಾದ ಸರ್ವತ್ರ ಭಯವರ್ಜನ ॥**

**ಸರ್ವಧರ್ಮೀ ಸಮಾನತ್ವ ಸ್ವದೇಶೀ ಸ್ಪರ್ಶಭಾವನಾ ।**
**ಹೀ ಏಕಾದಶ ಸೇವಾವೀ ನಮ್ರತ್ವೇ ವ್ರತನಿಶ್ಚಯೇ ॥**

---

# ಅಧ್ಯಯನ ಗ್ರಂಥಗಳು

| | |
|---|---|
| ಗೀತಾಪ್ರವಚನ | —ಆಚಾರ್ಯ ವಿನೋಬಾ |
| ಸ್ಥಿತಪ್ರಜ್ಞ ದರ್ಶನ | ,, |
| ಈಶಾವಾಸ್ಯವೃತ್ತಿ | ,, |
| ಉಪನಿಷತ್ತುಗಳ ಅಧ್ಯಯನ | ,, |
| ಪರ್ಣಕುಟಿ | —ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ |
| ಬಾಪೂ | —ಶ್ರೀ ಜಿ. ಡಿ ಬಿರ್ಲಾ |
| ಭಾರತ ಭಾಗ್ಯವಿಧಾತ | —ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು |
| ಸತ್ಯಾಗ್ರಹ | —ಶ್ರೀ ರಂ ರಾ. ದಿವಾಕರರು |
| ಗಾಂಧೀ ವಿಚಾರ ದೋಹನ | —ಶ್ರೀ ಕಿ ಘ. ಮಶ್ರೂವಾಲಾ |

ಇತ್ಯಾದಿ.

---

## A Few Navajivan Publications in English

(1) **Satyagraha in South Africa**
—By M. K Gandhi
Pages xv, 351 Price Rs 4/-
Cheap Edition : Rs 3/-

(2) **The Gospel of Selfless Action**
**or**
**The Gita According to Gandhi**
Pages vi, 392 Price Rs 4/-
Cheap Edition Rs 3/-

(3) **Mahatma Gandhi** — Last Phase (Vol I)
—By Pyarelal
Price . Rs 20/-

(4) **Mahatma Gandhi** — Last Phase (Vol II)
—By Pyarelal
Price Rs 20/-

(5) **Satyagraha in Champaran**
—By Dr Rajendra Prasad
Pages xii, 224 Price Rs. 2-25

(6) **Truth is God**
—By M. K. Gandhi
Pages iv, 168 Price Re. 1/-

(7) **An Autobiography**
—By M. K Gandhi
Popular Edition · Rs. 2/-